# ನಿನ್ನವರು ಯಾರು ಈ ಮೂವರೊಳಗೆ...?

ಪದ್ಮಾ ಶ್ರೀಧರ್

ಸೌಮ್ಯ ಎಂ.
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು,
761, 8ನೇ ಮುಖ್ಯರಸ್ತೆ 3ನೇ ಬ್ಲಾಕ್,
ಕೋರಮಂಗಲ, ಬೆಂಗಳೂರು - 560034.

NINNAVARU YARU EE MUVAROLAGE...? - A Novel by Padma Shridhar, Published by Sowmya M., No. 761, 8th Main, 3rd Block, Koramangala, Basavanagudi, Bangalore-560034.

ಪುಟಗಳು : 220

ಮುದ್ರಣ : 2005



ಬೆಲೆ: ರೂ. 120-00

ಮುಖಪುಟ ವಿನ್ಯಾಸ :

ಅಕ್ಷರ ಜೋಡಣೆ : ಡೇಟಾ ಸೆಲ್ಯೂಷನ್ಸ್
ಫೋನ್ : 98865 33972, 26500945

ಮುದ್ರಕರು : ಅಶ್ವಿನಿ ಪ್ರಿಂಟರ್ಸ್
ಬೆಂಗಳೂರು.

# ಲೇಖಕಿಯ ನುಡಿ

ನಲ್ಮೆಯ ಓದುಗರಿಗೆ,

ನಮಸ್ಕಾರಗಳು. ''ನಿನ್ನವರು ಯಾರು ಈ ಮೂವರೊಳಗೆ...?'' ಒಂದು ಸಾಮಾಜಿಕ ಕಾದಂಬರಿ. ಒಂದು ಕುಟುಂಬದ ದಿಟ್ಟ ಹೆಣ್ಣಿನ ಸುತ್ತ ಹೆಣೆದಿರುವ ಕತೆ. ಹೆಣ್ಣು ಎಂದೊಡನೆ, ತನ್ನ ಆಸೆಗಳನ್ನೆಲ್ಲಾ ಅದುಮಿಟ್ಟುಕೊಂಡು ನರಳುವವಳಲ್ಲ, ಅಥವಾ ಬಣ್ಣದ ಚಿಟ್ಟೆಯಂತೆ ಹೂವಿನಿಂದ ಹೂವಿಗೆ ಹಾರುವವಳೂ ಅಲ್ಲ. ತನಗೆ ಸರಿ ಎನಿಸಿದ್ದನ್ನು ಮಾಡುವವಳು, ನೋವಿನಲ್ಲೂ ನಲಿವನ್ನು ಹುಡುಕುವವಳು. ಅಂತಹ ಒಬ್ಬ ಯುವತಿಯ ನೋವು, ನಲಿವೇ ಈ ಕಾದಂಬರಿಯ ಕಥಾವಸ್ತು.

ಈ ಕಥಾನಾಯಕಿಯ ನೋವು ನಲಿವು ಒಂದು ಸಾಮಾಜಿಕ ಸಮಸ್ಯೆ ಅಲ್ಲ, ಆದರೆ ಇಂತಹ ಹೆಣ್ಣುಮಕ್ಕಳು ಇಲ್ಲ ಎನ್ನುವುದನ್ನು ಅಲ್ಲಗಳೆಯುವಂತೆಯೂ ಇಲ್ಲ. ಈ ಯುಗದಲ್ಲಿ ಅನೇಕ ಹೆಣ್ಣು ಮಕ್ಕಳು ಅನೇಕ ತರಹದ ಪೇಚಾಟ, ತೊಂದರೆಗಳಿಗೆ ಸಿಕ್ಕಿಬೀಳುತ್ತಾರೆ. ಅನೇಕ ದುರಂತಗಳು ನಡೆಯುತ್ತವೆ. ಆದರೂ ಇಲ್ಲಿ ಈ ಕತೆಯನ್ನು ಯಾರನ್ನೂ ಕುರಿತು ಬರೆದುದಲ್ಲ. ಅಥವಾ ಯಾರಿಗೂ ನೋವನ್ನುಂಟು ಮಾಡುವ ಉದ್ದೇಶ ನನಗಿಲ್ಲ ಎಂದು ಸ್ಪಷ್ಟವಾಗಿ ತಿಳಿಸುತ್ತೇವೆ. ನನಗೆ ಅನಿಸಿದ್ದನ್ನು ಕಥನಲೋಕಕ್ಕೆ ಇಳಿಸಿ, ನಾಯಕಿಯ ಸುತ್ತ ಪೋಷಕಪಾತ್ರಗಳನ್ನು ಸೃಷ್ಟಿಸಿ, ನಾನು ಸ್ವಂತವಾಗಿ ರಚಿಸಿರುವ ಕಾದಂಬರಿ ಇದು. ಓದುಗರಿಗೆ ಮೆಚ್ಚುಗೆಯಾದರೆ ಅದರಿಂದ ನನಗೆ ಖುಷಿ ಸಿಗುತ್ತದೆ.

ಎಂದಿನಂತೆ ಈ ಮೊದಲು ಪ್ರಕಟವಾದ ನನ್ನ ಕಾದಂಬರಿಗಳನ್ನು ಮೆಚ್ಚಿಕೊಂಡ ಓದುಗರಿಗೆ ಈ ಕೃತಿಯು ಹಿಡಿಸುತ್ತದೆ ಎಂಬ ನಂಬಿಕೆ ನನ್ನದು.

ಕಾದಂಬರಿಯನ್ನು ಸುಂದರವಾಗಿ ಮುದ್ರಿಸಿಕೊಟ್ಟ ಮುದ್ರಕರಿಗೂ, ಪ್ರಕಾಶನದ ಹೊಣೆಯನ್ನು ಹೊತ್ತ ಪ್ರಕಾಶಕರಿಗೂ ನನ್ನ ಕೃತಜ್ಞತೆಗಳು.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,

ಪದ್ಮಾ ಶ್ರೀಧರ್

## ಪ್ರಕಾಶಕರ ನುಡಿ

''ನಿನ್ನವರು ಯಾರು ಈ ಮೂವರೊಳಗೆ...?'' ಈ ಸಾಮಾಜಿಕ ಕಾದಂಬರಿಯು ದಿಟ್ಟ ಹೆಣ್ಣು ಅನುಭವಿಸುವ ಪೇಚಾಟ, ತೊಂದರೆ, ದುರಂತಗಳ ಮನಮುಟ್ಟುವಂತಹ ನಿರೂಪಣೆಯನ್ನು ಹೊಂದಿದ್ದು ಇಂದಿನ ಸಮಾಜದ ಮಹಿಳೆಯ ಮನಸ್ಸಿನ ತುಮುಲ, ತೊಳಲಾಟಗಳನ್ನು ಹೃದಯಸ್ಪರ್ಶಿಯಾಗಿ ಚಿತ್ರಿಸುತ್ತದೆ.

ಲೇಖಕಿ ಶ್ರೀಮತಿ ಪದ್ಮಾ ಶ್ರೀಧರ್ ರವರಿಗೆ, ಅಕ್ಷರ ಜೋಡಣೆ ಮಾಡಿಕೊಟ್ಟ ಡೇಟಾ ಸೆಲ್ಯೂಷನ್ಸ್‌ನ ಚಂದನ ಜೈಕುಮಾರ್‌ರವರಿಗೂ, ಮತ್ತು ಮುದ್ರಣ ಜವಾಬ್ದಾರಿ ಹೊತ್ತ ಸ್ಟ್ಯಾಂಡರ್ಡ್ ಪ್ರಿಂಟರ್ಸ್ ಇವರೆಲ್ಲರಿಗೂ ಕೃತಜ್ಞತೆಗಳು.

ಬೆಂಗಳೂರು.

ಎಂ.ಸೌಮ್ಯಂ
ಪ್ರಕಾಶಕರು

# ನಿನ್ನವರು ಯಾರು ಈ ಮೂವರೊಳಗೆ...?

''ಮಾಲೀ, ಮಾಲೀ...'' ಎಂದು ಕರೆಯುತ್ತಾ ಸರಸರನೆ ಮೆಟ್ಟಿಲುಗಳನ್ನಿಳಿದು ಬಂದ ಮಧು ಅಲ್ಲಿಯೇ ಕುಳಿತಿದ್ದವಳ ಬಳಿಗೆ ಬಂದು ನಿಂತ. ಅವಳು ಕತ್ತೆತ್ತಿ ನೋಡಿದಳು.

''ಇಲ್ಲೇ ಕೂತಿದೀಯ... ಕರೆದ್ರೂ ಆಂ ಅನ್ನೋಕಾಗುಲ್ವಾ ನಿನಗೆ ?'' ಮುಖ ಸಿಂಡರಿಸಿ ನುಡಿದ.

''ನನ್ನನ್ನ ಕರೆದ್ಯಾ?.... ನನಗೆ ಕೇಳಿಸ್ಲೇ ಇಲ್ಲ...'' ಉದಾಸೀನವಾಗಿ ನುಡಿದಾಗ ಅವನಿಗೆ ರೇಗಿತ್ತು.

''ಈ ತಮಾಷೆ ನನಗಿಷ್ಟವಾಗುಲ್ಲ ಮಾಲೀ... ಕರೆದಿದ್ದು ಕೇಳಿಸಿದ್ರೂ ನಿನಗೆ ದುರಹಂಕಾರ...''

''ಷಟಪ್ ಮಧು... ನನ್ನನ್ನೇ ಕರೆದೆ ಅಂತ ಸುಳ್ಳು ಹೇಳಬೇಡ'' ಅವಳೂ ತಿರುಗಿಸಿ ನುಡಿದಳು.

''ಮಾಲೀ ಅಂತ ನಿನ್ನನ್ನ ಅಲ್ಲದೇ ಇನ್ಯಾರನ್ನ ಕರೀತಾರೆ ಈ ಮನೇಲಿ... ಬೇಕೂಂತ ಹೀಗಾಡ್ತಿದೀಯ. ಈಚೀಚೆಗೆ ನಿನ್ನ ಜಂಭ ಹೆಚ್ಚಾಗ್ತಿದೆ.''

''ಜಂಭ ಬಂದಿರೋದು ನಿನಗೆ, ನನಗಲ್ಲ, ಮಾಲೀ ಗೀಲಿ ಅಂತ ಕರೆಯಬೇಡ ಅಂತ ಅವತ್ತೇ ಹೇಳಿರಲಿಲ್ವಾ ನಿನಗೆ ನಾನು?''

''ಎಲ್ಲಿ ಹೇಳಿದ್ದೆ? ಯಾವತ್ತು ಹೇಳಿದ್ದೆ? ಏನೇನೋ ಬೊಗಳಬೇಡ... ನಿನಗೆ ನನ್ನ ಮೇಲೆ ಗೌರವಾನೇ ಇಲ್ಲ ತುಥ್''

''ಸುಮ್ಮನೇ ಕಾಲು ಕೆರೆದು ಜಗಳ ಆಡಬೇಡ... ನೀನು ದೊಡ್ಡೋನು ಅಂತ ನಿನಗೆ ನಾನು ಸಾಕಷ್ಟು ಮರ್ಯಾದೆ ತೋರಿಸ್ತೀನಿ. ನಿನಗೇ ನನ್ನ ಮೇಲೆ ಪ್ರೀತಿ ಇಲ್ಲ...''

''ನೋಡು ಪ್ರೀತಿ ಇಲ್ಲ... ಹಾಗೇ ಹೀಗೇ ಅಂತ ಆಕ್ಷೇಪಣೆ ಮಾಡಬೇಡ. ನಾನು ನಿನ್ನನ್ನ ಚೆನ್ನಾಗಿಯೇ ನೋಡಿಕೊಳ್ತಿದೀನಿ... ನೀನೇ ಆ ತಲೆತಿರುಕನ ಜೊತೆ ಸೇರಿ..... ಹೋಗಲಿ ಬಿಡು... ನಾನು ಏನೋ ಹೇಳೋಣ ಅಂತ ಕರೆದ್ರೆ... ಮಾತಿಗೆ ಮಾತು ಆಡಿ ನನ್ನ ಮೂಡ್‌ನೇ ಕೆಡಿಸಿಬಿಡ್ತೀಯ...''

''ಹೌದು ನಾನು ಹಾಗೇನೇ... ಹೇಳೋಕೆ ಇಷ್ಟವಿದ್ದರೆ ಒದರಿ ಹೋಗು...'' ಮಧುಕರ ಹಲ್ಲು ಕಡಿದ... ಆದರೂ ಕೋಪವನ್ನೂ ನುಂಗಿದ. ಅವಳು ಅವನ ಕಡೆ ನೋಡುತ್ತಿರಲಿಲ್ಲವಾದುದರಿಂದ, ತಾನೇ ಮೆತ್ತಗಾದ.

''ನನ್ನ ಫ್ರೆಂಡ್ ಧ್ರುವ ಗೊತ್ತಲ್ವಾ ?...'' ಎನ್ನುತ್ತಾ ಅವಳ ಪಕ್ಕದಲ್ಲಿ ಕುಳಿತ.

''ನಂಗೊತ್ತಿಲ್ಲ'' ಅವಳು ಸಿಡಾರನೆ ನುಡಿದಾಗ, ಅವಳನ್ನೇ ಕೆಕ್ಕರಿಸಿ ನೋಡಿದ. ಕೆನ್ನೆಗೆ ಬಾರಿಸಬೇಕೆನ್ನಿಸಿತು. ಆದರೆ ಇದು ಸಮಯವಲ್ಲವೆಂದುಕೊಂಡು ನೀಳವಾಗ ಉಸಿರನ್ನು ಬಿಟ್ಟು ಅವಳ ಭುಜದ ಮೇಲೆ ಕೈಯನ್ನಿಟ್ಟ.

''ಏನು? ಏನಿವತ್ತು? ಇಷ್ಟು ಪ್ರೀತಿಯನ್ನು ತೋರಿಸ್ತಿದೀಯ ನಿನ್ನ ತಂಗಿಯ ಮೇಲೆ...'' ಅವಳು ವ್ಯಂಗ್ಯವಾಗಿ ನುಡಿದು, ಭುಜದಿಂದ ಅವನ ಕೈಗಳನ್ನು ಸರಿಸಿದಳು.

''ಯಾಕೆ ಹೀಗಾಡ್ತೀಯ ಮಾಲೀ... ನಾನು ನಿನ್ನ ಅಣ್ಣ ಕಣೇ...''

''ಪ್ಲೀಸ್. ಮಾಲೀ ಅಂತ ಕೂಗಬೇಡ. ನನಗೆ ಇಷ್ಟವಾಗುಲ್ಲ...''

''ಮತ್ತೆ ಅದೇ ಮಾತಾಡ್ತೀಯಲ್ಲ...''

''ವನಮಾಲಾ ಅಂತ ಮರ್ಯಾದೆಯಿಂದ ಕರೆಯೋದಾದ್ರೆ ಕರಿ... ಅದು ಬಿಟ್ಟು ಮಾಲಿಯಂತೆ ಮಾಲೀ... ನನಗೆ ಅಸಹ್ಯವಾಗುತ್ತೆ...''

''ಅಸಹ್ಯ ಯಾಕೇ... ಮೊದಲ್ನಿಂದ ಎಲ್ಲರೂ ಕರೆಯುತ್ತಿದ್ದುದು ಹಾಗೇ ತಾನೇ...''

''ಈ ಮನೆಯ ಗಾರ್ಡನ್ ಕೆಲಸ ಮಾಡೋಕೆ ಬರೋನು ಮಾಲಿ... ಬೀದಿ ಗುಡಿಸೋಕೆ ಬರೋನು ಝಾಡಮಾಲಿ... ನನಗೆ ಒಂಥರಾ ಆಗುತ್ತೆ.....''

''ಓ...'' ಬಲವಂತವಾಗಿ ಮಧುಕರ ನಕ್ಕು ತಂಗಿಯ ಜಡೆ ಎಳೆದ. ''ಏನು ಸಿಲ್ಲೀನೇ ನೀನು... ಹಾಗೆಲ್ಲಾ ಯಾಕೆ ಅರ್ಥ ಮಾಡ್ಕೋತೀಯೇ... ಹೋಗಲಿ ಬಿಡು... ಇವತ್ತಿನಿಂದ ಮಾಲಾ ಅಂತ ಕರೀತೀನಿ. ವನಮಾಲಾ ಅನ್ನೋದು ತುಂಬಾ ಉದ್ದ ಆಯ್ತು.''

''ಬಿಡು ನನ್ನ ಜಡೇನ... ಈಗ ಏನಾಗಬೇಕು ನನ್ನಿಂದ...?''

''ಯಾತಕ್ಕೆ ನಿನ್ನನ್ನ ಕರೆದೇ ಅನ್ನೋದನ್ನೇ ಮರೆಸಿಬಿಟ್ಟೆ ನೀನು...''

''ಅದ್ಯಾರೋ ನಿನ್ನ ಫ್ರೆಂಡ್ ವಿಚಾರ ಹೇಳೋಕೆ ಹೊರಟಿದ್ದೆ...''

''ಎಸ್. ಎಸ್.... ನನಗಿಂತ, ನಿನ್ನ ಮೆಮರಿ ಪವರ್ ಚೆನ್ನಾಗಿದೆ. ಧ್ರುವ ಮುಂಬೈನಿಂದ ಫೋನು ಮಾಡಿದ್ದ...''

''ಅದಕ್ಕೆ ನಾನು ಏನ್ಮಾಡ್ಬೇಕು?'' ಅವಳು ಅನಾದರಣೆಯಿಂದ ಕೇಳಿದಾಗ ಬಲವಂತವಾಗಿ ನಕ್ಕ.

''ಮೈಡಿಯರ್ ಸಿಸ್ಟರ್... ಧ್ರುವ, ಅವನ ತಾಯಿ ಇಬ್ಬರೂ ನಮ್ಮ ಮನೆಗೆ ಬರ್ತಿದಾರಂತೆ......''

''ಗುಡ್. ಬರಲಿ....''

''ಅವರುಗಳು ಬಂದಾಗ, ನೀನು ಮನೇಲೇ ಇರಬೇಕು. ಅದಕ್ಕೇ ಹೇಳ್ತಾ ಇರೋದು.''

''ನಾನ್ಯಾಕಪ್ಪಾ...? ಅವನು ನಿನ್ನ ಫ್ರೆಂಡು....''

''ಹಾಗೆನ್ನಬೇಡ ಮಾಲಾ... ಅವನ ತಾಯೀನೂ ಬರ್ತಿದಾರೆ... ನೀನು ಇದ್ದರೆ ಚೆನ್ನ ಅಲ್ವಾ?... ಬೇರೆ ಯಾರೂ ಹೆಂಗಸರಿಲ್ಲವಲ್ಲ.''

''ನನಗೆ ಇದೆಲ್ಲ ಅಭ್ಯಾಸವಿಲ್ಲಪ್ಪಾ... ಅವರು ಯಾಕೆ ಬರಬೇಕು?''

''ಬರ್ತಿದೀವಿ ಅಂತ ಹೇಳಿದೋರನ್ನ ಯಾಕೆ ಬರ್ತಿದೀರಿ ಅಂತ ಕೇಳ್ಲೋಕೆ ಆಗುತ್ತಾ? ಪ್ಲೀಸ್, ಇದೊಂದು ಸಾರಿ ಅಷ್ಟೇ... ನಾನು ಇನ್ನೆಂದೂ ಹೀಗೆ ಕಮಿಟ್ ಮಾಡ್ಕೊಳ್ಳಲ್ಲ...''

''ನೋಡೋಣ... ನನಗೆ ಯೋಚಿಸುಕ್ಕೆ ಟೈಂ ಬೇಕು...''

''ಸಿಲ್ಲಿಗರ್ಲ್... ಟೈಂ ಯಾಕೆ? ಎಸ್ ಅಂದ್ರೆ ಎಸ್ ಅಷ್ಟೇ... ಅಂದ್ಹಾಗೇ ಭಾರ್ಗವ ಇನ್ನೂ ಮನೆಗೆ ಬಂದಿಲ್ವಾ?''

''ಎಲ್ಲೋ ಹೊರಗೆ ಹೋಗಿದಾನೆ'' ತಕ್ಷಣವೇ ಉತ್ತರಿಸಿದಳು. ಅವಳು ಕತ್ತೆತ್ತಿರಲಿಲ್ಲ. ಅವಳನ್ನೇ ಸಂಶಯದಿಂದ ನೋಡಿ, ಅಲ್ಲಿಂದ ಸರಿದ.

* * * *

ಮಧುಕರ, ವನಮಾಲಾ ಇಬ್ಬರೂ ಅಣ್ಣ ತಂಗಿಯರು. ಮಧು ಮಾಲಾಳಿಗಿಂತ ಐದು ವರ್ಷಕ್ಕೆ ದೊಡ್ಡವನು. ಮಾಲಾ ಹುಟ್ಟಿದಾಗ, ಮಧು ಖುಷಿಯಿಂದ ಚಪ್ಪಾಳೆ ತಟ್ಟಿದ್ದ. ತನ್ನೊಂದಿಗೆ ಆಟವಾಡಲು ಒಂದು ಜೀವಂತವಾದ ಬೊಂಬೆ ಸಿಕ್ಕಿತೆಂದು ಭಾವಿಸಿದ್ದ. ಆದರೆ ತಂದೆ ತಾಯಿಯರ ಗಮನ ಹೊಸ ಮಗುವಿನ ಮೇಲೇ ಇರುತ್ತಿದ್ದುದನ್ನು ಕಂಡಾಗ ಮನ ಮುದುಡುತ್ತಿತ್ತು. ಅಸೂಯೆಯೂ ಉಂಟಾಗುತ್ತಿತ್ತು. ಒಮ್ಮೊಮ್ಮೆ ತೊಟ್ಟಿಲಿನಲ್ಲಿ ಮಲಗಿ ನಿದ್ರಿಸುತ್ತಿದ್ದ ಪುಟ್ಟ ಪಾಪುವನ್ನು ಚಿವುಟಿ ಅಳಿಸುತ್ತಿದ್ದ. ಏನೋ ಒಂದು ತರಹದ ಸಮಾಧಾನದಿಂದ ನಗುತ್ತಿದ್ದ. ತಾಯಿ ಸರೋಜ ಗದರಿಸುತ್ತಿದ್ದಳು.

''ಹೀಗ್ಯಾರಾದ್ರೂ ಮಾಡ್ತಾರಾ ಮಧು ? ಅವಳು ನಿನ್ನ ತಂಗಿ. ಅವಳನ್ನು ಎತ್ತಿ ಮುದ್ದಾಡಬೇಕು. ಆಟ ಆಡಿಸಬೇಕು... ಅದು ಬಿಟ್ಟು ಮಗುವಿಗೆ ನೋವು ಮಾಡ್ತೀಯಲ್ಲ'' ಅವನು ಪೆಚ್ಚಾಗಿ ದೂರ ಸರಿದು ಒಂದು ಕಡೆ ನಿಲ್ಲುತ್ತಿದ್ದ. ತಂದೆ ಸದಾಶಿವ ಆಫೀಸಿನಿಂದ ಬರುವುದನ್ನೇ ಕಾದಿದ್ದು, ತಾಯಿಯ ಮೇಲೆ ಚಾಡಿ ಹೇಳುತ್ತಿದ್ದ.

''ಮಮ್ಮೀ ಬೈದಳು...'' ಸದಾಶಿವ ಮಗನನ್ನು ಅಪ್ಪಿ ಮುದ್ದಾಡುತ್ತಿದ್ದ. ಮಗನಿಗೆಂದು ತಂದಿದ್ದ ಚಾಕಲೇಟ್ ಬಾರ್‌ನ್ನು ಕೊಟ್ಟು ಸಮಾಧಾನಗೊಳಿಸುತ್ತಿದ್ದ. ಈ

ಚಾಕ್‌ಲೇಟಿನ ಆಸೆಗೆ ಎಂಬಂತೆ ಹೆಚ್ಚು ಕಡಿಮೆ ದಿನಾ ತಂಗಿಯನ್ನು ಗೋಳು ಹೊಯ್ದು ಕೊಂಡು ತಾಯಿಯ ಮೇಲೆ ಚಾಡಿ ಹೇಳುತ್ತಿದ್ದ. ಇದು ಒಂದು ಆಟ ಎಂಬಂತೆ ಆಗಿತ್ತು.

ಮಾಲಾಳಿಗೆ ಒಂದು ವರ್ಷ ತುಂಬುವುದರೊಳಗೆ ಸರೋಜ ಮತ್ತೆ ಗರ್ಭಿಣಿ ಆಗಿದ್ದಳು. ''ನಮಗೆ ಎರಡು ಮಕ್ಕಳು ಸಾಕು ಸರೋಜ. ಅಬಾರ್ಷನ್ ಮಾಡಿಸ್ಕೋ... ಆಮೇಲೆ ನಾವು ಹುಶಾರಾಗಿರೋಣ'' ಸದಾಶಿವನ ಮಾತಿಗೆ ಇಲ್ಲವೆನ್ನಲಾಗದೇ, ಸರೋಜ ಡಾಕ್ಟರರನ್ನು ಭೇಟಿಯಾದಳು. ಆದರೆ ಅದೇ ಅವಳಿಗೆ ಗಂಡಾಂತರವಾಗಿ ಪರಿಣಮಿಸಿತು. ಗರ್ಭಸ್ರಾವ ನಿಲ್ಲದೆ ಅವಳು ತೀರಿ ಹೋದಳು. ಇದು ಸದಾಶಿವನನ್ನು ಕಂಗೆಡಿಸಿತು. ತನ್ನ ಹೆಂಡತಿಯ ಸಾವಿಗೆ ತಾನೇ ಕಾರಣ ಎಂಬಂತೆ ಕೊರಗಲಾರಂಭಿಸಿದ. ಅವನ ಅಕ್ಕ ಹಾಗೂ ಅಣ್ಣಂದಿರು ಎಷ್ಟೇ ಸಮಾಧಾನ ಹೇಳಿದರೂ ಅವನಿಗೆ ಸಮಾಧಾನವಾಗಿರಲಿಲ್ಲ. ಎರಡು ತಿಂಗಳು ಅವನ ಮನೆಯಲ್ಲಿಯೇ ಇದ್ದ ಅವನ ಅಕ್ಕ ಅವನ ಎರಡನೇ ಮದುವೆಗೆ ತಯಾರಿ ನಡೆಸಿದಾಗ ಅವನು ಎಚ್ಚೆತ್ತ.

''ನನ್ನನ್ನ ಒಂದು ಮಾತು ಕೇಳದೇ.... ನೀನು ಹೀಗೆಲ್ಲಾ ಮಾಡಬಾರದಾಗಿತ್ತು'' ಅಕ್ಕನನ್ನು ದೂಷಿಸಿದ.

''ನೀನು ಇನ್ನು ಚಿಕ್ಕವನು, ಮಕ್ಕಳೂ ಚಿಕ್ಕವರು, ನಾನು ಸದಾಕಾಲ ನಿನ್ನ ಮನೇಲೇ ಇರೋಕೆ ಆಗುತ್ತಾ? ನಿನ್ನ ಸಂಸಾರವನ್ನು ಸರಿ ಮಾಡಿ, ನಾನು ನನ್ನ ಮನೆಗೆ ಹೋಗ್ತೀನಿ.''

''ನಾನು ಸರೋಜಂಗೆ, ಅವಳ ಮಕ್ಕಳಿಗೆ ದ್ರೋಹ ಮಾಡುವುದಿಲ್ಲ, ನಾನು ಮತ್ತೆ ಮದುವೆ ಆಗುವುದಿಲ್ಲ''

''ಇದರಲ್ಲಿ ದ್ರೋಹ ಏನ್ಬಂತು? ನೀನು ಗಂಡಸು. ಹೊರಗೆ ದುಡಿಯುವವನು... ಮನೇಲಿ ಒಂದು ಹೆಣ್ಣು ದಿಕ್ಕು ಬೇಡವೆ? ನಿನಗೆ ಅರ್ಥವಾಗುಲ್ಲ, ನಾನು ಹೇಳಿದ ಹಾಗೆ ಕೇಳು. ಈ ಹುಡುಗಿ ಬಡವರ ಮನೆಯವಳು, ನೀನು ಹೇಳಿದ ಹಾಗೆ ಕೇಳಿಕೊಂಡು, ನಿನ್ನನ್ನ, ನಿನ್ನ ಮಕ್ಕಳನ್ನ ನೋಡಿಕೊಳ್ತಾಳೆ.''

''ನಾನು ಮತ್ತೆ ಮದುವೆಯಾಗುವುದಿಲ್ಲವೆಂದು ತೀರ್ಮಾನಿಸಿ ಬಿಟ್ಟಿದೀನಿ. ನನ್ನನ್ನ ಬಲವಂತ ಮಾಡಬೇಡ'' ಎಂದು ಸಿಡಾರನೆ ನುಡಿದು ಎದ್ದು ಹೋದ.

ಅಕ್ಕನಿಗೆ ಮುಖಭಂಗವಾದಂತಾಗಿತ್ತು. ಅಸಮಾಧಾನಗೊಂಡು ಅದೇ ದಿನ ಆ ಮನೆಯಿಂದ ಹೊರಟುಬಿಟ್ಟಳು ಅದೇ ಕಡೆ. ಮತ್ತೆ ಅಕ್ಕ ತಮ್ಮ ಭೇಟಿಯಾಗಲೇ ಇಲ್ಲ. ಒಬ್ಬ ಅಣ್ಣನ ಸಲಹೆಯಂತೆ, ಒಬ್ಬ ಹೆಂಗಸನ್ನು ಅಡಿಗೆ ಕೆಲಸ ಹಾಗೂ ಮಕ್ಕಳನ್ನು ನೋಡಿಕೊಳ್ಳಲು ಗೊತ್ತುಮಾಡಿಕೊಳ್ಳುವುದೆಂದು ನಿರ್ಧರಿಸಿದ. ಆ ಸಮಯದಲ್ಲಿ ಆ ಮನೆಗೆ ಬಂದು ಸೇರಿದವಳು ಕಾವೇರಿ. ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ವಿಧವೆಯಾಗಿದ್ದವಳಿಗೆ ಒಂದು ನೆಲೆ ಬೇಕಾಗಿತ್ತು. ಉಡುಪಿ ಕಡೆಯ ಒಂದು ಹಳ್ಳಿಯಿಂದ ಅವಳ ತಮ್ಮ ಮಹಾದೇವಭಟ್ಟನೊಂದಿಗೆ ಬಂದಳು. ಜೊತೆಗೆ ಆರು ವರ್ಷದ ಒಬ್ಬ ಮಗನೂ ಇದ್ದ.

ಭಟ್ಟರ ಮಾತುಗಳನ್ನು ಆಲಿಸಿದ. ಕಾವೇರಿಯ ಕಡೆ ಕಣ್ಣೆತ್ತಿ ಸಹ ನೋಡಿರಲಿಲ್ಲ. ನಂತರ ಭಟ್ಟರೊಡನೆ ಮಾತಾಡಿದ. ''ಇದು ಹೆಂಗಸಿಲ್ಲದ ಮನೆ. ನೀವೂ ನಿಮ್ಮ ಅಕ್ಕನೊಂದಿಗೆ ಇರುವುದಾದರೆ ನನಗೆ ಉಪಕಾರವಾಗುತ್ತದೆ.''

ಭಟ್ಟನಿಗೆ ಅವರ ಮಾತಿನ ಅರ್ಥದ ಅರಿವಾಗಿತ್ತು. ಮರುಮಾತಿಲ್ಲದೆ ಇರಲು ಒಪ್ಪಿಕೊಂಡ. ಕೆಲವು ಕಾಲ ಕಳೆಯಲಿ ನಂತರ ಎಲ್ಲಾ ಸರಿ ಹೋಗುತ್ತದೆ, ಆಗ ತನ್ನೂರಿಗೆ ತಾನು ಹೋಗಬಹುದು ಎಂದು ಭಾವಿಸಿದ. ಆದರೆ ನಡೆದದ್ದೇ ಬೇರೆ. ಭಟ್ಟನಿಗೆ ಮದುವೆಯಾಗಿಲ್ಲದಿದ್ದುದರಿಂದ ಇಲ್ಲೇ ಅಕ್ಕನೊಡನೆ ಉಳಿದುಕೊಂಡ. ಭಟ್ಟ ಅಡಿಗೆಮನೆ ಕೆಲಸ, ಹಾಗೂ ಹೊರಗಿನ ಕೆಲಸಗಳನ್ನು ಮಾಡುತ್ತಿದ್ದ. ಕಾವೇರಿ ಮಕ್ಕಳ ಲಾಲನೆ ಪಾಲನೆಯಲ್ಲಿ ತೊಡಗಿದಳು.

ಸದಾಶಿವನಿಗೆ ಕಾವೇರಿಯ ಮಗ ಭಾರ್ಗವನನ್ನು ಕಂಡಾಗಲೆಲ್ಲಾ ಮರುಕ ವುಂಟಾಗುತ್ತಿತ್ತು. ''ಪಾಪ, ತಂದೆ ಇಲ್ಲದ ತಬ್ಬಲಿ, ಈ ಹೆಂಗಸು ಈ ಮಗನನ್ನು ಹೇಗೆ ಮುಂದೆ ತರಬಲ್ಲಳು?'' ಎಂದು ಚಿಂತಿಸುತ್ತಿದ್ದ. ಆರು ವರ್ಷದ ಭಾರ್ಗವ ತುಂಬಾ ಚುರುಕಾಗಿದ್ದ. ಅಷ್ಟೇ ವಿಧೇಯನೂ ಆಗಿದ್ದ. ಮಧುಕರನಂತೆಯೇ ಆಡಿ ನಲಿಯ ಬೇಕಾಗಿದ್ದ ವಯಸ್ಸು. ಆದರೆ ಚೆಲ್ಲಾಟವಿಲ್ಲದೇ ಗಂಭೀರನಾಗಿಯೇ ಇರುತ್ತಿದ್ದುದನ್ನು ಗಮನಿಸಿದ್ದ. ಮಧುಕರನ ಚೇಷ್ಟೆ ತುಂಟಾಟಗಳನ್ನು ಸಹಿಸಿಕೊಂಡು ತನ್ನ ಪಾಡಿಗೆ ತಾನು ಇರುತ್ತಿದ್ದುದನ್ನು ಗಮನಿಸಿದ್ದ. ಆಗಾಗ್ಗೆ ಏನೋ ಒಂದು ಆಲೋಚನೆ ಮೂಡಿ ಬರುತ್ತಿತ್ತು.

ಮಧುಕರನನ್ನು ಸಮೀಪದ ಒಂದು ಕಾನ್ವೆಂಟ್‌ಗೆ ಸೇರಿಸಿದ್ದರು. ಫಸ್ಟ್ ಸ್ಟಾಂಡರ್ಡ್‌ನಲ್ಲಿ ಓದುತ್ತಿದ್ದವನ ಪುಸ್ತಕಗಳನ್ನು ಜೋಡಿಸಿ ಇಡುವಾಗ, ಭಾರ್ಗವ ಆಸಕ್ತಿಯಿಂದ ಹಾಳೆಗಳನ್ನು ತಿರುಗಿಸಿ ತಿರುಗಿಸಿ ನೋಡಿ ಕಣ್ಣರಳಿಸುತ್ತಿದ್ದ. ಇದನ್ನು ಗಮನಿಸಿದ ಸದಾಶಿವ ಭಟ್ಟರನ್ನು ಕರೆದು ಭಾರ್ಗವನನ್ನು ಸ್ಕೂಲಿಗೆ ಸೇರಿಸುವಂತೆ ಹೇಳಿದ್ದರು. ಭಾರ್ಗವ ಸಮೀಪದಲ್ಲಿದ್ದ ಸರ್ಕಾರಿ ಪ್ರೈಮರಿ ಸ್ಕೂಲಿಗೆ ಸೇರಿಕೊಂಡು ಹೋಗಲಾರಂಭಿಸಿದ.

ಹೀಗೆ ಭಾರ್ಗವ ಮನೆಯ ಮಕ್ಕಳಲ್ಲಿ ಒಬ್ಬನಂತೆ ಬೆಳೆದ. ಮೊದಮೊದಲಲ್ಲಿ ಮಧುಕರನಿಗೆ ಏನೂ ಅನ್ನಿಸಿರಲಿಲ್ಲ. ಆದರೆ ಕ್ರಮೇಣ ಭಾರ್ಗವನನ್ನು ತಾತ್ಸಾರವಾಗಿ ಕಾಣುತ್ತಿದ್ದ. ತಾನು ಈ ಮನೆಯವನು, ಅವನು ಹೊರಗಿನವನು ಎಂದು ಮಾತು ಮಾತಿಗೂ ಹಂಗಿಸುತ್ತಿದ್ದ. ಕಾವೇರಿ ಮಗನಿಗೆ ಸಮಾಧಾನ ಹೇಳುತ್ತಿದ್ದಳು.

''ಮಧು ಹೇಳೋದು ನಿಜ. ಎಷ್ಟಾಗಲೀ ಅವನು ರಾಯರ ಸ್ವಂತ ಮಗ. ನಾವು ಈ ಮನೆಯಲ್ಲಿ ಕೆಲಸಕ್ಕೆ ಇರುವವರು. ನಿನ್ನ ಪಾಡಿಗೆ ನೀನು ನಿನ್ನ ಓದಿನ ಕಡೆ ಗಮನ ಕೊಡು. ವಿದ್ಯಾವಂತನಾಗಿ ಒಳ್ಳೆ ಕೆಲಸಕ್ಕೆ ಸೇರಿಕೊಂಡು ಸಂಪಾದನೆ ಮಾಡಿ, ನಮ್ಮ ಪಾಡಿಗೆ ನಾವು ಇರುವಂತಾದರೆ ಸಾಕು...''

ತಾಯಿಯ ಮಾತುಗಳನ್ನು ಅರ್ಥಮಾಡಿಕೊಂಡವನಂತೆ ಸುಮ್ಮನಾಗುತ್ತಿದ್ದ. ಅವನಿಗೆ, ಮಧುಕರನಿಗಿಂತಲೂ ಅವನ ತಂಗಿ ವನಮಾಲಾಳನ್ನು ಕಂಡರೆ ಇಷ್ಟ. ಅವಳನ್ನು

ಓಡಾಡಿಸುವುದು, ಆಟ ಆಡಿಸುವುದು, ನಗಿಸುವುದು ಬಹಳ ಇಷ್ಟವಾಗುತ್ತಿತ್ತು. ಹಾಗೇ ತನ್ನ ಯಾವ ವಸ್ತುವನ್ನೂ ಮುಟ್ಟಲು ಬಿಡದೇ ಅಟ್ಟಬ್ಬರಿಸುತ್ತಿದ್ದ ಮಧುಕರನಿಗಿಂತ, ಭಾರ್ಗವ ಹೆಚ್ಚು ಪ್ರಿಯನಾದ ವನಮಾಲಾಳಿಗೆ. ಕಾವೇರಮ್ಮ ವನಮಾಲಾಳನ್ನು ತನ್ನ ಸ್ವಂತ ಮಗಳಿಗಿಂತ ಹೆಚ್ಚು ಪ್ರೀತಿಯಿಂದ ಬೆಳೆಸಿದಳು. ಇವರುಗಳೊಡನೆ ಸೇರದ ಮಧುಕರ ಒಂಟಿಯಾಗಿ ಬೆಳೆಯಲಾರಂಭಿಸಿದ. ಅವನ ವರ್ತನೆ, ನಡವಳಿಕೆ ಒಂದು ಸಮಸ್ಯೆಯಾಗ ತೊಡಗಿದಾಗ, ಸದಾಶಿವರ ಗಮನ ಮಗನ ಮೇಲೆ ಬಿತ್ತು.

ಯಾರ ಮಾತನ್ನೂ ಕೇಳದಿರುವುದು, ತನಗೆ ಮನಬಂದಂತೆ ವರ್ತಿಸುವುದು, ಹಠ, ಮೊಂಡುತನ ಹೆಚ್ಚಾಯಿತು. ಭಾರ್ಗವನೊಡನೆ ಜಗಳವಾಡುವುದು, ತಂಗಿಯನ್ನು ಕಾರಣವಿಲ್ಲದೇ ಹೊಡೆದು ಅಳಿಸುವುದು, ಇದೆಲ್ಲಾ ಮಿತಿಮೀರ ತೊಡಗಿತು. ಭಟ್ಟರಾಗಲೀ, ಕಾವೇರಮ್ಮನಾಗಲೀ, ತುಟಿ ಪಿಟಕ್ಕೆನ್ನದೇ ಸಹಿಸಿಕೊಂಡಿದ್ದರು. ಆದರೆ ವನಮಾಲಾ ಮಾತ್ರ, ತಪ್ಪದೇ ಅಪ್ಪನೊಡನೆ ಚಾಡಿ ಹೇಳುತ್ತಿದ್ದಳು. ಮೊದಮೊದಲು ಅದಕ್ಕೆ ಹೆಚ್ಚಾಗಿ ಗಮನ ಕೊಡಲಿಲ್ಲವಾದರೂ, ಸ್ಕೂಲಿನಿಂದ ದೂರು ಬರತೊಡಗಿದಾಗ ಅವರು ಎಚ್ಚೆತ್ತರು. ಕಾವೇರಮ್ಮನನ್ನು ಕರೆಸಿ ಕೇಳಿದಾಗ, ಆಕೆ ಮಾತಾಡಲಿಲ್ಲ. ಭಟ್ಟರು ಅಕ್ಕನ ಸಹಾಯಕ್ಕೆ ಬಂದರು.

''ನಾವು ಹೆದರಿದೆವು ರಾಯರೇ... ಚಿಕ್ಕ ಹುಡುಗ, ತಿಳುವಳಿಕೆಯಿಲ್ಲ ಅಂತ ಸಹಿಸಿ ಕೊಂಡೆವು. ಸ್ಕೂಲಿನಲ್ಲಿ ಏನು ನಡೀತು ಅಂತ ನಮಗೆ ತಿಳಿಯದು. ಇನ್ನು ಮುಂದೆ ನಾವು ಚೆನ್ನಾಗಿ ನೋಡಿಕೊಳ್ತೀವಿ. ಯೋಚಿಸಬೇಡಿ.'' ಭಟ್ಟರು ಹಾಗೆ ಹೇಳಿದರೂ ಸದಾಶಿವನಿಗೆ ಸಮಾಧಾನವಾಗಿರಲಿಲ್ಲ. ಅಪ್ಪನಾಗಿ ತನ್ನಿಂದ ಏನೋ ತಪ್ಪು ನಡೆದಿರಬಹುದೆಂದು ಭಾವಿಸಿ, ಮಗನನ್ನು ಕರೆದು ಮಾತಾಡಿದ.

''ನನಗೆ ಈ ಸ್ಕೂಲೇ ಇಷ್ಟವಾಗುತ್ತಿಲ್ಲ. ನಾನು ಬೇರೆ ಸ್ಕೂಲಿಗೆ ಸೇರುತ್ತೇನೆ'' ಅಂತ ನುಡಿದಾಗ, ಹೆದರಿದ್ದ.

ಸ್ಕೂಲಿಗೆ ಹೋಗಿ ಮಾತನಾಡಿದಾಗ, ಅವರು ಸಾಕಷ್ಟು ನುಡಿದು ಮತ್ತೂ ಹೆದರಿಸಿದ್ದರು. ''ನಿಮ್ಮ ಮನೆಯ ವಾತಾವರಣ ಹೇಗಿದೆಯೋ ತಿಳಿಯದು. ಆದರೆ ಇಲ್ಲಂತೂ ದಿನಾ ಏನಾದ್ರೂ ಕಂಪ್ಲೇಂಟ್ ಇದ್ದೇ ಇರುತ್ತೆ. ನಮಗೂ ತಿಳುವಳಿಕೆ ಹೇಳೀ ಹೇಳೀ ಸಾಕಾಗಿದೆ. ನಾವು ಟಿ. ಸಿ. ಕೊಡ್ತೀವಿ. ಬೇರೆ ಯಾವುದಾದರೂ ಸ್ಕೂಲಿಗೆ ಸೇರಿಸಿ. ನಮಗೂ ಇಂತಹ ಸ್ಟೂಡೆಂಟ್ ಬೇಡವೇ ಬೇಡ.'' ಈ ಮಾತು ಸದಾಶಿವನನ್ನು ತಗುಲಿತು. ತಕ್ಷಣಕ್ಕೆ ಏನೂ ಮಾತಾಡಲಿಲ್ಲವಾದರೂ ಏನೋ ಒಂದು ತೀರ್ಮಾನಕ್ಕೆ ಬಂದವನಂತೆ ಎದ್ದು ಬಂದ.

ಕೆಲವೇ ದಿನಗಳಲ್ಲಿ ಅದೇ ಊರಿನ ಸಮೀಪದ ಒಂದು ಬೋರ್ಡಿಂಗ್ ಸ್ಕೂಲಿನಲ್ಲಿ ಮಗನಿಗೆ ಅಡ್ಮಿಷನ್ ಕೊಡಿಸಿದ. ಮಧುಕರ ಯಾವ ತಕರಾರೂ ಮಾಡದೇ ಹೊರಟು ನಿಂತಾಗ ಎಲ್ಲರಿಗೂ ಅಚ್ಚರಿ. ಕಾವೇರಮ್ಮನಿಗೆ ಪಿಚ್ಚೆನಿಸಿತ್ತು.

''ಬೇಡ ರಾಯ್ರೇ... ಇನ್ನೂ ಚಿಕ್ಕ ಹುಡುಗ. ಮನೆಯವರ ಆರೈಕೆ ಇಲ್ಲದೇ ಸೊರಗಿ ಹೋಗ್ತಾನೆ. ತಿಳುವಳಿಕೆ ಸಾಲದು. ನಾಲ್ಕು ದಿನ ಕಳೆದ್ರೆ ಸರಿ ಹೋಗ್ತಾನೆ'' ಅಂತ ಕೇಳಿಕೊಂಡಿದ್ದಳು.

''ಇಲ್ಲ ಕಾವೇರಮ್ಮ... ಅವನಿಗೆ ಡಿಸಿಪ್ಲೀನ್ ಇಲ್ಲ. ಅದಕ್ಕೆ ಬೋರ್ಡಿಂಗ್ ಸ್ಕೂಲೇ ಸರಿ. ಯಾರೂ ನನ್ನ ನಿರ್ಧಾರಕ್ಕೆ ಅಡ್ಡಿ ಬರಬೇಡಿ. ಅಲ್ಲದೆ ಅವನಿಗೂ ಅದೇ ಬೇಕಾಗಿದೆ. ನೋಡ್ತಿರಿ... ಅವನಲ್ಲಿ ಎಷ್ಟು ಬದಲಾವಣೆ ಬರುತ್ತೆ ಅಂತ.''

ಕಾವೇರಮ್ಮನಿಗೆ ತಾನೇ ತಪ್ಪು ಮಾಡಿದೆನೇನೋ ಅಂತೆನ್ನಿಸಿತ್ತು. ಮನೆಯ ಹುಡುಗ, ಮನೆಯಿಂದ ಹೊರಗೆ ಹೋಗಿ ಇರುವುದೆಂದರೇ...? ಆದರೆ ಮತ್ತೆ ಮತ್ತೆ ಅದೇ ಮಾತನ್ನಾಡಲು ಹೆದರಿ ಸುಮ್ಮನಾಗಿದ್ದಳು.

ಈಗ ಮನೆಯಲ್ಲಿ ಯಾವ ಗಲಾಟೆಯೂ ಇಲ್ಲ. ಭಾರ್ಗವ ಹಿರಿಯ ಮಗನಂತೆ, ಜವಾಬ್ದಾರಿ ಅರಿತವನಂತೆ ರಾಯರ ಮೆಚ್ಚುಗೆಯಲ್ಲಿ ಬೆಳೆದು ದೊಡ್ಡವನಾದ. ಆಗ ಈಗ ರಜದಲ್ಲಿ ಮಧುಕರ ಮನೆಗೆ ಬಂದರೂ, ಯಾರೊಡನೆಯೂ ಬೆರೆಯುತ್ತಿರಲಿಲ್ಲ. ಅಪರಿಚಿತ ಅತಿಥಿಯಂತೆ ಇದ್ದು ಮತ್ತೆ ಹೊರಟು ಹೋಗುತ್ತಿದ್ದ. ಅಲ್ಲಿ ಅವನ ಸಹಪಾಠಿ ಯಾಗಿದ್ದವನು ಧ್ರುವ. ಧ್ರುವನ ತಂದೆ ದುಬೈದಲ್ಲಿ ಕೆಲಸದಲ್ಲಿದ್ದರು.

ಬೋರ್ಡಿಂಗ್ ಸ್ಕೂಲಿನ ಜೀವನಕ್ಕೆ ಒಗ್ಗಿ ಹೋದ ಮಧುಕರನಿಗೆ ಮನೆಯ ಪರಿಸರ ಒಗ್ಗುತ್ತಿರಲಿಲ್ಲ. ಹಾಗಾಗಿ ನಂತರ, ಕಾಲೇಜಿನ ದಿನಗಳಲ್ಲೂ ಪರ ಊರಿನಲ್ಲಿದ್ದು ಕೊಂಡು ಹಾಸ್ಟೆಲ್ಲಿಗೆ ಸೇರಿಕೊಂಡು ತನ್ನ ವಿದ್ಯಾಭ್ಯಾಸವನ್ನು ಮುಗಿಸಿದ.

ಎಂ.ಬಿ.ಎ.ಯ ನಂತರ, ತಾನು ಮುಂಬೈಗೆ ಹೋಗಿ ಕೆಲಸಕ್ಕೆ ಸೇರಿಕೊಳ್ತೀನಿ ಅಂತ ಹೇಳಿದಾಗ, ಸದಾಶಿವ ಒಪ್ಪಿರಲಿಲ್ಲ.

''ಇದುವರೆಗೂ ನಿನ್ನ ಒಳ್ಳೆಯದಕ್ಕೋಸ್ಕರವೇ, ನಾನು ನಿನ್ನನ್ನು ಮನೆಯಿಂದ ಹೊರಗೇ ಇಟ್ಟಿದ್ದೆ. ಈಗ ನೀನು ಸಮರ್ಥನಾಗಿದೀಯೆ. ನಮ್ಮ ಕಂಪೆನಿಗೇ ಸೇರಿಕೋ. ಮುಂದೆ ಎಲ್ಲಾ ಹೇಗೂ ನಿನ್ನದೇ... ಈಗಲಿಂದ ಒಂದೊಂದಾಗಿ ಎಲ್ಲಾ ವಹಿಸ್ಕೋ... ಭಾರ್ಗವ ನಿನಗೆ ಸಹಾಯಕನಾಗಿರುತ್ತಾನೆ'' ಅಂತ ನುಡಿದಾಗ ಅವನಿಗೆ ಕೆರಳಿತ್ತು.

''ನನಗೆ ಯಾರ ಸಹಾಯವೂ ಬೇಡ. ನಿಮಗೆ ಮೊದಲಿನಿಂದಲೂ ನನಗಿಂತ ಭಾರ್ಗವನೇ ಹೆಚ್ಚು... ಆ ಕಾರಣದಿಂದಲೇ ಬೋರ್ಡಿಂಗ್ ಸ್ಕೂಲಿನಲ್ಲಿರಲು ಒಪ್ಪಿ ಕೊಂಡೆ. ಈಗಲೂ ನನಗೆ ಇಲ್ಲಿ ಇರಲು ಇಷ್ಟವಿಲ್ಲ.''

ಮಗನ ಮಾತನ್ನು ಕೇಳಿ ಸದಾಶಿವನ ಮುಖ ಕಪ್ಪಿಟ್ಟಿತು. ಆದರೂ ಮಗನಿಗೆ ಸಮಜಾಯಿಷಿ ಹೇಳಿದರು.

''ನೀನು ತಪ್ಪು ತಿಳಿದುಕೊಂಡಿದೀಯ ಮಧು... ನೀನು ನನ್ನ ಸ್ವಂತ ಮಗ. ನನ್ನ ಸಮಸ್ತ ಆಸ್ತಿಗೂ ನೀನೇ ಹಕ್ಕುದಾರ... ಭಾರ್ಗವ ತಂದೆ ಇಲ್ಲದ ತಬ್ಬಲಿ. ಅವನ ವಿದ್ಯಾಭ್ಯಾಸಕ್ಕೆ ನಾನು ಸಹಾಯ ಮಾಡಿದೆ ಅಷ್ಟೇ. ಆ ಒಂದು ಕಾರಣದಿಂದಲೇ ಅವನು

ವಿಧೇಯನಾಗಿದ್ದಾನೆ. ನನ್ನ ಕಣ್ಣ ಮುಂದೆ ನನ್ನ ಮಾರ್ಗದರ್ಶನದಲ್ಲಿ ಬೆಳೆದ ಹುಡುಗ. ನನ್ನ ಕಂಪೆನಿಯಲ್ಲೇ ಕೆಲಸಕ್ಕೆ ಇಟ್ಟುಕೊಂಡಿದೀನಿ. ಕಾವೇರಮ್ಮ ನಿಮ್ಮಿಬ್ಬರನ್ನೂ ಸಾಕಿ ಬೆಳೆಸಿ ದೊಡ್ಡವರನ್ನಾಗಿ ಮಾಡಿದ್ದಾಳೆ. ಅವರ ಉಪಕಾರಕ್ಕೆ ನಾನು ಮಾಡಿರುವುದು ಏನು ಮಹಾ... ನಮಗಾಗಿ ಇವರುಗಳು ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ. ಅಂಥಾದ್ದರಲ್ಲಿ ನೀನು ಹೀಗೆ ಮಾತನಾಡುವುದು ಸರಿಯಲ್ಲ. ನೀನಿನ್ನೂ ಚಿಕ್ಕವನು. ನಿನಗೆ ಅನುಭವ ಸಾಲದು. ನಮ್ಮ ಮಾಲಾ ಬೆಳೆದು ದೊಡ್ಡವಳಾಗಿದಾಳೆ. ಅವಳಿಗೆ ಮದುವೆ ಮಾಡಬೇಕು. ನಾನೊಬ್ಬನೇ ಆಗಿದ್ದಿದ್ದರೆ ಏನೂ ಮಾಡಲು ಆಗುತ್ತಿರಲಿಲ್ಲ. ಭಾರ್ಗವ ನಂತೂ ಮಾಲಾಳನ್ನು ತುಂಬಾ ಅಕ್ಕರೆಯಿಂದ ನೋಡಿಕೊಳ್ತಾನೆ. ಅವಳಿಗೂ ಅಷ್ಟೇ ಅವನನ್ನು ಕಂಡರೆ ತುಂಬಾ ಪ್ರೀತಿ... ನಾನು ಭಾರ್ಗವನನ್ನು ಹೊರಗಿನವನು ಅಂತ ಅಂದುಕೊಂಡೇ ಇಲ್ಲ. ಹೀಗೇ ನಾವುಗಳು ಒಟ್ಟಾಗಿರಬೇಕು ಅಂತ ನನ್ನ ಆಸೆ.'' ಸದಾಶಿವ ಭಾವುಕನಾಗಿ ನುಡಿದಾಗ ಮಧು ಪೆಚ್ಚಾದ. ಆದರೂ ತನಗೇ ಎಂಬಂತೆ ಹೇಳಿದ,

''ಮಮ್ಮಿ ಇದ್ದಿದ್ದರೆ ಖಂಡಿತಾ ಹೀಗಾಗುತ್ತಿರಲಿಲ್ಲ.''

''ಹೌದು, ನಿನ್ನ ಮಮ್ಮಿ ಇದ್ದಿದ್ದರೆ ಖಂಡಿತಾ ಹೀಗಾಗುತ್ತಿರಲಿಲ್ಲ. ಕಾವೇರಮ್ಮನ ಅಗತ್ಯವೇ ಬರುತ್ತಿರಲಿಲ್ಲ ನಮಗೆ...'' ತಂದೆ ಮಗ ಒಟ್ಟಿಗೇ ಸರೋಜಳನ್ನು ನೆನೆಸಿ ಕೊಂಡು ಮೌನಿಯಾದರು.

ಕಾಲೇಜಿನಿಂದ ಬಂದ ವನಮಾಲಾ ಅಣ್ಣನನ್ನು ನೋಡಿದರೂ ನೋಡದವಳಂತೆ ಒಳ ನಡೆದಾಗ, ಸದಾಶಿವ ಮಗಳನ್ನು ಕರೆದರು.

''ಮಾಲಾ... ಬಾ ಇಲ್ಲಿ...'' ಮಾಲಾ ವೈಯಾರದಿಂದ ಬಂದು ನಿಂತಾಗ ಮಧುಕರ ಅವಳನ್ನೇ ಕುತೂಹಲದಿಂದ ನೋಡಿದ. ಕಣ್ಣುಗಳು ಅರಳಿದವು. ಅವಳು ಗುರುತೇ ಸಿಗದಷ್ಟು ಬದಲಾಗಿದ್ದಳು.

''ಅರೇ ಮಾಲೀ... ನೀನೇ ಏನೇ... ಗುರುತೇ ಸಿಗುತ್ತಿಲ್ಲವಲ್ಲೇ...'' ಅವಳನ್ನು ರೇಗಿಸಿದ.

''ಹುಂ. ನಾನೇ... ಎಂದಾದ್ರೂ ಸರಿಯಾಗಿ ನೋಡಿದ್ದಿದ್ರೆ ಗುರುತು ಸಿಗುತ್ತಿತ್ತು. ಕಣ್ಣು ಎಲ್ಲೋ ನೆತ್ತಿಯ ಮೇಲೆ ಇದ್ದರೆ ಹಾಗೇ ಆಗೋದು''

''ಷ್... ಸುಮ್ಮನಿರು ಮಾಲಾ... ಮಧು ಇನ್ನೂ ಈಗ್ತಾನೇ ಮನೆಗೆ ಬರ್ತಾ ಇದಾನೆ. ಇನ್ನು ಮುಂದೆ ಅವನು ಇಲ್ಲೇ ಇರ್ತಾನೆ... ಮುಂಚಿನ ಹಾಗೆ ಜಗಳವಾಡ ಬಾರದು. ಅನ್ಯೋನ್ಯವಾಗಿರಬೇಕು...''

''ನಾನ್ಯಾಕೆ ಜಗಲ ಆಡಲಿ ಇವನ ಹತ್ತಿರ? ನನಗೆ ಬೇರೆ ಕೆಲಸ ಏನೂ ಇಲ್ವಾ?'' ಅವಳು ಅಹಂಕಾರದಿಂದ ನುಡಿದಾಗ, ಅವನು ತುಟಿಕಚ್ಚಿ ಕೋಪವನ್ನು ನುಂಗಿದ. ಇವಳ ಕೊಬ್ಬನ್ನು ಇಳಿಸದಿದ್ದರೆ, ನಾನು ಇವಳ ಅಣ್ಣನೇ ಅಲ್ಲ ಅಂತಂದುಕೊಂಡ. ಅವಳು ತನ್ನ

ನೀಳವಾದ ಜಡೆಯನ್ನು ರೊಯ್ಯನೆ ಬೀಸಿ ಅಲ್ಲಿಂದ ನಡೆದಳು. ಸದಾಶಿವ ಮೆಲುನಗೆ ನಕ್ಕರು.

''ಇನ್ನೂ ಹುಡುಗು ಬುದ್ಧಿ. ಕಾವೇರಮ್ಮ ವಿಪರೀತ ಮುದ್ದು ಮಾಡಿ ಬೆಳೆಸಿ ಬಿಟ್ಟಿದ್ದಾರೆ. ಅಲ್ಲದೇ ನೀನೂ ಮನೇಲಿರಲಿಲ್ಲವಲ್ಲ. ತಾನೇ ತಾನಾಗಿ ಬೆಳೆದು ಬಿಟ್ಟಿದ್ದಾಳೆ. ನನಗೆ ಇವಳದ್ದೇ ಚಿಂತೆ... ನಾಳೆ ಮದುವೆಯಾದ ಮೇಲೆ ಗಂಡನ ಜೊತೆ ಹೇಗಿರುತ್ತಾಳೆ? ಅತ್ತೆ ಮನೇಲಿ ಹೇಗೆ ಸಂಸಾರ ಮಾಡ್ತಾಳೆ ಅಂತ..'' ಮಧುಕರ ಅವಳು ಹೋದ ದಿಕ್ಕನ್ನೇ ಕೆಂಗಣ್ಣುಗಳಿಂದ ನೋಡುತ್ತಿದ್ದ. ''ನಾನು ಮನೆಯಲ್ಲಿ ಇಲ್ಲದೇ ಇದ್ದುದರಿಂದ ಇವಳ ಪೊಗರು ಜಾಸ್ತಿಯಾಗಿದೆ. ಅದಕ್ಕೆ ಭಾರ್ಗವನ ಸಪೋರ್ಟ್ ಬೇರೆ. ಇವಳ ಸೊಕ್ಕನ್ನು ಮುರಿದು, ಭಾರ್ಗವನನ್ನು ಈ ಮನೆಯಿಂದ ಹೊರಗೆ ಹಾಕದಿದ್ದರೆ ನಾನು ಮಧುಕರನೇ ಅಲ್ಲ'' ಎಂದು ತನ್ನಲ್ಲೇ ನಿಶ್ಚಯಿಸಿಕೊಂಡ. ಹೇಗೂ ನನ್ನ ವಿದ್ಯಾಭ್ಯಾಸ ಮುಗಿದಿದೆ. ನಾನು ಸಮರ್ಥನಾಗಿದೀನಿ ಅಂತ ಡ್ಯಾಡಿಯೇ ಹೇಳಿದ್ದಾರೆ. ಹೇಗೂ ಡ್ಯಾಡಿಗೆ ವಯಸ್ಸಾಗಿದೆ. ಒಂದೊಂದಾಗಿ, ಆಡಳಿತವನ್ನು ತನ್ನ ಕೈಗೆ ತೆಗೆದುಕೊಳ್ಳಬೇಕೆಂದುಕೊಂಡು, ಷರ್ಟಿನ ಕಾಲರನ್ನು ಸರಿಪಡಿಸಿಕೊಂಡು, ತನ್ನಲ್ಲೇ ನಕ್ಕ.

ಭಟ್ಟರೊಡನೆ ತರಕಾರಿ ತರಲೆಂದು ಮಾರ್ಕೆಟ್ಟಿಗೆ ಹೋಗಿದ್ದ ಭಾರ್ಗವ ಎರಡೆರಡು ಭಾರವಾದ ಚೀಲಗಳನ್ನು ಹಿಡಿದು ಒಳ ಬಂದ. ಮುಂಬಾಗಿಲಿಗೆದುರಾಗಿ ಕುಳಿತಿದ್ದ ಮಧುಕರನನ್ನು ಕಂಡು ಮುಗುಳ್ನಕ್ಕು ''ಏನು ಮಧುಕರ.... ಯಾವಾಗ ಬಂದೆ?'' ಅಂತ ಪ್ರಶ್ನಿಸಿದ. ಮಧು ಅವನ ಪ್ರಶ್ನೆಗೆ ಉತ್ತರಿಸದೇ ಭಟ್ಟರ ಕಡೆಗೆ ತಿರುಗಿದ. ಭಾರ್ಗವ ಒಳ ನಡೆದ. ಅದೇನೂ ಹೊಸದಲ್ಲ.

''ಏನು ಭಟ್ಟರೇ... ಹೇಗಿದೀರಿ? ತರಕಾರಿ ತರೋಕೆ ಇಷ್ಟು ಹೊತ್ತಾ? ಪ್ಲೀಸ್... ನನಗೆ ಒಂದು ಲೋಟ ಬಿಸಿ ಬಿಸಿ ಕಾಫಿ ಕೊಡಿ ಮೊದಲು...''

''ಹೂಂನಪ್ಪಾ... ಈಗ ಕೊಟ್ಟೆ.. ನೀನು ಯಾವಾಗ ಬಂದೆ? ಮೊದಲೇ ಗೊತ್ತಿದ್ದಿದ್ರೆ ಮನೇಲೇ ಇರ್ತಿದ್ದೆ... ಮಾಲಾ ಬಂದಳಾ ಮನೆಗೆ...''

''ಹೂಂ. ಬಂದಿದಾಳೆ... ಕಾವೇರಮ್ಮನೂ ಇಲ್ವಾ ಮನೇಲಿ... ಎಲ್ಲೋ ಕಾಣ್ತಿಲ್ಲ''

''ಹೂಂ. ಅವಳು ಒಂದೆರಡು ದಿನದ ಮಟ್ಟಿಗೆ ಅಂತ ಊರಿಗೆ ಹೋಗಿದಾಳೆ. ಯಾವುದೋ ಮದುವೆ ಕಾರ್ಯ ಇತ್ತು...''

''ಯಾಕೆ ನೀವು ಹೋಗಲಿಲ್ವಾ ಭಟ್ಟರೇ...?''

''ನಾನೂ ಹೊರಟು ಹೋದರೆ ರಾಯರಿಗೆ, ಮಾಲಂಗೆ ಕಷ್ಟವಾಗುತ್ತಲ್ಲ ಅಂತ ಹೋಗಲಿಲ್ಲ''

''ಹೋಗಲಿ ಬಿಡಿ, ಒಳ್ಳೇದೇ ಆಯ್ತು. ಅಂತೂ ನಮ್ಮ ಡ್ಯಾಡೀನ, ತಂಗೀನ ನೀವುಗಳೆಲ್ಲ ತುಂಬಾ ಚೆನ್ನಾಗಿ ನೋಡಿಕೊಂಡಿದೀರಿ... ನಿಮಗೆಲ್ಲಾ ತುಂಬಾ ಥ್ಯಾಂಕ್ಸ್...''

ಭಾರ್ಗವನ ಕಡೆ ಕೆಕ್ಕರಿಸಿ ನೋಡಿದ. ಅವನ ಕೈಯಲ್ಲಿ ಕಾಫಿಯ ಬಟ್ಟಲುಗಳಿದ್ದವು. ಒಂದು ಕಪ್‌ನ್ನು ಎತ್ತಿಕೊಂಡ.

''ಓ... ನೀನೇ ತಂದ್ಯಾ?... ನಿನಗೆ ಅಡಿಗೆ ಕೆಲಸ ಕೂಡಾ ಚೆನ್ನಾಗಿ ಬರಬಹುದು ಅಲ್ವಾ ?'' ವ್ಯಂಗ್ಯದಿಂದ ನುಡಿದ. ಭಾರ್ಗವ ಉತ್ತರಿಸದೇ ಸುಮ್ಮನೇ ಮುಗುಳ್ನಕ್ಕು, ಇನ್ನೊಂದು ಬಟ್ಟಲನ್ನು ಮಾಲಾಳ ರೂಮಿನ ಕಡೆಗೆ ತೆಗೆದುಕೊಂಡು ಹೋದುದನ್ನು ಮಧು ಗಮನಿಸಿದ. ಅವನ ಹುಬ್ಬುಗಳು ಸೇರಿಕೊಂಡವು. ಮಾಲಾಳ ರೂಮಿನಿಂದ ನಗು ಕೇಳಿಸಿಬಂದಾಗ, ಕಾಫಿ ಕಹಿಯಾಯಿತು. ಕಾಫಿಯ ಗುಟುಕನ್ನು ನುಂಗದೆ ಹಾಗೇ ಬಟ್ಟಲಿಗೆ ಉಗುಳಿದ. ಭಟ್ಟರು ದಿಗಿಲಾದರು. ''ಯಾಕಪ್ಪಾ ಏನಾಯ್ತು?''

''ತುಥ್, ಕಾಫಿ ಕಹಿ ವಿಷ...... ಸಕ್ಕರೆಯನ್ನೇ ಹಾಕಿಲ್ಲ.......''

''ನಾನು ಬೇರೆ ಕಾಫೀನ ತಂದುಕೊಡ್ತೀನಿ... ಈಗ ಬಂದೆ'' ಎನ್ನುತ್ತಾ ಭಟ್ಟರು ಒಳ ನಡೆದಾಗ, ಮಧು ಎದ್ದು ರೂಮಿನ ಬಾಗಿಲಿಗೆ ಬರುವುದಕ್ಕೂ ಭಾರ್ಗವ ಹೊರಕ್ಕೆ ಬರುವುದಕ್ಕೂ ಸರಿ ಹೋಯಿತು. ತಲೆಗೆ ತಲೆ ಡಿಕ್ಕಿಯಾಯಿತು.

''ಸ್ಸಾರಿ... ಸಾರಿ'' ಎನ್ನುತ್ತಾ ಭಾರ್ಗವ ಹಿಂದಕ್ಕೆ ಸರಿದಾಗ, ಮಧು ಅವನನ್ನೇ ಕೆಕ್ಕರಿಸಿ ನೋಡಿದ. ಅಷ್ಟರಲ್ಲಿ ಮಾಲಾ ಅವನ ಹಿಂದೆ ಬಂದು ನಿಂತಿದ್ದಳು.

''ಕಣ್ಣುಗಳನ್ನು ನೆತ್ತಿಯ ಮೇಲೆ ಇಟ್ಟುಕೊಂಡು ಓಡಾಡಿದ್ರೆ ಆಗೋದು ಹೀಗೇ...'' ಎನ್ನುತ್ತಾ ಇಬ್ಬರನ್ನೂ ನೋಡಿದ. ಭಾರ್ಗವ ಪೆಚ್ಚಾಗಿ ಹೊರ ನಡೆದ. ಭಟ್ಟರು ಕಾಫಿಯ ಕಪ್‌ನ್ನು ಹಿಡಿದು ಅಲ್ಲಿಗೇ ಬಂದರು. ಭಾರ್ಗವ ಎದುರಾದ.

''ಯಾರಿಗೆ ಕಾಫಿ ಮಾವಾ?'' ಭಾರ್ಗವ ಪ್ರಶ್ನಿಸಿದ.

''ನಿನಗೆ ಅಷ್ಟು ತಿಳಿಯ ಬೇಡ್ವೇನೋ ಭಾರ್ಗವ ನಾನು ರಾಯರಿಗೆ ಅಂತ ಮಾಡಿಟ್ಟಿದ್ದ ಕಾಫಿಯನ್ನು ಮಧುಕರನಿಗೆ ಕೊಟ್ಟಿದೀಯ... ಅದಕ್ಕೆ ಸಕ್ಕರೇನೇ ಹಾಕಿರಲಿಲ್ಲ...''

''ಇಲ್ಲ ಮಾವಾ... ನಾನು ಬೇರೆ ಕಾಫಿನೇ ಬೆರೆಸಿ ತಂದೆ. ಸಕ್ಕರೆ ಹಾಕಿದ್ದೆ. ಎಲ್ಲೋ ಕಡಿಮೆ ಅಂತ ಅನ್ನಿಸಿರಬಹುದು. ಬೇಕಾದ್ರೆ ಮಾಲಾನ್ನೇ ಕೇಳಿ...''

''ಹೋಗಲಿ ಬಿಡು. ಈಗ್ಯಾಕೆ ಮಾತು? ತಗೋಪ್ಪಾ ಮಧು... ಸಕ್ಕರೆ ಸರಿಯಾಗಿ ದೆಯಾ ಅಂತ ನೋಡು...'' ಅವನು ಕಾಫಿಯ ಬಟ್ಟಲನ್ನು ಹಿಡಿದು ಇತ್ತ ಸರಿದಾಗ ಮಾಲಾ ನಕ್ಕಳು.

''ಹುಷಾರು ಕಣೋ ಮಧುಕರ... ವಿಪರೀತ ಸಿಹಿಯಾಗಿ ಕುಡಿಯಬೇಡ. ಆಮೇಲೆ ನಿನಗೂ ಶುಗರ್ ಕಂಪ್ಲೇಂಟ್ ಬಂದೀತು, ಡ್ಯಾಡಿಯ ಹಾಗೇ...''

''ಏನು ಡ್ಯಾಡಿಗೆ ಶುಗರ್ ಕಂಪ್ಲೆಂಟ್.. ಐ ಮೀನ್ ಡಯಾಬಟೀಸ್... ಯಾರೂ ಹೇಳಲೇ ಇಲ್ಲ ನನಗೆ... ಹೌದಾ ಭಟ್ಟರೇ...?''

''ಹೌದಪ್ಪಾ... ಆದರೆ ಎಲ್ಲಾ ಕಂಟ್ರೋಲ್‌ನಲ್ಲಿದೆ... ಔಷಧ, ಪಥ್ಯ ಎಲ್ಲಾ ಸರಿಯಾಗಿದೆ...'' ಆದರೂ ಅವನ ಮುಖದಲ್ಲಿ ಕಳೆ ಇಳಿದುಹೋಗಿತ್ತು.

''ಅಯ್ಯೋ ಹೆದರಿಬಿಟ್ಯಾ? ಒಂದು ದಿನ ಸಿಹಿ ಕಾಫಿ ಕುಡಿದ ಮಾತ್ರಕ್ಕೆ ಡಯಾಬಿಟೀಸ್ ಬಂದುಬಿಡಲ್ಲ, ಕುಡೀ. ಕುಡೀ... ಆದರೆ ಕೇರ್‌ಫುಲ್ ಆಗಿರು ಅಷ್ಟೇ...''

''ನನ್ನ ಮೂಡ್‌ನೇ ಕೆಡಿಸಿಬಿಡ್ತೀಯಾ ನೀನು...'' ಎಂದು ತಂಗಿಯ ಕಡೆ ನೋಡುತ್ತಾ ಕಾಫಿಯನ್ನು ಗಟಗಟನೆ ಕುಡಿದು, ಖಾಲಿ ಬಟ್ಟಲನ್ನು ಅಲ್ಲಿಯೇ ನಿಂತಿದ್ದ ಭಾರ್ಗವನ ಕೈಗಿತ್ತು ಅಲ್ಲಿಂದ ದುಡುದುಡುನೆ ತನ್ನ ರೂಮಿಗೆ ಹೊರಟುಹೋಗಿದ್ದ. ಭಟ್ಟರು ಭಾರ್ಗವನ ಕೈನಿಂದ ಬಟ್ಟಲನ್ನು ಕೈಗೆತ್ತಿಕೊಂಡು ಅಡಿಗೆಮನೆಗೆ ನಡೆದರು.

''ಮಾವಾ, ಮಧುಕರನಿಗೆ ಇಷ್ಟವಾದ ಅಡಿಗೆಯನ್ನು ಮಾಡಿ... ಯಾವ ತರಕಾರಿಯನ್ನು ಹೆಚ್ಚಿಕೊಡಲಿ?''

''ತಡಿಯಪ್ಪಾ... ಅವನನ್ನೇ ಕೇಳ್ತೀನಿ... ಹೊರಗೇ ಇದ್ದೂ ಇದ್ದೂ ಅವನ ನಾಲಿಗೆ ರುಚಿಯೂ ಬದಲಾಯಿಸಿರಬಹುದು'' ಎನ್ನುತ್ತಾ ಹೊರಟವರನ್ನು ಮಾಲಾ ತಡೆದಳು.

''ಏನೂ ಬೇಡ ಭಟ್ಟರೇ... ದಿನಾ ಏನು ಮಾಡ್ತೀರೋ ಅದನ್ನೇ ಮಾಡಿ. ಅವನದ್ದೇನು ಹೆಚ್ಚುಗಾರಿಕೆ? ಅಲ್ವಾ ಭಾರ್ಗವ?''

''ಹಾಗಲ್ಲಮ್ಮಾ... ಅವನಿಗೆ ಮುಂಗೋಪ ಜಾಸ್ತಿ... ಅವನಿಗಿಷ್ಟವಾದುದನ್ನು ಮಾಡಿದರೆ ಅವನಿಗೂ ಸಂತೋಷವಾಗುತ್ತೆ'' ಎನ್ನುತ್ತಾ ಮಧುಕರ ಇದ್ದ ರೂಮಿಗೆ ನಡೆದರು.

ಆ ರಾತ್ರಿ ಊಟದ ಟೇಬಲ್ ಮುಂದೆ ಮತ್ತೆ ವಾಗ್ವಾದ ಪ್ರಾರಂಭವಾಗಿತ್ತು. ಯಾವುದೋ ಮೀಟಿಂಗ್ ಇದೆಯೆಂದು ಹೊರಗೆ ಹೋಗಿದ್ದ ಸದಾಶಿವ ಇನ್ನೂ ವಾಪಸ್ಸು ಬಂದಿರಲಿಲ್ಲ. ಭಾರ್ಗವ ತಟ್ಟೆ ಲೋಟಗಳನ್ನಿಟ್ಟು ಮಧುಕರನನ್ನು ಊಟಕ್ಕೆ ಎಬ್ಬಿಸಿದ. ಬಡಿಸಲು ತಾನೇ ನಿಂತ. ಮಾಲಾ ಪ್ರಶ್ನಾರ್ಥಕವಾಗಿ ಅವನನ್ನೇ ನೋಡಿ ಪ್ರಶ್ನಿಸಿದಳು.

''ನೀನು ಊಟ ಮಾಡುಲ್ವಾ ಭಾರ್ಗವ'' ಮಧುಕರ ಇಬ್ಬರನ್ನೂ ವಿಚಿತ್ರವಾಗಿ ನೋಡಿದ.

''ಆಮೇಲೆ ಮಾಡ್ತೀನಿ ಮಾಲಾ... ಅಪ್ಪನೂ ಬರಲಿ. ಅವರಿಗೆ ಬಡಿಸಿಬಿಟ್ಟು ಆಮೇಲೆ ನಾನೂ ಮಾವ ಊಟ ಮಾಡ್ತೀವಿ.''

''ಡ್ಯಾಡೀ ಎಷ್ಟು ಹೊತ್ತಿಗೆ ಬರ್ತಾರೋ ಏನೋ... ಇನ್ನೂ ಯಾಕೆ ಬಂದಿಲ್ಲ...?''

''ಮೀಟಿಂಗ್ ಇದೆ ಅಂತ ಹೊರಗೆ ಹೋಗಿದಾರೆ...'' ಅಪ್ಪ ಆ ವಿಷಯವನ್ನು ತನಗೆ ಹೇಳಿರಲಿಲ್ಲವೆನ್ನುವುದನ್ನು ಮಧುಕರ ಮಾತಿನಲ್ಲಿ ತೋರಿಸಿದ.

''ಡ್ಯಾಡೀ ಈಗಲೂ ಹೀಗೇ ಮಾಡ್ತಾರಾ? ಅವರ ಬಗ್ಗೆ ಯಾರಿಗೂ ಕೇರ್ ಇಲ್ಲವೇ

ಇಲ್ಲ, ಇನ್ನು ನಾನು ಬಂದೆನಲ್ಲ... ಅವರಿಗೆ ಸಾಕಷ್ಟು ರೆಸ್ಟ್ ಕೊಡಬೇಕು ನಾನು.'' ಅದಕ್ಕೆ ಇಬ್ಬರೂ ಉತ್ತರಿಸದಿದ್ದಾಗ ಕತ್ತೆತ್ತಿದ.

''ಅಡಿಗೆ ಯಾರು ಮಾಡಿದ್ದು? ನೀನೋ? ಭಟ್ಟರೋ....''

''ಮಾವಾನೇ ಮಾಡಿದ್ದು..''

''ಯಾಕೆ ನಿಂಗೆ ಅಷ್ಟೂ ತಿಳಿಯಲ್ವಾ ಭಾರ್ಗವ... ನಿಮ್ಮ ಮಾವನಿಗೂ ವಯಸ್ಸಾಗಿದೆ. ಲವರಿಗೆ ರೆಸ್ಟ್ ಬೇಕೂಂತ'' ಭಾರ್ಗವ ತಬ್ಬಿಬ್ಬಾದ. ಮಾಲಾ ಅಣ್ಣನ ಮೇಲೆ ರೇಗಿದಳು.

''ಭಾರ್ಗವ ಬಿ.ಕಾಂ. ಮಾಡಿ ಕಂಪ್ಯೂಟರ್ ಕೋರ್ಸ್ ಮಾಡಿಕೊಂಡು ಹೊರಗೆ ಕೆಲಸಕ್ಕೆ ಹೋಗ್ತಾನೆ... ಅವನೇನೂ ಅಡಿಗೆಯವನಲ್ಲ.''

''ನೀನು ಸುಮ್ಮನಿರು ಮಾಲಾ... ಅಡಿಗೆಯವರ ಮಗ ಅಡಿಗೆಯವನೇ.... ಆಫೀಸರ್ ಆಗಲು ಸಾಧ್ಯವಿಲ್ಲ..''

''ನೀನು ಹೀಗೆಲ್ಲ ಮಾತಾಡಬೇಡ ಮಧು, ನನಗೆ ಇಷ್ಟವಾಗುಲ್ಲ, ಭಾರ್ಗವ ಆಗಲಿ, ಭಟ್ಟರಾಗಲಿ, ಈ ಮನೆಯಲ್ಲಿ ಹೊರಗಿನವರಲ್ಲ, ಮನೆಯವರೇ. ಅಡಿಗೆಯವರು, ಕೆಲಸದವರು ಅಂತ ಚೀಪಾಗಿ ಮಾತನಾಡಬೇಡ.''

''ನನಗೆ ಹೇಳಿಕೊಡಬೇಡ... ನನಗೆ ಗೊತ್ತು ಯಾರ್‍ಯಾರನ್ನ ಎಲ್ಲೆಲ್ಲಿ ಇಟ್ಟಿರಬೇಕು ಅಂತ...'' ಭಾರ್ಗವ ಅವಮಾನದಿಂದ ಕೆಂಪಾಗಿದ್ದ. ಭಟ್ಟರು ಎದ್ದು ಬಂದಿದ್ದರು.

''ಏನಾಯ್ತೋ ಭಾರ್ಗವ... ಯಾಕೆ ಮಧು? ಅಡಿಗೆ ರುಚಿಯಾಗಿಲ್ವಾ ನಿನ್ನ ಇಷ್ಟದ ಅಡಿಗೆಯನ್ನೇ ಮಾಡಿದೀನಿ ನಾನು''

''ನೀವುಗಳೆಲ್ಲ ಸೇರಿ ಇವಳನ್ನು ಕೊಬ್ಬಿಸಿ ಬಿಟ್ಟಿದೀರಿ. ನನ್ನನ್ನ ಕಂಡರೆ ಮರ್ಯಾದೇನೇ ಇಲ್ಲ..''

''ಯಾಕಮ್ಮ ಮಾಲಾ... ಸುಮ್ಮನಿರಬಾರದಾ? ಎಷ್ಟೋ ವರ್ಷದಿಂದ ಹೊರಗೇ ಇದ್ದ ನಿನ್ನ ಅಣ್ಣ ಇವತ್ತು ತಾನೇ ವಾಪಸ್ಸು ಬಂದಿದಾನೆ. ಅಣ್ಣ ತಂಗಿ ಅಂತಂದ್ರೆ ಎಷ್ಟು ಪ್ರೀತಿಯಾಗಿರಬೇಕು, ಅದು ಬಿಟ್ಟು...''

''ಪ್ರೀತಿ ವಿಶ್ವಾಸವೆಲ್ಲಾ ಮಮ್ಮಿ ಸತ್ತು ಹೋದ ದಿನವೇ ಅವಳ ಹಿಂದೆ ಹೊರಟು ಹೋಯ್ತು ಭಟ್ಟರೇ... ಇಲ್ಲದಿದ್ದರೆ ಮನೆಯ ಮಗ ನಾನು, ಪರದೇಶಿ ತರಹ ಬೋರ್ಡಿಂಗ್ ಸ್ಕೂಲು, ಹಾಸ್ಟೆಲ್ಲು ಅಂತ ಹೊರಹೊರಗೇ ಯಾಕೆ ಇರಬೇಕಾಗಿತ್ತು?'' ಭಟ್ಟರು ಪೆಚ್ಚಾದರು. ಮನದ ಕಹಿಯನ್ನೆಲ್ಲಾ ಕಕ್ಕುತ್ತಿದಾನೆ. ಮಾತನಾಡದೇ ಮೌನವಾಗಿರುವುದೇ ವಾಸಿ ಅಂತಂದುಕೊಂಡರು. ಮಾಲಾ ಅಳುತ್ತಾ, ಊಟ ಮಾಡದೇ ಎದ್ದು ಹೋಗಿದ್ದಳು. ಭಟ್ಟರು ತಾವೇ ಬಡಿಸಲು ನಿಂತರು. ಅವಳ ಹಿಂದೆ ಭಾರ್ಗವ ಹೋಗದೆ ಅಡಿಗೆ ಮನೆಗೆ ಹೋದುದ್ದನ್ನು ಗಮನಿಸಿ ಮಧು ಅನ್ನಕ್ಕೆ ಕೈ ಹಾಕಿದ.

ಮಧು ಊಟ ಮುಗಿಸಿ ಎದ್ದು ತನ್ನ ರೂಮಿಗೆ ಹೋದ ಮೇಲೆ ಭಾರ್ಗವ ತಟ್ಟೆಗೆ ಅಡಿಗೆಯನ್ನು ಬಡಿಸಿಕೊಂಡು ಮಾಲಾಳ ರೂಮಿಗೆ ಬಂದ. ಮಾಲಾ ಅವನನ್ನು ಕಂಡೊಡನೆ ಓಡಿಬಂದು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತಳು. ಭಾರ್ಗವ ಅವಳ ಬೆನ್ನಮೇಲೆ ಕೈಯಾಡಿಸಿ ಸಮಾಧಾನ ಮಾಡಿ, ಅನ್ನವನ್ನು ಕಲೆಸಿ, ತುತ್ತು ಮಾಡಿ ಅವಳಿಗೆ ತಿನ್ನಿಸಿದ. ಅವನಿಗೂ ಮನಸ್ಸು ಕೆಟ್ಟುಹೋಗಿತ್ತು. ಮಧುಕರನ ವರ್ತನೆ ಚಿಂತೆಯನ್ನು ಹೆಚ್ಚಿಸಿತ್ತು. ಅಷ್ಟರಲ್ಲಿ ಸದಾಶಿವ ಫೋನು ಮಾಡಿ, ತಾನು ಮೀಟಿಂಗ್‌ನಿಂದ ಬರುವುದು ತಡವಾಗುತ್ತದೆಂದೂ, ಎಲ್ಲರೂ ಊಟ ಮಾಡಬೇಕೆಂದೂ, ಯಾರೂ ತನಗಾಗಿ ಕಾಯಬಾರದೆಂದೂ ತಿಳಿಸಿದ್ದ. ಭಾರ್ಗವನಿಗೆ ಊಟ ಸೇರಲಿಲ್ಲ. ತಿಂದ ಶಾಸ್ತ್ರಮಾಡಿ ಮಲಗಿದ. ಭಟ್ಟರು ತಿಳಿಮಜ್ಜಿಗೆ ಕುಡಿದು ಮಲಗಿದರು.

* * * *

ರಾತ್ರಿ ನಡೆದುದನ್ನೆಲ್ಲಾ ಮಾಲಾ ಡ್ಯಾಡಿಗೆ ವರದಿ ಒಪ್ಪಿಸಿದಳು. ಮುದ್ದಿನ ಮಗಳು ಅಳುತ್ತ ನುಡಿದಾಗ ಸದಾಶಿವನ ಆತಂಕ ಹೆಚ್ಚಾಗಿತ್ತು. ಈ ಮಧುಗೆ ಏನಾಗಿದೆ ? ಯಾಕೆ ಹೀಗಾಡ್ತಾನೆ? ಸ್ನೇಹಿತರು ಅವನ ತಲೆ ಕೆಡಿಸಿರಬಹುದೆ? ಅವನೊಡನೆ ಮಾತನಾಡಬೇಕೆಂದುಕೊಂಡು ಅವನನ್ನು ಆಫೀಸಿಗೆ ಬರುವಂತೆ ಹೇಳಿ ತಿಂಡಿ ಕಾಫಿ ಮುಗಿಸಿ, ಭಾರ್ಗವ ನೊಡನೆ ಆಫೀಸಿಗೆ ಹೊರಟುಬಿಟ್ಟ, ಮಾಲಾ ಕಾಲೇಜಿಗೆ ಹೋಗಿದ್ದಳು. ''ಭಟ್ಟರೇ ನನಗೂ ತಿಂಡಿ ಕಾಫಿ ಕೊಡಿ'' ಎಂದು ಕುಳಿತವನನ್ನು ಫೋನಿನ ಗಂಟೆ ಕರೆಯಿತು.

ಅತ್ತಲಿಂದ ಯಾರದೋ ಧ್ವನಿ... ''ಮಹಾದೇವ ಭಟ್ರು ಇದಾರಾ ?'' ಯಾರೋ ಕೇಳುತ್ತಿದ್ದರು.

''ಭಟ್ರೇ ನಿಮಗೆ ಫೋನು'' ಎನ್ನುತ್ತಾ ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಂಡ. ಭಟ್ಟರು ''ಅಯ್ಯಯ್ಯೋ...'' ಎಂದು ತಲೆಯ ಮೇಲೆ ಕೈ ಹೊತ್ತು ಕುಸಿದು ಕುಳಿತಾಗ ಗಾಬರಿಯಿಂದ ಎದ್ದು ಬಂದ. ಭಟ್ಟರು ಅಳುತ್ತಿದ್ದರು.

''ಯಾಕೆ ಭಟ್ಟರೇ ಅಳ್ತಿದೀರಿ ? ಏನಾಯ್ತು? ಯಾರದ್ದು ಫೋನು ?''

''ಊರ್ನಿಂದ ಕಣಪ್ಪಾ... ಕಾವೇರಿ ನದೀಲಿ ಮುಳುಗಿಬಿಟ್ಟಳಂತೆ... ಬಾರ್ಗವ ಅನಾಥನಾಗಿಹೋದ...'' ಮಧುಕರ ದಿಗ್ಮೂಢನಾಗಿ ಹಾಗೇ ನಿಂತ...

ಕಾವೇರಿ ತೀರಿ ಹೋದಳು. ಭಾರ್ಗವನ ತಾಯಿ ಸತ್ತುಹೋದಳು. ನನ್ನಂತೆಯೇ ಭಾರ್ಗವನಿಗೆ ತಾಯಿ ಇಲ್ಲ, ಯಾಕೋ ಈ ಅನಿಸಿಕೆ ಹಿತವೆನಿಸಲಿಲ್ಲ, ಮನಸ್ಸಿಗೆ ಮಂಕು ಕವಿದಂತಾಗಿತ್ತು.

''ನಾನು ಈಗಲೇ ಊರಿಗೆ ಹೋಗಬೇಕು. ಭಾರ್ಗವನಿಗೆ ಫೋನು ಮಾಡಿಬಿಡು...'' ಮಧುಕರ ಅಪ್ಪನಿಗೆ ಫೋನು ಮಾಡಿ ವಿಷಯವನ್ನು ತಿಳಿಸಿದ. ತಕ್ಷಣವೇ

ಸದಾಶಿವ ಭಾರ್ಗವನೊಂದಿಗೆ ಮನೆಗೆ ಬಂದ. ಭಟ್ಟರು ಭಾರ್ಗವನನ್ನು ತಬ್ಬಿಕೊಂಡು ಗೋಳಾಡಿದರು.

''ಸಮಾಧಾನ ಮಾಡ್ಕೊಳ್ಳಿ ಭಟ್ರೇ... ನೀವೇ ಹೀಗಾಡಿದ್ರೆ, ಭಾರ್ಗವನಿಗೆ, ಮಾಲಾಳಿಗೆ ಸಮಾಧಾನ ಹೇಳೋರು ಯಾರು ?''

''ಮಾಲಾಳಿಗೆ ತಿಳಿಸೋದೇ ಬೇಡ. ಅವಳ ಹೃದಯ ಒಡೆದುಹೋಗುತ್ತದೆ.'' ಭಾರ್ಗವ ನುಡಿದಾಗ ಮಧು ತಂದೆಯ ಕಡೆ ನೋಡಿದ.

''ನಾವೆಲ್ಲಾ ಈಗಲೇ ಊರಿಗೆ ಹೊರಡೋಣ. ನಾನು ಮಾಲಾಳಿಗೆ ಫೋನು ಮಾಡ್ತೀನಿ'' ಎಂದ ಸದಾಶಿವನನ್ನು ಭಟ್ಟರು ತಡೆದರು.

''ಬೇಡ ರಾಯರೇ, ನಾನು ಭಾರ್ಗವ ಇಬ್ಬರೂ ಹೋಗಿ ನೋಡ್ತೀವಿ... ಏನಾಯ್ತೋ ಏನು ಕತೆಯೋ ತಿಳೀಲಿಲ್ಲ.''

''ಅದಕ್ಕೇ ಹೇಳಿದ್ದು... ಕಾರ್ನಲ್ಲೇ ಎಲ್ಲರೂ ಹೋಗೋಣ ಅಂತ.''

''ಬೇಡ ಅಪ್ಪಾ... ನಿಮ್ಮ ಆರೋಗ್ಯಾನೂ ಅಷ್ಟು ಚೆನ್ನಾಗಿಲ್ಲ. ಅಷ್ಟು ದೂರ ನೀವ್ಯಾಕೆ ಬರಬೇಕು. ನಾನು, ಮಾವ ಹೋಗಿ ಅದೇನೇನು ಮಾಡಬೇಕೋ ಮಾಡ್ತೀವಿ.''

''ಹೌದು ಡ್ಯಾಡಿ, ಹೆಲ್ತ್ ಸರಿಯಿಲ್ಲ ಅಂತ ತಿಳಿದೂ ಅಷ್ಟು ದೂರ ಯಾಕೆ ಹೋಗಬೇಕು?...'' ಮಧೂ ಸಹ ಅದನ್ನೇ ಅನುಮೋದಿಸಿದ.

''ಹಾಗಲ್ಲಕಣೋ ಮಧು... ಕಾವೇರಮ್ಮ ನಿಮಗೂ ತಾಯಿಯಿದ್ದ ಹಾಗೆ. ಆಕೆಯ ಋಣವನ್ನು ಈ ಜನ್ಮದಲ್ಲಿ ತೀರಿಸೋಕ್ಕೆ ಆಗಲ್ಲ... ಏನಾಯ್ತೋ ಏನೋ ಮದುವೆಗೆ ಹೋಗಿ ಬರ್ತೀನಿ ಅಂತ ಹೋದವರು...'' ತಂದೆಯ ಕಣ್ಣಲ್ಲಿ ನೀರುಕ್ಕಿದಾಗ ಮಧು ಮುಜುಗರಗೊಂಡ. ಕಾವೇರಮ್ಮನಿಗಾಗಿ ತಂದೆ ಕಣ್ಣೀರು ಸುರಿಸುವುದೆಂದರೇ... ಸ್ವಂತ ಹೆಂಡತಿಯನ್ನು ನೆನೆಸಿಕೊಂಡು ಅತ್ತದ್ದು ನೆನಪಿಲ್ಲ... ಸ್ವಲ್ಪ ಅತಿ ಎನಿಸಿತು...

''ಭಾರ್ಗವ, ನಾನು ಮನೆಯಿಂದ ಹೊರಗೇ ಇದ್ದವನು. ಡ್ಯಾಡಿಯ ಯೋಗಕ್ಷೇಮವನ್ನು ನೋಡಿಕೊಂಡವನು ನೀನೇ... ಪ್ರಯಾಣದಿಂದ ತಂದೆಗೆ ತೊಂದರೆ ಯಾಗುತ್ತೋ ಇಲ್ಲವೋ ಅಂತ ಡಾಕ್ಟರನ್ನು ಕೇಳು. ಅವರು ಒಪ್ಪಿದರೆ ಕರೆದುಕೊಂಡು ಹೋಗ್ತು... ಆನೇಲೆ. .''

''ಹೌದು ಮಧು, ನೀನು ಹೇಳೋದು ಸರಿ. ಡಾಕ್ಟರನ್ನು ಕೇಳ್ತೀನಿ. ಅವರು ಹೇಳಿದ ಹಾಗೆ ಕೇಳೋಣ'' ಅಂತ ತಕ್ಷಣವೇ ಫ್ಯಾಮಿಲಿ ಡಾಕ್ಟರಿಗೆ ಫೋನು ಮಾಡಿದ. ಡಾಕ್ಟರು ಪ್ರಯಾಣ ಮಾಡುವುದು ಬೇಡ ಅಂತ ಸಲಹೆಯನ್ನಿತ್ತಾಗ ಉಳಿದವರಿಗೆ ನೆಮ್ಮದಿ ಎನಿಸಿತ್ತು. ಆದರೆ ಸದಾಶಿವ ಮಾತ್ರ ಚಡಪಡಿಸಿದ. ಅವರಿಬ್ಬರೂ ಹೊರಟು ನಿಂತಾಗ, ಭಾರ್ಗವನ ಕೈಗೆ ಸಾಕಷ್ಟು ಹಣವನ್ನು ಕೊಟ್ಟರು.

''ಊರು ತಲುಪಿದ ಕೂಡಲೇ ಫೋನು ಮಾಡು. ದುಡ್ಡು ಬೇಕಾದ್ರೆ ತಕ್ಷಣ ಕೇಳು.

ಸಂಕೋಚಪಟ್ಕೋಬೇಡ.'' ತಂದೆ ಭಾರ್ಗವನ ಬೆನ್ನು ಸವರಿ ನುಡಿದಾಗ, ಮಧುಕರ ಅಸಹನೆಯಿಂದ ಅತ್ತಿತ್ತ ಚಲಿಸಿದ. ಭಾರ್ಗವ ಹೆಚ್ಚಿಗೆ ಮಾತನಾಡದೇ ಹೊರಡಲು ಸಿದ್ಧನಾದ. ಭಟ್ಟರು ಮಧುಕರನ ಬಳಿಗೆ ಬಂದರು. ''ಹುಶಾರು ಕಣಪ್ಪಾ... ನಿಮ್ಮ ತಂದೇನ ಈಗ ನೀನೇ ಚೆನ್ನಾಗಿ ನೋಡ್ಕೋಬೇಕು... ಅವರ ಡಾಕ್ಟರನ್ನ ಕರೆಸಿ, ಬಿ.ಪಿ., ಶುಗರ್ ಎಲ್ಲಾ ಟೆಸ್ಟ್ ಮಾಡಿಸು. ಹಾಗೇ ಮಾಲಾನ್ನ ಚೆನ್ನಾಗಿ ನೋಡ್ಕೋಪ್ಪಾ... ಕಾವೇರಿ ಈ ಮನೆಗೆ ಬಂದಾಗ ಮಾಲಾ ಒಂದು ವರ್ಷದ ಕೂಸು... ಸ್ವಂತ ತಾಯಿಯ ತರಹವೇ ಪ್ರೀತಿಸುತ್ತಿದ್ದಳು. ಆ ಹುಡುಗಿಗೆ ತುಂಬಾ ದುಃಖ ಆಗುತ್ತೆ. ಈಗ ನೀನೇ ಸಮಾಧಾನ ಹೇಳಬೇಕು...'' ಮಧು ಸುಮ್ಮನೇ ತಲೆಯಾಡಿಸಿದ.

ಅವರಿಬ್ಬರೂ ಬಸ್‌ಸ್ಟ್ಯಾಂಡ್‌ಗೆ ಹೊರಟುಹೋಗಿದ್ದರು. ಸದಾಶಿವ ವ್ಯಥೆಯಿಂದ ಕುಳಿತಿದ್ದ. ತಂದೆಗೆ ಏನು ಸಮಾಧಾನ ಹೇಳಬೇಕೋ ಅವನಿಗೆ ತಿಳಿಯಲಿಲ್ಲ. ಏನೇ ಮಾತನಾಡಿದರೂ, ಅವರ ಟೆನ್ಷನ್ ಹೆಚ್ಚಾಗುತ್ತೆ. ಏನಾದರೂ ಹೆಚ್ಚುಕಡಿಮೆ ಆದರೆ...? ಆಗ ತನ್ನದೇ ತಪ್ಪಾಗುತ್ತದೆ ಎಂದು ಆಲೋಚಿಸುತ್ತಾ ಕುಳಿತಿದ್ದವನನ್ನು ತಂದೆಯ ದನಿ ಎಚ್ಚರಿಸಿತು.

''ಮಾಲಂಗೆ ಬರ್ತಿದ್ದ ಹಾಗೇ ಏನೂ ಹೇಳೋದು ಬೇಡ. ನಿಧಾನವಾಗಿ ಸಮಯ ನೋಡಿ ಹೇಳೋಣ. ಆ ಮಗುವಿನ ಹೃದಯ ಒಡೆದುಹೋಗುತ್ತದೆ. ಆಕೆಯಂತೂ ಒಂದು ದಿನವೂ ಉದಾಸೀನ ಮಾಡಿದವರಲ್ಲ. ಪಾಪ ಒಳ್ಳೆಯ ಹೆಂಗಸು... ಯಾಕೆ ಇಂತಹ ದುರ್ಮರಣ ಕಾದಿತ್ತೋ ಆಕೆಗೆ...'' ತಂದೆ ಲೊಚಗುಟ್ಟಿದಾಗ ಅವನಿಗೆ ಏನು ಹೇಳಬೇಕೋ ತಿಳಿಯಲಿಲ್ಲ.

ಎಂದಿಗಿಂತ ಬೇಗ ಮನೆಗೆ ಬಂದಳು ಮಾಲಾ. ಮನೆಯ ವಾತಾವರಣ ಎಂದಿನಂತಿಲ್ಲ ಅಂತೆನ್ನಿಸಿತ್ತು. ತಂದೆ ಮನೇಲೇ ಇದಾರೆ... ಏನು ವಿಷಯವಿರಬಹುದು? ''ಯಾಕೆ ಡ್ಯಾಡೀ... ಆಫೀಸಿಗೆ ಹೋಗಲಿಲ್ವಾ? ಹುಶಾರಾಗಿದೀರಿ ತಾನೇ?'' ತಂದೆಯ ಬಳಿ ನಿಂತು ಕೇಳಿದಳು.

''ಹೂಂನಮ್ಮಾ ಹುಶಾರಾಗಿದೀನಿ. ಇಷ್ಟು ಬೇಗ ಕ್ಲಾಸುಗಳು ಮುಗಿದುಹೋಯ್ತಾ?''

''ಹೂಂ ಆಯ್ತು. ಭಟ್ಟರು ಎಲ್ಲಿ ಕಾಣ್ತಿಲ್ಲ. ನನಗೀಗ ಅರ್ಜೆಂಟಾಗಿ ಕಾಫಿ ಬೇಕು. ಹಾಗೇ ತಿಂಡೀನೂ... ಏನು ತಿಂಡಿ ಮಾಡಿದಾರೆ?''

''ಭಟ್ಟರು ಮನೇಲಿಲ್ಲ. ಅರ್ಜೆಂಟಾಗಿ ಊರಿಗೆ ಹೋದ್ರು... ಅವರ ಕಡೆಯವರು ಯಾರೋ ತೀರಿಕೊಂಡ್ರಂತೆ...'' ಮಧು ಕಟುವಾಗಿ ನುಡಿದಾಗ ಮಾಲಾ ಉರಿದುಬಿದ್ದಳು.

''ನಾನು ನಿನ್ನನ್ನು ಕೇಳಲಿಲ್ಲ... ಭಾರ್ಗವನೂ ಇಲ್ವಾ ಮನೇಲಿ?''

''ಅವನೂ ಅವರ ಜೊತೆಯಲ್ಲಿ ಹೋಗಿದಾನೆ. ಈಗಲೇ ಹೋಟೆಲ್ಲಿಗೆ ಹೋಗಿ ಕಾಫಿ ತಿಂಡಿ ತಿಂದು ಬಂದರಾಯ್ತು... ನಡೀರಿ...''

''ಹೋಟೆಲ್ಲಾ? ನನಗೆ ಭಟ್ಟರು ಕೊಡುವ ಬಿಸಿ ಬಿಸಿ ಕಾಫಿ, ತಿಂಡೀನೇ ಇಷ್ಟ... ಕಾವೇರಮ್ಮನಾದ್ರೂ ಇದ್ದಿದ್ರೆ... ಅವರು ಯಾವಾಗ ಬರ್ತಾರೋ...'' ತಂದೆ ಮಗ ಮುಖ ಮುಖ ನೋಡಿಕೊಂಡರು.

''ಯಾರ ಮೇಲೂ ಹಾಗೆ ಡಿಪೆಂಡೆಂಟ್ ಆಗಿರಬಾರದು ಮಾಲು... ಸಮಯಾ ಅಂತಂದ್ರೆ ಎಲ್ಲಾ ಕೆಲಸವೂ ಗೊತ್ತಿರಬೇಕು...''

''ಮಹಾ ನಿನಗೆ ಎಲ್ಲಾ ಗೊತ್ತಿರೋನ ಹಾಗೆ ಮಾತನಾಡಬೇಡ ಸುಮ್ನಿರು. ಅವನಿಗೆ ಮಧ್ಯೆ ಮಾತ್ನಾಡಬೇಡ ಅಂತ ಹೇಳಿ ಡ್ಯಾಡೀ...''

''ಪ್ಲೀಸ್ ಜಗಳ ಆಡಬೇಡಿ... ನೀವು ಇಬ್ಬರೂ ಅಣ್ಣತಂಗಿಯರು, ದಾಯಾದಿಗಳಲ್ಲ...''

''ಅದನ್ನು ಅವನಿಗೆ ಹೇಳಿ ಡ್ಯಾಡೀ... ಸದಾ ನನ್ನನ್ನ ಪೀಡಿಸ್ತಾನೆ.''

''ಮೊದಲಿನ ಹಾಗೆ ನೀವಿಬ್ಬರೂ ಚಿಕ್ಕವರಲ್ಲ. ಈಗ ಬೆಳೆದು ದೊಡ್ಡವರಾಗಿ ದೀರಿ.... ಜವಾಬ್ದಾರಿಯನ್ನು ತಿಳ್ಕೋಬೇಕು. ಅದು ಬಿಟ್ಟು ಸದಾ ಹೀಗೆ ಕಿತ್ತಾಡುತ್ತಿದ್ದರೆ ಹೇಗೆ... ಅವಳಿಗಂತೂ ಹುಡುಗುಬುದ್ಧಿ ಅಂತಂದ್ರೆ ನಿನಗಾದ್ರೂ ತಿಳಿಯಬೇಡ್ವಾ ಮಧು ?''

''ನಾನೀಗ ಏನಂದೆ?... ಸದಾ ಹೊರಗೆ ಇದ್ದೋನು ನಾನು... ನನ್ನನ್ನ ಹೊರಗಿನವನನ್ನಾಗೇ ಮಾಡಿಬಿಟ್ಟಿದೀರಿ... ನನಗೆ ಯಾವ ಹಕ್ಕೂ ಇಲ್ಲವಾ?''

''ಹಾಗಲ್ಲ ಮಧು... ಇದು ಜಗಳವಾಡುವ ಅಥವಾ ಹಕ್ಕು ಸಾಧಿಸುವ ಸಮಯ ವಲ್ಲ. ಒಂದು ವೇಳೆ ನನಗೇ ಏನಾದ್ರೂ ಆಗಿದ್ದಿದ್ರೆ ಈಗ ನೀವಿಬ್ರೂ ಏನು ಮಾಡ್ತಿದ್ರಿ?'' ಇಬ್ಬರೂ ಬೆಚ್ಚಿಬಿದ್ದರು. ಮಾಲಾ ತಂದೆಯ ಬಳಿಗೆ ಸರ್ರನೆ ಬಂದಳು.

''ಪ್ಲೀಸ್ ಹೀಗೆಲ್ಲಾ ಮಾತಾಡಬೇಡಿ ಡ್ಯಾಡೀ... ಮಮ್ಮಿಯ ನೆನಪೇ ನನಗಿಲ್ಲ.'' ಮಾಲಾ ಅಳತೊಡಗಿದಾಗ ಸದಾಶಿವ ಅವಳ ಬೆನ್ನ ಮೇಲೆ ಕೈಯಾಡಿಸಿದರು. ಮಧುಕರ ನಿಗೆ ಏನನ್ನಿಸಿತೋ ಅವನೇ ಅಡಿಗೆಮನೆಗೆ ಹೋಗಿ ಕಾಫಿಯನ್ನು ಬೆರೆಸಿ ತಂದು ಅವಳ ಮುಂದೆ ಹಿಡಿದ.

''ಮೊದಲು ಕಣ್ಣೀರನ್ನು ಒರೆಸಿಕೊಂಡು ಈ ಕಾಫೀನ ಕುಡಿ... ಇಲ್ಲದಿದ್ದರೆ ಕಾಫಿಯೂ ಉಪ್ಪುಪ್ಪಾಗುತ್ತೆ.'' ಅವನು ನಗುತ್ತಾ ನುಡಿದಾಗ ಅವಳಿಗೆ ನಗಬೇಕೆನಿಸಲಿಲ್ಲ.

''ನನಗೂ ಇದ್ದರೆ ಕೊಡಯ್ಯಾ... ಸಕ್ಕರೆ ಹಾಕಬೇಡ...'' ಅವನು ಕೆಲವೇ ನಿಮಿಷ ಗಳಲ್ಲಿ ಮತ್ತೆ ಕಾಫಿಯನ್ನು ಬೆರೆಸಿದ. ಅಷ್ಟರಲ್ಲಿ ಅವಳು ಕಾಫಿಯನ್ನು ಮುಗಿಸಿದ್ದಳು.

"ಅಲ್ಲಾ ಡ್ಯಾಡೀ, ಭಾರ್ಗವಂಗಾದ್ರೂ ತಿಳಿಯಬೇಡ್ವಾ ? ಎಲ್ಲರೂ ಒಟ್ಟಿಗೇ ಊರಿಗೆ ಹೊರಟುಹೋದರೆ ಏನು ಗತಿ ಅಂತ...?"

"ಅವರುಗಳು ಬರೋವರೆಗೂ ಹೋಟಲ್ಲೇ ಗತಿ..." ತಮಾಷೆ ಮಾಡಿದ.

"ನನಗೆ ಅದೆಲ್ಲಾ ಅಭ್ಯಾಸವಿಲ್ಲ."

"ಕೆಲವು ಸಾರಿ ಎಲ್ಲಾ ಅಡ್ಜಸ್ಟ್ ಮಾಡ್ಕೋಬೇಕಾಗುತ್ತೆ. ಅಲ್ವಾ ಡ್ಯಾಡೀ"

"ಹೌದಮ್ಮ... ಮಧು ಹೇಳೋದು ನಿಜ. ಜೀವನದಲ್ಲಿ ಎಷ್ಟೆಷ್ಟೋ ವಿಷಯಗಳಿಗೆ ಅಡ್ಜಸ್ಟ್ ಆಗಬೇಕಾಗುತ್ತೆ... ಈಗ ನೀನು ಇನ್ನೂ ಚಿಕ್ಕವಳು. ಅನುಭವ ಸಾಲದು... ಮನೇಲೇ ಮುದ್ದಾಗಿ ಬೆಳೆದವಳು... ಅದಕ್ಕೇ ನಿನಗೇನೂ ತಿಳಿಯದು... ಈಗ ನೋಡು ಇವನನ್ನ... ಹತ್ತಾರು ವರ್ಷ ಹೊರಗೇ ಇದ್ದುದರಿಂದ ಸಾಕಷ್ಟು ಅನುಭವಗಳಾಗಿವೆ. ತಿಳುವಳಿಕೆ ಬಂದಿದೆ." ಹೌದು ಎನ್ನುವಂತೆ, ಮಧು ತಲೆಯಾಡಿಸಿ ಅವಳ ಕಡೆ ನೋಡಿದ. ಅವಳು ಮೂತಿ ಸೊಟ್ಟಗೆ ಮಾಡಿದಳು. ಅವನು ಕಣ್ಣು ಬಿಟ್ಟು ಹೆದರಿಸಿದ. ಅವಳು ಕಿಲಕಿಲನೆ ನಕ್ಕಳು.

* * * *

ನಾಲ್ಕಾರು ದಿನಗಳು ಕಳೆದರೂ ಭಾರ್ಗವನಾಗಲೀ, ಭಟ್ಟರಾಗಲೀ ಯಾವ ವಿಷಯವನ್ನೂ ತಿಳಿಸಿರಲಿಲ್ಲ. ಸದಾಶಿವನಿಗೆ ಆತಂಕವಾಗಿತ್ತು. ಆದರೆ ಯಾರನ್ನು ಹೇಗೆ ವಿಚಾರಿಸುವುದೆಂದು ತಿಳಿಯದೇ ಸುಮ್ಮನಾಗಿದ್ದ. ಸಮೀಪದಲ್ಲಿದ್ದ ಕೇಟರಿಂಗ್ ಸರ್ವಿಸ್‌ನವರಿಂದ, ಊಟ ತಿಂಡಿಯ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಮಾಲಾಳ ಗೊಣಗಾಟ ದಿನಾ ಮುಂದುವರೆದಿತ್ತು.

"ಇದೇನು ಡ್ಯಾಡೀ ಅವರ‍್ಯಾರೂ ವಾಪಸ್ಸು ಬರಲೇ ಇಲ್ಲ. ನನಗೆ ಈ ಊಟ ಸೇರೋದೇ ಇಲ್ಲ."

"ಹಾಗಂದ್ರೆ ಹೇಗಮ್ಮಾ...? ಪಾಪಾ ಅಲ್ಲಿ ಏನು ತೊಂದರೆಯೋ ಏನೋ... ವಿಚಾರಿಸೋಣ ಅಂತಂದ್ರೆ ಫೋನು ನಂಬರ‍್ರು ಸಹ ಗೊತ್ತಿಲ್ಲ"

"ಭಾರ್ಗವಂಗೆ ಅಷ್ಟು ಜವಾಬ್ದಾರೀನಾದ್ರೂ ಬೇಡ್ವಾ! ನಿಮ್ಮ ಹೆಲ್ತ್ ಚೆನ್ನಾಗಿಲ್ಲ ಅಂತ ತಿಳಿದೂ ಹೀಗೆ ಮಾಡಬಹುದಾ ? ಅವನು ಬರಲಿ ಅವನಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ."

"ಈಗ ಮಧು ಬಂದಿದಾನಲ್ಲ ಅದಕ್ಕೇ ಧೈರ್ಯ... ಪಾಪ ಅವನೆಂದೂ ಊರಿಗೆ ಹೋದವನೇ ಅಲ್ಲ. ಏನು ಕೆಲಸ ಬಂತೋ ಏನೋ...?"

"ನೀನು ಯಾಕೆ ಹೀಗಾಡ್ತೀಯೋ... ನಂಗಂತೂ ಅರ್ಥವಾಗುಲ್ಲ..." ಮಧು ನುಡಿದಾಗ ಸದಾಶಿವ ಸುಮ್ಮನಿರು ಎನ್ನುವಂತೆ ಕಣ್ಣುಸಂಜ್ಞೆ ಮಾಡಿದ. ಅದನ್ನು ಮಾಲಾ ಗಮನಿಸಿದಳು.

''ಅದೇನದು ತಂದೆ ಮಗ ಕಣ್ಣಲ್ಲೇ ಮಾತ್ನಾಡಿ ಕೊಳ್ತಿದೀರಿ...?''

''ಏನಿಲ್ಲಮ್ಮಾ... ವಾದಿಸಬೇಡ ಅಂತ ಹೇಳಿದೆ ಅಷ್ಟೇ... ಅದಿರಲಿ ನಿನಗೆ ಪರೀಕ್ಷೆ ಯಾವಾಗ?''

''ಇನ್ನು ತುಂಬಾ ಟೈಂ ಇದೆ ಡ್ಯಾಡೀ... ನಾನು ಓದಿಕೊಳ್ತೀನಿ. ಪ್ಲೀಸ್ ನನಗೆ ಅಡ್ವೈಸ್ ಮಾಡಬೇಡಿ...''

' ಇಲ್ಲಮ್ಮಾ ನಾನು ಅಡ್ವೈಸ್ ಮಾಡುಲ್ಲ. ನಂಗೊತ್ತು ನೀನು ಓದಿನಲ್ಲಿ ಜಾಣೆ ಅಂತ. ಹೇಗೂ ದೊಡ್ಡವಳಾಗಿದೀಯ... ಸ್ವಲ್ಪ ಅಡಿಗೆ ಕೆಲಸ ಕಲಿತ್ಕೋ ಆಗ ಯಾರ ಮೇಲೂ ಡಿಪೆಂಡ್ ಆಗಬೇಕಾಗಿಲ್ಲ''

''ನೋ ವೇ... ಯಾಕೆ ಭಟ್ಟರು ರಿಟೈರ್‌ಮೆಂಟ್ ತಗೊಂಡ್ರಾ?'' ಅವಳು ನಕ್ಕರೂ ಆತ ನಗಲಿಲ್ಲ.

''ನಿನ್ನ ತಾಯಿ ಎಷ್ಟು ಚೆನ್ನಾಗಿ ಅಡಿಗೆ ಮಾಡ್ತಾ ಇದ್ದಳು ಗೊತ್ತಾ?''

''ಮಮ್ಮಿಗೆ ಅವರ ಮಮ್ಮಿ ಹೇಳಿಕೊಟ್ಟಿದ್ರು ಅಂತ ಕಾಣುತ್ತೆ. ನನಗೆ ಹೇಳಿ ಕೊಡೋಕೆ ಮಮ್ಮೀನೇ ಇಲ್ಲವಲ್ಲ... ಥೂ ಈ ಕಾವೇರಮ್ಮನೂ ಮಿಸ್ಸಿಂಗ್. ಮದುವೆ ಅಂತ ಹೋದೋರು ಅದೆಷ್ಟು ದಿನ ಆಯ್ತು... ಪತ್ತೇನೇ ಇಲ್ಲ... ಅಬ್ಸ್ಕಾಂಡಿಂಗ್ ಅಂತ ಪೇಪರ್ರಿನಲ್ಲಿ ಹಾಕಿಸಬೇಕು ಅಷ್ಟೇ...'' ಮಧು ತಂದೆಯ ಕಡೆ ನೋಡಿ ಕಿರುನಗೆ ನಕ್ಕಾಗ ಅವಳಿಗೆ ರೇಗಿತ್ತು.

''ನನ್ನ ಮಾತಿಗೆಲ್ಲಾ ನೀನ್ಯಾಕೆ ರಿಯಾಕ್ಟ್ ಮಾಡ್ತೀಯ...?''

''ನೀನು ಎಷ್ಟು ಚೈಲ್ಡಿಷ್ ಅಂತ ಯೋಚಿಸ್ತಿದ್ದೆ. ಅದಿರಲಿ, ನಾನು ನಿನಗೆ ಅಡಿಗೆ ಮಾಡೋದನ್ನ ಕಲಿಸಿಕೊಡ್ತೀನಿ ಕಲೀತೀಯಾ..?''

''ನಿನಗೆ ಬರುತ್ತಾ?... ಹಾಗಾದ್ರೆ ನೀನೇ ಯಾಕೆ ಮಾಡಬಾರದು? ನಾನ್ಯಾಕೆ ಕಲಿಯಬೇಕು...? ಹಾಗಾದ್ರೆ ನಾಳೆಯಿಂದ ನಿನ್ನದೇ ಅಡಿಗೆ...''

''ಹೋಗೇ ಹೋಗೆ... ಸುಮ್ಮನೆ ಹೇಳಿದೆ... ನನಗೇನೂ ಬೇಜಾರಿಲ್ಲ. ಎದುರು ಹೊಟೇಲ್ನಿಂದ ರಾಗಿಮುದ್ದೆ, ಸೊಪ್ಪಿನಸಾರು ತಂದು ತಿಂತೀನಿ. ನೀನೇ ಫಸ್ಸೀ...''

''ಇವತ್ತು ನಾಳೇಲಿ ಭಟ್ಟರು ಬರಬಹುದು. ಸುಮ್ಮನೇ ಯಾಕೆ ಮಾತು?'' ಸದಾಶಿವ ಇಬ್ಬರ ಮಾತನ್ನೂ ಕತ್ತರಿಸಿದರು.

ಆ ರಾತ್ರಿ ಭಟ್ಟರು ಒಬ್ಬ ಯುವಕನೊಂದಿಗೆ ಬಂದರು. ''ಇವನು ಮಂಜುನಾಥ ಅಂತ. ನಮ್ಮ ದೂರದ ನೆಂಟರ ಹುಡುಗ. ಸದ್ಯಕ್ಕೆ ಇಲ್ಲಿರಲಿ. ನಾನು ಬರುವುದು ಇನ್ನೂ ಹದಿನೈದು ಇಪ್ಪತ್ತು ದಿನಗಳಾಗುತ್ತವೆ. ಅಲ್ಲಿಯವರೆಗೆ ಅವನು ಇರಲಿ. ಇವನಿಗೆ ಮನೆಕೆಲಸ ಎಲ್ಲಾ ಬರುತ್ತದೆ.'' ಸದಾಶಿವ ತಲೆಯಾಡಿಸಿ ಭಟ್ಟರೊಡನೆ ಉಳಿದ ವಿಷಯವನ್ನು ವಿಚಾರಿಸಿದರು.

''ಹೊಳೆಗೆ ಸ್ನಾನಕ್ಕೆ ಅಂತ ಹೋಗಿದ್ದಳಂತೆ... ಕಾಲು ಜಾರಿ ಬಿದ್ದು ಬಿಟ್ಟಿದ್ದಾಳೆ. ತಲೆಗೆ ಬಂಡೆ ಬಡಿದು ಪ್ರಾಣ ಹೋಗಿದೆ. ತಿಳಿದದ್ದೇ ನಿಧಾನವಾಗಿ. ನಂತರ ಆಕ್ಸಿಡೆಂಟ್ ಕೇಸ್ ಅದೂ ಇದೂ ಅಂತ ಭಾಳ ಫಜೀತಿ ಆಯ್ತು ರಾಯರೇ...''

''ಭಾರ್ಗವ ಹೇಗಿದಾನೆ?....''

''ಹುಟ್ಟಿದಾರಭ್ಯ ತಾಯಿಯಿಂದ ದೂರ ಇದ್ದೋನೇ ಅಲ್ಲ... ಅಮ್ಮನ ಜೊತೆ ನಾನೂ ಬಲಬೇಕಾಗಿತ್ತು... ಒಬ್ಬಳನ್ನೇ ಕಳಿಸಬಾರದಾಗಿತ್ತು ಅಂತ ಲತ್ತಿದ್ದೇ ಅತ್ತಿದ್ದು. ಇನ್ನೂ ಸಮಾಧಾನ ಆಗಿಲ್ಲ''

''ಪಾಪ... ಅದು ಸಹಜ... ಎಷ್ಟಾಗಲೀ ಹೆತ್ತತಾಯಿ. ಹುಂ... ಆದದ್ದು ಆಗಿಹೋಯಿತು. ಎಷ್ಟೇ ಅತ್ತರೂ ಕಾವೇರಮ್ಮ ವಾಪಸ್ಸು ಬರ್ತಾರಾ?''

''ಡ್ಯಾಡೀ... ಕಾವೇರಮ್ಮನಿಗೆ ಏನಾಯ್ತು? ಅವರ್‍ಯಾಕೆ ವಾಪಸ್ಸು ಬರೋಲ್ಲವಂತೆ?'' ಎನ್ನುತ್ತಾ ಹಿಂದಿನಿಂದ ಮಾಲಾ ಕೇಳಿದಾಗ ಎಲ್ಲರೂ ಸ್ತಬ್ಧರಾಗಿ ಅವಳನ್ನೇ ನೋಡಿದರು. ಯಾರೂ ಮಾತಾಡದಿದ್ದಾಗ, ಅವಳು ಭಟ್ಟರನ್ನೇ ಪ್ರಶ್ನಿಸಿದಳು.

''ಏನು ಭಟ್ಟರೇ... ಒಬ್ಬರೇ ಬಂದ್ರಾ? ಭಾರ್ಗವ ಎಲ್ಲಿ? ಕಾವೇರಮ್ಮ ಎಲ್ಲಿ? ಅವರ್‍ಯಾಕೆ ಬರಲಿಲ್ಲ....'' ಭಟ್ಟರು ಉತ್ತರಿಸದೇ ಬಿಕ್ಕಿ ಬಿಕ್ಕಿ ಅತ್ತಾಗ ಮಧು ಅವಳ ಬಳಿಗೆ ಬಂದ.

''ಕಾವೇರಮ್ಮ ಆಕ್ಸಿಡೆಂಟ್‌ನಲ್ಲಿ ಹೋಗಿಬಿಟ್ಟರಂತೆ...'' ಇಷ್ಟೇ ಅವಳಿಗೆ ಕೇಳಿಸಿದ್ದು. ಅವಳು ಕುಸಿದು ಕುಳಿತಾಗ ಎಲ್ಲರಿಗೂ ಗಾಬರಿಯಾಯಿತು. ಭಟ್ಟರು ಅವಳ ಬಳಿಗೆ ಬಂದು ತಲೆ ನೇವರಿಸಿದರು.

''ಅತ್ತು ಬಿಡು ಕಂದಾ, ಅತ್ತು ಬಿಡು... ಚೆನ್ನಾಗಿ ಅತ್ತು ಬಿಡು... ಕಾವೇರಿ ನಮ್ಮನ್ನೆಲ್ಲಾ ಬಿಟ್ಟು ಹೋದಳು. ಅವಳಿನ್ನು ವಾಪಸ್ಸು ಬರುವುದಿಲ್ಲ.'' ಆದರೆ ಮಾಲಾ ಅಳಲಿಲ್ಲ. ದಿಗ್ಭ್ರಾಂತಳಾಗಿ ಕುಳಿತು ಅವರು ಹೇಳಿದುದನ್ನೆಲ್ಲಾ ಕೇಳಿಸಿಕೊಂಡಳು. ಸದಾಶಿವ ರಾಯರಿಗೆ ಆತಂಕವಾಯಿತು. ಏನಾಯ್ತಪ್ಪ ಈ ಹುಡುಗಿಗೆ ಎಂದುಕೊಂಡು ಡಾಕ್ಟರಿಗೆ ಫೋನು ಮಾಡಿದರು. ಡಾಕ್ಟರು ಬಂದು ಪರೀಕ್ಷಿಸಿ ಗಾಬರಿಪಡುವಂಥಾದ್ದು ಏನಿಲ್ಲವೆಂದು ಧೈರ್ಯ ಹೇಳಿ, ನಿದ್ದೆ ಬರುವಂಥ ಇಂಜೆಕ್ಷನ್ ಕೊಟ್ಟರು.

ಬೆಳಿಗ್ಗೆ ಅವಳು ಏಳುವಷ್ಟರೊಳಗೆ ಭಟ್ಟರು ಮತ್ತೆ ವಾಪಸ್ಸು ಹೊರಟುಹೋಗಿದ್ದರು. ಸದಾಶಿವ ಮಗನಿಗೆ, ಅವಳ ಮನ ಕೆಡುವಂತಹ ಮಾತುಗಳನ್ನಾಡಬಾರದೆಂದು ಎಚ್ಚರಿಕೆ ನೀಡಿದ್ದರು. ಎಂದಿನಂತೆ ತಿಂಡಿ ಕಾಫಿಯ ನಂತರ ಸಿದ್ಧಳಾಗಿ ಕಾಲೇಜಿಗೆ ಹೊರಟುನಿಂತಾಗ ಸದಾಶಿವ ರಾಯರಿಗೆ ನಿಜಕ್ಕೂ ಆತಂಕ ಹೆಚ್ಚಾಗಿತ್ತು. ಏನಾದರೂ ಹೇಳುವ ತವಕವಾದರೂ ತಡೆದುಕೊಂಡಿದ್ದರು. ಅವಳು ಚಪ್ಪಲಿ ಮೆಟ್ಟಿ ಹೊರಟಾಗ ಮಧು ತಂದೆಯ ಸಂಜ್ಞೆ ತಿಳಿದು ಅವಳ ಹಿಂದೆ ಹೊರಟ.

''ಐ ಆಮ್ ಆಲ್‌ರೈಟ್... ನಾನೊಬ್ಬೆ ಹೋಗ್ತೀನಿ. ನೀನೇನೂ ನನ್ನ ಹಿಂದೆ ಬರಬೇಡ'' ಎಂದು ಹೇಳಿ ಮುಂದೆ ಮುಂದೆ ಹೊರಟುಹೋಗಿದ್ದಳು. ಮಧು ಪೆಚ್ಚಾಗಿ ಅವಳು ಹೋದ ದಾರಿಯನ್ನೇ ನೋಡುತ್ತಿದ್ದ. ಒಳಗ್ನಿಂದ ಸದಾಶಿವ ಕರೆದರು.

''ಹೋಗಲಿ ಬಿಡು... ಕಾಲೇಜಿನಲ್ಲಿಸ್ನೇಹಿತೆಯರ ನಡುವೆ, ದುಃಖ ಮರೆಯುತ್ತೆ. ಆದರೆ ನನಗೆ ಒಂದೇ ಭಯ... ದುಃಖವನ್ನು ಒಳಗೇ ಅದುಮಿಟ್ಟುಕೊಂಡರೆ ಹಿಂಸೆಯಾಗುತ್ತೆ. ಒಂದೇ ಒಂದು ಹನಿ ಕಣ್ಣೀರು ಸುರಿಸಿಲ್ಲ.''

''ಅವಳ ಮನಸ್ನಲ್ಲಿ ಏನಿದೆಯೋ ಯಾರಿಗೆ ಗೊತ್ತು?''

* * * *

ರಾತ್ರಿ ಊಟದ ಸಮಯದಲ್ಲಿ ಮಾಲಾ ಮೌನವನ್ನು ಮುರಿದಳು. ''ಈ ವೀಕ್‌ಎಂಡ್‌ನಲ್ಲಿಕಾಲೇಜ್ನಿಂದ ಎಕ್ಸ್‌ಕರ್ಷನ್ ಹೊರಟಿದಾರೆ. ನಾನೂ ಹೋಗ್ತಾ ಇದೀನಿ. ಮೂರು-ನಾಲ್ಕು ದಿನದ ಟ್ರಿಪ್...'' ಅವಳು ತಲೆ ತಗ್ಗಿಸಿ ಊಟ ಮಾಡುತ್ತಿದ್ದಳು. ಅವಳ ಮನದಲ್ಲಿ ಏನಿದೆ ಅಂತ ತಿಳಿಯುವಂತಿರಲಿಲ್ಲ.

''ನನಗೆ ಐದು ಸಾವಿರ ರುಪಾಯಿ ಬೇಕು...''

''ಅಷ್ಟೊಂದು ಯಾಕೆ ?'' ಮಧು ಕೇಳಿದ.

''ನಿನಗ್ಯಾಕೆ ?'' ಕಟವಾಗಿ ಉತ್ತರಿಸಿದಳು.

''ನೀನು ಸುಮ್ನಿರು ಮಧು... ಎಷ್ಟು ಜನ ಹೋಗ್ತಿದೀರಿ? ಯಾರ್ಯಾರು ಹೋಗ್ತಿದೀರಿ?''

''ಆ ಡೀಟೈಲ್ಸ್ ಎಲ್ಲಾ ಬೇಕಾ ಡ್ಯಾಡೀ?... ಯಾಕೋ ಮೂಡೇ ಸರಿಯಾಗಿಲ್ಲ. ಒಂದೆರಡು ದಿನ ಹೋಗಿ ಬರೋಣ ಅಂತ ಅಂದ್ಕೊಂಡೆ... ನಿಮಗೆ ಇಷ್ಟವಿಲ್ಲದಿದ್ದರೆ ಬೇಡ ಬಿಡಿ...''

''ಛೆ... ಛೆ... ಹಾಗಲ್ಲಮ್ಮ... ಹೋಗಿ ಬಾ. ನಾಲ್ಕು ಕಡೆ ತಿರುಗಿದರೆ ನಿನ್ನ ಮನಸ್ಸು ಉಲ್ಲಾಸಗೊಳ್ಳುತ್ತೆ. ಸುಮ್ಮನೇ ಕೇಳಿದೆ...''

''ಥ್ಯಾಂಕ್ ಯೂ ಡ್ಯಾಡೀ... ನಾಳೆ ಅಡ್ವಾನ್ಸ್ ಕೊಡಬೇಕು... ಒಂದು ಸಾವಿರ ರೂಪಾಯಿ ಕೊಡಿ. ಆಮೇಲೆ ಉಳಿದುದನ್ನು ಕೊಡಿ'' ಅಷ್ಟು ಹೇಳಿ ತನ್ನ ಪಾಡಿಗೆ ತಾನು ಊಟ ಮುಗಿಸಿ ಎದ್ದು ಹೋದಳು.

ಮೂರು ನಾಲ್ಕು ದಿನಗಳು ಕಳೆದರೂ ಮಾಲಾ ಮನೆಗೆ ಬರದೇ ಇದ್ದಾಗ ಎಲ್ಲರಿಗೂ ಗಾಬರಿಯಾಗಿತ್ತು. ಕಾಲೇಜಿನಲ್ಲಿ ವಿಚಾರಿಸಿದಾಗ ಅವರುಗಳು ಟ್ರಿಪ್ ಹೋಗಿರಲೇ ಇಲ್ಲವೆಂದು ತಿಳಿಯಿತು. ಮಾಲಾ ಎಲ್ಲಿಗೆ ಹೋದಳು? ಯಾಕೆ ಹೋದಳು? ನಾನಾ ರೀತಿಯ ಆತಂಕಗಳು ಪ್ರಾರಂಭವಾದವು. ಎಂದೂ ಹೀಗೆಲ್ಲಾ ಸುಳ್ಳು

ಹೇಳಿದವಳಲ್ಲ. ಮನಸ್ಸಿಗೆ ಆದ ಆಘಾತದಿಂದ ಜೀವಕ್ಕೆ ಏನಾದರೂ ಅಪಾಯ ಮಾಡಿಕೊಂಡಿರಬಹುದೇ? ಸದಾಶಿವನ ಎದೆ ತಲ್ಲಣದಿಂದ ನಡುಗಿತು. ಪೋಲಿಸ್ ಕಂಪ್ಲೇಂಟ್ ಕೊಡಬೇಕೆಂದು ಮಾತನಾಡಿಕೊಳ್ಳುತ್ತಿರುವಾಗ ಮಂಜುನಾಥ ಮಾತನಾಡಿದ.

''ನಾನ್ನೊಂದು ಮಾತು ಹೇಳ್ತೀನಿ ರಾಯ್ರೇ... ನಮ್ಮೂರಿಗೆ ಏನಾದ್ರೂ ಹೋಗಿರಬಹುದಾ ಅಂತ... ಹೇಗೆ ಹೋಗೋದು, ಎಷ್ಟು ಖರ್ಚಾಗುತ್ತೆ ಅಂತ ನನ್ನನ್ನ ಕೇಳಿದ್ರು ..''

''ಅವತ್ತೇ ಹೇಳಬಾರದಾಗಿತ್ತಾ? ಎಂಥೋನೋ ನೀನು?'' ಮಧು ರೇಗಿ ಕೇಳಿದಾಗ ರಾಯರು ತಡೆದರು.

''ಹಾಗೇನಾದ್ರು ಅಲ್ಲಿಗೇ ಹೋಗಿದ್ದಿದ್ರೆ ಭಟ್ಟರು ಫೋನು ಮಾಡಿ ತಿಳಿಸಿರುತ್ತಿದ್ದರು...''

''ಹೇಳುವುದು ಬೇಡ ಅಂತ ಇವಳೇ ಹೇಳಿಕೊಟ್ಟಿದ್ದರೇ...''

''ನೋಡೋಣ, ನಾವೇ ಫೋನು ಮಾಡಿ ಕೇಳೋಣ...'' ಎನ್ನುತ್ತಾ ರಾಯರು ಭಟ್ಟರು ಕೊಟ್ಟಿದ್ದ ಫೋನು ನಂಬರಿಗೆ ಡಯಲ್ ಮಾಡಿದರು. ಆದರೆ ಅವಳು ಅಲ್ಲಿಗೆ ಬಂದಿಲ್ಲವೆಂದು ತಿಳಿದಾಗ ಕುಸಿದು ಕುಳಿತರು. ಮೈ ಬೆವತಿತು. ಮಧು ಡಾಕ್ಟರನ್ನು ಕರೆಸಿದ.

ಆತಂಕದಿಂದ ಬಿ.ಪಿ. ಹೆಚ್ಚಾಗಿದೆ. ಅವರಿಗೆ ರೆಸ್ಟ್ ಬೇಕು. ಯಾವುದಾದರೂ ನರ್ಸಿಂಗ್ ಹೋಂಗೆ ಸೇರಿಸುವುದೇ ಒಳ್ಳೆಯದು ಎಂದು ಡಾಕ್ಟರು ಹೇಳಿದಾಗ ಮಧುಕರ ಗಾಬರಿಯಿಂದ ಕಂಗೆಟ್ಟ. ತಕ್ಷಣವೇ ಮಂಜುನಾಥನ ಸಹಾಯದಿಂದ ಸಮೀಪದಲ್ಲಿದ್ದ ನರ್ಸಿಂಗ್ ಹೋಂಗೆ ಸೇರಿಸಿದ. ದಿಕ್ಕು ತೋಚದೇ ಡಾಕ್ಟರರನ್ನೇ ಸಲಹೆ ಕೇಳಿದ. ವಿಷಯ ತಿಳಿದ ಡಾಕ್ಟರು ಸೂಕ್ತವಾದ ಸಲಹೆಯನ್ನು ನೀಡಿದರು. ಅದರಂತೆ ಮಾಲಾಳ ಫೋಟೋ ಸಮೇತ ಪೇಪರ್ರಿನಲ್ಲಿ ಪ್ರಕಟಣೆಯನ್ನು ಹಾಕಿಸಿದ. ಮಾರನೇ ದಿನವೇ ಭಟ್ಟರು ಹಾಗೂ ಭಾರ್ಗವ ಇಬ್ಬರೂ ವಾಪಸ್ಸು ಬಂದರು. ಇದಕ್ಕೆಲ್ಲಾ ಭಾರ್ಗವನೇ ಕಾರಣ ಎಂಬಂತೆ ಮಧು ಅವನನ್ನೇ ಕೆಕ್ಕರಿಸಿ ನೋಡಿದ. ತನ್ನದೇ ತಪ್ಪು, ತಾನೇ ಅಪರಾಧಿ ಎಂಬಂತೆ ಭಾರ್ಗವ ತಲೆತಗ್ಗಿಸಿ ನಿಂತಾಗ, ಸದಾಶಿವ ಅವನಿಗೆ ಸಮಾಧಾನ ಹೇಳಿದರು.

''ನೀನು ಬಂದಾಯ್ತಲ್ಲ ನನಗಿನ್ಯಾವ ಆತಂಕವೂ ಇಲ್ಲ. ನಿನಗೆ ನಮ್ಮ ಮನೆಯ ಆಗುಹೋಗುಗಳೆಲ್ಲ ಚೆನ್ನಾಗಿ ಗೊತ್ತು. ಮೊದಲು ಮಾಲಾಳ ಸ್ನೇಹಿತೆಯರನ್ನೆಲ್ಲಾ ವಿಚಾರಿಸು. ಖಂಡಿತಾ ಸಿಗುತ್ತಾಳೆ. ಆ ಧೈರ್ಯ ನನಗಿದೆ.'' ಮಧು ತಂದೆಯನ್ನೇ ವಿಚಿತ್ರವಾಗಿ ನೋಡಿದ... ಮುಳ್ಳು ಚುಚ್ಚಿದಂತಾಗಿತ್ತು. ಅಸಹನೆಯಿಂದ ವಾರ್ಡಿನಿಂದ ಹೊರಬಂದು ನಿಂತ. ನಾನು ಈ ಮನೆಯ ಮಗ ; ನನಗಿಂತ ಈ ಭಾರ್ಗವನೇ ಹೆಚ್ಚು ಡ್ಯಾಡಿಗೆ... ಈ ಭಾರ್ಗವನ್ನ ಈ ಮನೆಯಿಂದ ಹೇಗಾದರೂ ಹೊರ ಹಾಕಬೇಕು. ಮೊದಲು ಮಾಲಾ ಮನೆಗೆ ವಾಪಸ್ಸು ಬರಲಿ, ಆಮೇಲೆ ಏನು ಮಾಡಬೇಕೋ ಅದನ್ನು ಮಾಡ್ತೀನಿ ಎಂದು ತನ್ನಲ್ಲೇ ನಿರ್ಧರಿಸಿಕೊಂಡ.

ಮಾರನೆಯ ದಿನ ಮಧ್ಯಾಹ್ನದ ನಂತರ ಮಾಲಾ ಮನೆಗೆ ವಾಪಸ್ಸಾದಳು. ಯಾರಾದರೂ, ಏನನ್ನಾದರೂ ಪ್ರಶ್ನಿಸುವ ಮೊದಲೇ ಅವಳು ಎದುರಿಗೆ ಕಂಡ ಭಾರ್ಗವ ನನ್ನು ಓಡಿ ಹೋಗಿ ತಬ್ಬಿಕೊಂಡು ಗೊಳೋ ಎಂದು ಅತ್ತಳು. ಮಧು ಹೋಗಿ ಅವಳನ್ನು ಹಿಂದಕ್ಕೆ ಎಳೆದ.

''ಇದೇನಿದು ಹುಚ್ಚಾಟ? ಹೇಳದೇ ಕೇಳದೇ ಎಲ್ಲಿಗೆ ಹೋಗಿದ್ದೆ? ನಿನ್ನಿಂದಲೇ ಡ್ಯಾಡಿಯ ಬಿ.ಪಿ. ಹೆಚ್ಚಾದದ್ದು... ಅವರಿಗೇನಾದ್ರೂ ಹೆಚ್ಚುಕಡಿಮೆ ಆದ್ರೆ ನಾನು ನಿನ್ನನ್ನು ಸುಮ್ಮನೇ ಬಿಡುಲ್ಲ.''

''ನೋಡೋ ಭಾರ್ಗವ ಹೇಗೆ ಬೈತಾ ಇದಾನೆ...'' ಕಣ್ಣೀರನ್ನು ಒರೆಸಿಕೊಳ್ಳುತ್ತಾ ನುಡಿದಳು.

''ಹೋಗಲಿ ಬಿಡು ಮಧು... ಇನ್ನೂ ಚಿಕ್ಕೋಳು...''

''ನೀನು ಸುಮ್ಮನಿರು... ನೀವುಗಳೇ ಅವಳನ್ನು ಕೊಬ್ಬಿಸಿರೋದು... ಚಿಕ್ಕೋಳಂತೆ ಚಿಕ್ಕೋಳು... ವಯಸ್ಸಿಗೆ ಬಂದ ಹುಡುಗಿ ಹೀಗೆ ಮನೆ ಬಿಟ್ಟು ಹೋದ್ರೆ... ಮನೆಯವರು ಟೆನ್ಷನ್‌ನಿಂದ ಕೊಲಾಪ್ಸ್ ಆಗ್ತಾರೆ... ಅಷ್ಟೇ.''

''ಹೀಗ್ಯಾಕೆ ಮಾಡ್ದೆ ಮಾಲಾ... ಯಾರಿಗಾದ್ರೂ ಹೇಳಿ ಹೋಗಬಾರದಾಗಿತ್ತಾ?''

''ಹುಂ... ಹೇಳಿದ್ಳು... ಸುಳ್ಳು ಹೇಳಿದ್ಳು... ನಮಗೇ ಸುಳ್ಳು ಹೇಳುವಂಥದ್ದು ಏನಾಯ್ತು?''

''ಹೋಗ್ಲಿ ಬಿಡಪ್ಪಾ... ಏನೋ ತಿಳುವಳಿಕೆ ಸಾಲದು... ಇನ್ನು ಮೇಲೆ ಈ ಕಂದ ಹೀಗೆಲ್ಲಾ ಮಾಡುಲ್ಲ... ಮುಂದೆಂದೂ ಹೀಗೆಲ್ಲಾ ಮಾಡುಲ್ಲ ಅಂತ ಸ್ಸಾರೀ ಕೇಳಿಬಿಡಮ್ಮ ನಿಮ್ಮಣ್ಣನಿಗೆ ಸಮಾಧಾನವಾಗುತ್ತೆ...''

''ಇಲ್ಲ ಭಟ್ಟರೇ... ನಾನ್ಯಾಕೆ ಇವನನ್ನು ಸಾರೀ ಕೇಳಬೇಕು... ನಾನೀಗಲೇ ಡ್ಯಾಡೀನ ನೋಡಬೇಕು... ಅವರನ್ನು ಸಾರಿ ಕೇಳ್ತೀನಿ...''

''ಭಟ್ಟರೇ ಇವಳನ್ನು ಕರೆದುಕೊಂಡು ಹೋಗಿ... ಆದರೆ ಅಪ್ಪನ ಜೊತೆ ಇವಳೇನೂ ಮಾತಾಡುವುದು ಬೇಡ... ಅವರ ಬಿ.ಪಿ. ಹೆಚ್ಚಾಗುತ್ತೆ.''

''ನೋಡಿ ಭಟ್ಟರೇ ಹೇಗೆ ಮಾತಾಡ್ತಾನೆ ಅಂತ... ನಾನೂ ಅಪ್ಪನಿಗೆ ಮಗಳೇ ಅಲ್ವಾ? ನನ್ನಿಂದ ಡ್ಯಾಡಿಯ ಬಿ.ಪಿ. ಹೆಚ್ಚಾಗುತ್ತಾ?''

''ಈಗ ವಾದ ಬೇಡ. ಮೊದಲು ನರ್ಸಿಂಗ್ ಹೋಂಗೆ ಹೊರಡಿ... ಹೋಗಪ್ಪಾ ಮಧು ಇವಳನ್ನು ಕರೆದುಕೊಂಡು ಹೋಗು...''

''ನಾನು ಇವನ ಜೊತೇಲಿ ಹೋಗುಲ್ಲ... ಭಾರ್ಗವ ನೀನು ಬರ್ತೀಯಾ ನನ್ನ ಜೊತೆಗೆ...''

''ಇಲ್ಲ... ಅವನು ಬರುಲ್ಲ, ಅವನಿಗೆ ಬೇರೆ ಕೆಲಸವಿದೆ. ನೀನು ಒಬ್ಬಳೇ

ಹೋಗು... ಮನೆಯಿಂದಾಚೆ ಹೋಗಿ ಹೊರಗೆಲ್ಲಾ ತಿರುಗಾಡ್ತೋಳಿಗೆ ಜೊತೆ ಯಾಕೆ?'' ಅಬ್ಬರಿಸಿದ.

''ನೀನು ಹೀಗೆಲ್ಲಾ ಮಾತಾಡಿದರೆ ನಾನು ಸೂಯಿಸೈಡ್ ಮಾಡ್ಕೋತೀನಿ ಅಷ್ಟೇ... ಆಗ ಇದಕ್ಕೆ ನೀನೇ ಕಾರಣ ಆಗ್ತೀಯ ಅಷ್ಟೇ...''

''ಪ್ಲೀಸ್ ಹೀಗೆಲ್ಲಾ ಮಾತ್ನಾಡಬೇಡ ಮಾಲಾ...'' ಭಾರ್ಗವನೆಂದ.

''ನಾಲೀ ಭಾರ್ಗವ... ನೋಡು ಹೇಗೆ ಕೆರಳಿಸ್ತಾನೆ...'' ಭಾರ್ಗವ ಮಧು ಕಡೆ ನೋಡಿದಾಗ ಅವನು ಕೆಂಗಣ್ಣಿನಿಂದ ಅವಳನ್ನೇ ನೋಡುತ್ತಿದ್ದ.

''ಮಾವಾ, ನೀವೇ ಇವಳನ್ನು ಕರೆದುಕೊಂಡು ಹೋಗಿ... ನಾನು ಅಡಿಗೆ ಮಾಡ್ತೀನಿ. ಆಮೇಲೆ ನಾನು ಕ್ಯಾರಿಯರ್ ತರ್ತೀನಿ'' ಎನ್ನುತ್ತಾ ಅವನು ಅಲ್ಲಿ ನಿಲ್ಲದೆ ಅಡಿಗೆಯ ಮನೆಯ ಕಡೆಗೆ ನಡೆದ. ಏನೂ ನಡೆದಿಲ್ಲವೆಂಬಂತೆ ಮಾಲಾ ಭಟ್ಟರೊಡನೆ ಮುಂಬಾಗಿಲನ್ನು ದಾಟಿದಾಗ ಮಧು ಬೆರಗಾದ. ''ಏನಾಗಿದೆ ಇವಳಿಗೆ? ಯಾಕೆ ಹಿಂಗೆ ಬಿಹೇವ್ ಮಾಡ್ತಾಳೆ? ಒಂದು ಡಿಸಿಪ್ಲೀನ್ ಬೇಡ್ವಾ?... ಎಲ್ಲರೂ ಸಿಕ್ಕಾಪಟ್ಟೆ ಮುದ್ದು ಮಾಡಿ ಕೆಡಿಸಿಬಿಟ್ಟಿದ್ದಾರೆ... ತಾನು ಹದಕ್ಕೆ ತರಲೇ ಬೇಕು'' ಎಂದುಕೊಂಡು ಸೊಟ್ಟನಗೆಯನ್ನು ನಕ್ಕ.

* * * *

ಎರಡು ದಿನಗಳ ಅಬ್ಸರ್ವೇಷನ್ ನಂತರ ಸದಾಶಿವ ರಾಯರು ಡಿಸ್ಚಾರ್ಜ್ ಆಗಿ ಮನೆಗೆ ಬಂದರು. ಭಾರ್ಗವ ಅವರ ಔಷಧೋಪಚಾರಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದುದರಿಂದ ಯಾರಿಗೂ ಆತಂಕವಿರಲಿಲ್ಲ. ಆದರೆ ಸದಾಶಿವರಾಯರು ಒಳಗೊಳಗೇ ಕೊರಗುತ್ತಿದ್ದುದು ಯಾರ ಗಮನಕ್ಕೂ ಬಂದಿರಲಿಲ್ಲ. ಮಾಲಾ ಮನೆಯಿಂದ ಸುಳ್ಳು ಹೇಳಿ ಯಾವುದೋ ಸ್ನೇಹಿತೆಯ ಮನೆಯಲ್ಲಿ ನಾಲ್ಕೈದು ದಿನಗಳು ಯಾಕೆ ಇದ್ದಳೆಂಬುದೇ ಅರ್ಥವಾಗಿರಲಿಲ್ಲ. ಕೇಳಿದಾಗ ಸಲೀಸಾಗಿ ಉತ್ತರ ಕೊಟ್ಟಿದ್ದಳು. ''ಯಾಕೋ ಏನೋ ಕಾವೇರಮ್ಮನ ನೆನಪು ಒತ್ತಿ ಒತ್ತಿ ಬರುತ್ತಿತ್ತು. ನನ್ನೊಡನೆ ಸರಿಯಾಗಿ ಮಾತನಾಡಿ, ನನಗೆ ಸಮಾಧಾನ ಹೇಳುವ ಭಾರ್ಗವನೂ ಇರಲಿಲ್ಲ. ಮಧು ನನಗೆ ಎಂದೂ ಅಷ್ಟು ಆತ್ಮೀಯನಾಗಲಿಲ್ಲ. ಟ್ರಿಪ್‌ಗೆ ಹೋಗದೆ ಯಾವುದೋ ಸ್ನೇಹಿತೆಯ ಮನೆಯಲ್ಲಿ ಇದ್ದು ಬರ್ತೀನಿ ಅಂದಿದ್ದರೆ ನೀವು ಒಪ್ಪಿಕಳಿಸ್ತಿದ್ರಾ ಡ್ಯಾಡೀ...?'' ಎಂದು ಅವರನ್ನು ಮರುಪ್ರಶ್ನಿಸಿದ್ದಳು. ಅವಳು ಮಾಡಿದ್ದು ಸರಿಯಲ್ಲವೆಂದು ತಿಳಿದಿದ್ದರೂ ದೂಷಿಸಿ ಅನ್ನುವುದರಲ್ಲಿ ಯಾವ ಅರ್ಥವೂ ಇಲ್ಲವೆಂದು ಅನ್ನಿಸಿದ್ದರಿಂದ ಸುಮ್ಮನಾಗಿದ್ದರು. ಮಧುಕರನಿಗೆ ಭಾರ್ಗವನನ್ನು ಕಂಡರೆ ಆಗುವುದಿಲ್ಲವೆನ್ನುವುದನ್ನೂ ಗಮನಿಸಿದ್ದರು.

ಆರು ವರ್ಷದವನಾಗಿದ್ದಾಗಿನಿಂದ ಆ ಮನೆಯಲ್ಲೇ ಬೆಳೆದು ಹಿರಿಮಗನಂತೆ ಸಹಾಯಕನಾಗಿದ್ದಾನೆ. ಈ ಮಾತು ಇವನಿಗೇಕೆ ಅರ್ಥವಾಗುವುದಿಲ್ಲವೋ...? ಅವನನ್ನು

ಪರಕೀಯನನಂತೆಯೇ ಕಾಣುತ್ತಾನೆ. ಇವನ ಒಳಿತಿಗಾಗಿಯೇ ಇವನನ್ನು ಮನೆಯಿಂದ ಹೊರಗಿರಿಸಿ ವಿದ್ಯಾವಂತನನ್ನಾಗಿ ಮಾಡಿದ್ದಾಯ್ತು. ಈಗ ಬೆಳೆದು ನಿಂತಿದ್ದಾನೆ. ವ್ಯವಹಾರ ತಿಳಿದವನಾಗಿದ್ದಾನೆ. ಇಬ್ಬರೂ ಅಣ್ಣ ತಮ್ಮಂದಿರಂತೆ ಅನ್ಯೋನ್ಯವಾಗಿದ್ದರೆ, ಈ ಮನೆ ನಂದನವನವಾಗುತ್ತದೆ ಇಲ್ಲದಿದ್ದರೇ... ಯಾಕೋ ಏನೋ ಆ ಆಲೋಚನೆಯೇ ಅಸಹನೀಯವೆನಿಸಿತು. ಈ ವಿಷಯದಲ್ಲಿ ಮಧುಕರನಿಗೆ ತಿಳುವಳಿಕೆ ಹೇಳುವುದು ಕಷ್ಟವೇ... ಅಲ್ಲದೇ ಹೇಳಿದರೆ, ಅವನು ತನ್ನ ಮಾತನ್ನು ತಳ್ಳಿಹಾಕಿಬಿಟ್ಟರೇ... ಏನು ಮಾಡ ಬೇಕೆಂದು ತಿಳಿಯದೇ ಚಡಪಡಿಸಿದರು.

ತಂದೆಗೆ ರೆಸ್ಟ್ ಕೊಡುವ ನೆವದಲ್ಲಿ ಮಧುಕರ ಅವರ ಬಿಸಿನೆಸ್ ವ್ಯವಹಾರಗಳನ್ನು ತಾನೇ ನೋಡಿಕೊಳ್ಳಲು ಪ್ರಾರಂಭಿಸಿದ. ಎಷ್ಟೋ ವಿಷಯಗಳನ್ನು ಭಾರ್ಗವನಿಂದ ತಿಳಿದುಕೊಂಡ. ಒಮ್ಮೊಮ್ಮೆ ಭಾರ್ಗವ ವ್ಯವಹಾರದಲ್ಲಿ ತನಗಿಂತ ಚತುರ ಎಂದು ತಿಳಿದಾಗ ಮನಸ್ಸು ಮುಳ್ಳಾಗುತ್ತಿತ್ತು. ಡ್ಯಾಡಿಯ ನಂಬುಗೆಯ ಬಂಟ ಇವನು. ಇವನನ್ನು ದೂರ ಮಾಡುವುದು ಸುಲಭವಲ್ಲ. ಆದರೆ ಇವನನ್ನು ದೂರ ಮಾಡದಿದ್ದರೆ ಒಂದು ದಿನ ಇವನೇ ಮಾಲಿಕನಾಗಿ ತನ್ನನ್ನೇ ದೂರ ಮಾಡುವ ಸಮಯ ಒದಗಿಬಿಟ್ಟರೇ ಎಂಬ ಆತಂಕವೂ ಕಾಡುತ್ತಿತ್ತು.

ಆಗ ಇವನಿಗೆ ಸಲಹೆಗಳನ್ನು ಇತ್ತವನು ಇವನ ಸ್ನೇಹಿತ ಧ್ರುವ. ಧ್ರುವ ಇವನ ಕಾಲೇಜಿನ ಸಹಪಾಠಿ. ಶ್ರೀಮಂತ ಕುಟುಂಬದವನು. ಹಣಕಾಸಿಗೆ ತೊಂದರೆ ಇರಲಿಲ್ಲ. ಧ್ರುವನ ಆಪ್ತಮಿತ್ರ ಪ್ರತಾಪ. ಇಬ್ಬರೂ ಹಾಸ್ಟೆಲ್ಲಿನ ಒಂದೇ ರೂಮಿನಲ್ಲಿರುತ್ತಿದ್ದರು. ಎದುರಿನ ರೂಮಿನಲ್ಲಿ ಮಧುಕರ ತನ್ನ ರೂಂಮೇಟ್ ಗಣೇಶನೊಂದಿಗೆ ಇದ್ದ. ಆದರೆ ಅವನೊಂದಿಗೆ ಹೆಚ್ಚಿನ ಸ್ನೇಹವನ್ನು ಬೆಳೆಸಲಿಲ್ಲ. ಧ್ರುವನ ಶ್ರೀಮಂತಿಕೆ, ಅವನ ಫ್ಯಾಷನ್ನು, ಸ್ಟೈಲು ಇವನನ್ನು ಆಕರ್ಷಿಸಿತ್ತು. ಅವನಂತೆಯೇ ಇರಬೇಕೆಂದು ಅವನನ್ನೇ ಅನುಕರಿಸುತ್ತಿದ್ದ.

ವಿದ್ಯಾಭ್ಯಾಸ ಮುಗಿಸಿ, ಅವನು ಮುಂಬೈಗೆ ವಾಪಸ್ಸು ಹೊರಟು ಹೋಗಿದ್ದ. ಇವನು ತನ್ನ ಮನೆಗೆ ವಾಪಸ್ಸಾಗಿದ್ದ. ಅವನು ಕೇಳಿಲ್ಲದಿದ್ದರೂ ಇವನು ತನ್ನ ಮನೆಯ ವಿಷಯಗಳನ್ನೆಲ್ಲ ಹೇಳಿಕೊಂಡಿದ್ದನಾದ್ದರಿಂದ ಈಗ ಅವನಿಗೆ ತನ್ನ ಸಮಸ್ಯೆಯನ್ನು ಹೇಳಿಕೊಳ್ಳಬೇಕೆನಿಸಿತ್ತು. ಅವನೊಡನೆ ಫೋನಿನಲ್ಲಿ ಮಾತನಾಡಿದ್ದ. ಅವನು ಪ್ರತಾಪ ನೊಡನೆ ಇವರ ಮನೆಗೇ ಬಂದು ಇಳಿದ. ಅವರವರಲ್ಲಿ ಏನು ಮಾತುಕತೆ, ಏನು ಚರ್ಚೆ ನಡೆಯಿತು ಎಂದು ಯಾರಿಗೂ ತಿಳಿಯದು. ಅದೇ ರಾತ್ರಿ, ರಾತ್ರಿಯ ಊಟದ ನಂತರ ಅವರಿಬ್ಬರೂ ವಾಪಸ್ಸು ಹೊರಟುಹೋಗಿದ್ದರು.

ಆ ನಂತರ ಮಧುಕರ, ಕಂಪೆನಿಯ ವಹಿವಾಟುಗಳ ವಿಷಯಗಳನ್ನೆಲ್ಲ ತಿಳಿದು ಕೊಂಡು ಹೆಚ್ಚು ಹೆಚ್ಚು ಆಸಕ್ತಿ ವಹಿಸಿ ತಾನೇ ಮಾಲೀಕನೆಂಬಂತೆ ವರ್ತಿಸಲಾರಂಭಿಸಿದ. ಸದಾಶಿವನಿಗೆ ಮಗನ ಮೇಲೆ ಅಭಿಮಾನದೊಂದಿಗೆ ಆತಂಕವೂ ಉಂಟಾಗಿತ್ತು. ಅವನು

ಭಾರ್ಗವನನ್ನು ಹೆಚ್ಚು ಹೆಚ್ಚು ದೂರ ಮಾಡುತ್ತಿದ್ದುದನ್ನು ಗಮನಿಸಿದರು. ತನ್ನ ನಂತರ, ಮಧುಕರ ಭಾರ್ಗವನನ್ನು ಈ ಮನೆಯಿಂದ ಹೊರಗೆ ಹಾಕುವುದು ಖಂಡಿತ. ಹಾಗಾಗದಿರುವಂತೆ ಏನಾದರೂ ಮಾಡಬೇಕೆಂದು ತಮ್ಮ ಲಾಯರೊಡನೆ ಮಾತನಾಡಿ ''ವಿಲ್ಲು'' ಬರೆಸಿದರು. ಈ ವಿಷಯ ಮನೆಯವರ್‍ಯಾರಿಗೂ ತಿಳಿಯದು.

*   *   *   *

ಮಧುಕರ ಬಿಸಿನೆಸ್ ವಿಷಯಕ್ಕೆ ಸಂಬಂಧಪಟ್ಟ ಒಂದು ಕಾನ್‌ಫರೆನ್ಸ್‌ಗೆಂದು ಸಿಂಗಾಪೂರ್‌ಗೆ ಹೋಗಿದ್ದ. ಅಲ್ಲಿ ಒಂದು ವಾರದ ಕೆಲಸವಿತ್ತು. ಅವನು ಹೊರಟ ಎರಡು ದಿನಗಳೊಳಗೆ ಸದಾಶಿವನಿಗೆ ಹಠಾತ್ತನೆ ಹೃದಯಾಘಾತವಾಯಿತು. ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿ, ಮಧುಕರನನ್ನು ಸಂಪರ್ಕಿಸಲು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಿರಲಿಲ್ಲ. ಸದಾಶಿವ ತಮ್ಮ ನೋವನ್ನು ನುಂಗಿಕೊಂಡು ಭಾರ್ಗವನೊಡನೆ ಮಾತನಾಡಿದರು. ಅದೇ ರಾತ್ರಿ ಹೃದಯಸ್ತಂಭನದಿಂದ ತೀರಿಕೊಂಡರು. ಈಗ ಭಾರ್ಗವನ ಜವಾಬ್ದಾರಿ ಹೆಚ್ಚಿತು. ಮಧುಕರನನ್ನು ಕಾಂಟ್ಯಾಕ್ಟ್ ಮಾಡುವುದು ಕಷ್ಟ ವಾಗಿತ್ತು. ಮಾಲಾಳನ್ನು ಸಮಾಧಾನಗೊಳಿಸುವುದು ಅತ್ಯಂತ ಕಷ್ಟಕರವಾಗಿತ್ತು. ಸಮೀಪದ ಬಂಧುಗಳಿಗೆ ವಿಷಯ ತಿಳಿಸಿ, ಅವರ ಸಲಹೆಯನ್ನು ಕೇಳಿದ. ಅವರುಗಳು ಯಾರೂ ಸರಿಯಾಗಿ ಯಾವ ಸಲಹೆಯನ್ನೂ ನೀಡಲಿಲ್ಲ. ಕಡೆಗೊಮ್ಮೆ ಮಧುಕರನೊಂದಿಗೆ ಸಂಪರ್ಕ ಸಿಕ್ಕಿ ಮಾತನಾಡಿದಾಗ ಅವನು ತಕ್ಷಣಕ್ಕೆ ತಾನು ಬರಲಾಗುವುದಿಲ್ಲವೆಂದೂ, ಅದೇನೇನು ಮಾಡಬೇಕೋ ಅದನ್ನೆಲ್ಲಾ ನೀನೇ ಮಾಡು ಎಂದು ಹೇಳಿಬಿಟ್ಟ. ಭಾರ್ಗವನಿಗೆ ಅತಿ ದುಃಖವಾಗಿತ್ತು. ಆದರೂ, ಮಾಡಬೇಕಾದ ಕೆಲಸಗಳನ್ನು ನಿಲ್ಲಿಸು ವಂತಿರಲಿಲ್ಲವಾದುದರಿಂದ ಎಲ್ಲರಿಗೂ ತಿಳಿಸಿ, ತಾನೇ ಅಂತಿಮಸಂಸ್ಕಾರದ ವಿಧಿಗಳನ್ನು ಪೂರೈಸಿದ.

ಎರಡು ದಿನಗಳ ನಂತರ ಮಧುಕರ ವಾಪಸ್ಸಾದ. ತನಗೆ ಯಾವ ವಿಷಯವೂ ಗೊತ್ತಿರಲಿಲ್ಲವೆಂಬಂತೆ ನಾಟಕವಾಡಿ, ಭಾರ್ಗವನನ್ನು ಹೀಯಾಳಿಸಿದ. ಭಟ್ಟರ ಮಾತನ್ನೂ ನಂಬಲಿಲ್ಲ. ''ನೀವು ಸುಮ್ಮನಿರಿ ಭಟ್ಟರೇ... ಎಷ್ಟಾಗಲೀ ನೀವು ಇವನ ಸೋದರ ಮಾವ, ಇವನ ಪರವನ್ನು ವಹಿಸುವವರೇ... ನಾನೇ ಈ ಮನೆಗೆ ಹೊರಗಿನವನು... ಆಯ್ತಲ್ಲಾ ಬಿಡಿ... ಹೇಗೂ ಡ್ಯಾಡಿಗೆ, ನನಗಿಂತ ಅವನ ಮೇಲೇ ಹೆಚ್ಚು ಪ್ರೀತಿ... ಆದರೆ ನಾನು ಸ್ವಂತಮಗ ಎನ್ನುವುದನ್ನು ಮರೆತುಬಿಟ್ರಲ್ಲಾ ಅದೇ ನನಗೆ ವ್ಯಥೆ...'' ಅವನು ತಂದೆಗಾಗಿ ಕಣ್ಣೀರನ್ನು ಹರಿಸಿ ಎಲ್ಲರನ್ನೂ ದೂಷಿಸಿದ.

''ಹೋಗಲಿ ಬಿಡಪ್ಪಾ ಈಗಲಾದ್ರೂ ಬಂದೆಯಲ್ಲಾ, ಬಾಳಿ ಬದುಕಿದವರು ಅವರ ದೇಹವನ್ನು ಕೊಳೆಸುವುದು ಬೇಡ ಅಂತ ನಾವುಗಳೇ ಒಪ್ಪಿಸಿದೆವು. ಮುಂದಿನ ಕಾರ್ಯಗಳನ್ನು ನೀನೇ ಮಾಡು...'' ಹತ್ತಿರದ ನೆಂಟರೊಬ್ಬರು ಹೇಳಿದಾಗ ನಿರಾಕರಿಸಿದ.

''ಈಗ ಯಾರು ಮಾಡಿದ್ರೇನು? ಹೀಗಾದ್ರೂ ಡ್ಯಾಡಿಯ ಋಣ ತೀರಿಸಲಿ'' ವ್ಯಂಗ್ಯವಾಗಿ ನುಡಿದು ಅಲ್ಲಿಂದ ಸರಿದುಹೋದ. ಮಾಲಾ ಅಳುತ್ತ ಭಟ್ಟರಿಗೆ ಹೇಳಿದಳು.

''ನೋಡಿ ಭಟ್ಟರೇ ಹೇಗಾಡ್ತಾನೆ...? ಡ್ಯಾಡಿಯ ಮೇಲೆ ಯಾವತ್ತೂ ವಿಶ್ವಾಸ ವಿರಲಿಲ್ಲ ಇವನಿಗೆ... ನನಗೊಂದು ಮಾತು ಸಮಾಧಾನ ಹೇಳುಕ್ಕೆ ಸಹಾ ಬರಲಿಲ್ಲ. ಬರೀ ಸ್ವಾರ್ಥಿ... ಬೇರೆಯವರ ತಪ್ಪು ಮಾತ್ರ ಕಂಡುಹಿಡೀತಾನೆ. ಭಾರ್ಗವಂದು ತಪ್ಪೇನು ಅಂತ ಹೀಗಾಡ್ತಾನೋ ..?''.

''ನೀನು ಇನ್ನೂ ಚಿಕ್ಕವಳು. ನಿನಗೆ ಇದೆಲ್ಲ ಅರ್ಥವಾಗುಲ್ಲ... ಅವನಿಗೂ ಏನೋ ದುಃಖ, ಅದಕ್ಕೇ ಹೀಗೆಲ್ಲಾ ಮಾತಾಡ್ತಾನೆ. ನೀನು ಅವನ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಲೇ ಬೇಡ...'' ಕಣ್ಣೀರೊರೆಸಿದರು.

''ಇಲ್ಲ ಭಟ್ಟರೇ... ಇವನಿಗೆ ಮೊದಲ್ನಿಂದಲೂ ಅಷ್ಟೇ... ಯಾರನ್ನು ಕಂಡರೂ ಆಗುಲ್ಲ... ನನಗಂತೂ ಅವನನ್ನು ಮಾತನಾಡಿಸುಕ್ಕೇ ಇಷ್ಟವಿಲ್ಲ...''

''ಹಾಗೆನ್ನಬಾರದಮ್ಮ... ಇನ್ನು ಮುಂದೆ ಅವನೇ ಈ ಮನೆಯ ಯಜಮಾನ. ನಿನಗೆ ತಂದೆಯ ಸಮಾನ...''

''ಭಟ್ಟರೇ, ಡ್ಯಾಡಿ ಯಾಕೆ ಹೀಗೆ ಮಾಡಿದರು? ನಾನೂ ಅವರ ಜೊತೆಲೇ ಸತ್ತು ಹೋಗಿದ್ದಿದ್ರೆ ಚೆನ್ನಾಗಿತ್ತು...'' ಅವಳು ಸೊರಸೊರ ಅಳಲು ಪ್ರಾರಂಭಿಸಿದಾಗ ಭಟ್ಟರು ಸಮಾಧಾನ ಮಾಡಿದರು. ಮತ್ತೆ ಅಲ್ಲಿಗೆ ಬಂದ ಮಧುಕರ ಅವಳನ್ನೇ ವಿಚಿತ್ರವಾಗಿ ನೋಡಿ ಗದರಿದ.

''ಇನ್ನೂ ಎಷ್ಟು ದಿನಾಂತ ಅಳ್ತಿರ್ತೀಯ... ನಿನಗೆ ಕಾಲೇಜು, ಪಾಠ ಏನೂ ಇಲ್ವಾ?''

''ಯಾಕಪ್ಪಾ ಕಂದನ ಮೇಲೆ ರೇಗ್ತೀಯ? ಕಾವೇರಿನ ಕಳೆದುಕೊಂಡ ದುಃಖವೇ ಕಡಿಮೆಯಾಗಿರಲಿಲ್ಲ... ಈಗ ಈ ಆಘಾತ. ನಾಲ್ಕು ಸಮಾಧಾನದ ಮಾತುಗಳನ್ನು ಹೇಳು... ತುಂಬಾ ಹಚ್ಚಿಕೊಂಡು ಬಿಟ್ಟಿದೆ.''

''ಅವಳೇನೂ ಚಿಕ್ಕಮಗುವಲ್ಲ ಭಟ್ಟರೇ... ಎಲ್ಲರೂ ಸಮಾಧಾನ ಹೇಳೋಕೆ... ಸದಾ ಅಳ್ತಾನೇ ಕೂತಿದ್ರೆ ಹೇಗೆ?... ಡ್ಯಾಡಿ, ನನಗೂ ತಂದೆಯಾಗಿದ್ದರು... ನನಗೆ ಅವರ ಅಂತಿಮ ದರ್ಶನ ಕೂಡಾ ಸಿಗಲಿಲ್ಲ. ನನಗೆಷ್ಟು ದುಃಖವಾಗಿರಬಹುದು ಅಂತ ನಿಮಗೇನಾದ್ರೂ ಗೊತ್ತಾ?''

''ಏನೋ ಹೀಗಾಗಿ ಹೋಯ್ತು. ಭಾರ್ಗವ ನಿನ್ನನ್ನು ಕಾಂಟ್ಯಾಕ್ಟ್ ಮಾಡುಕ್ಕೆ ಎಷ್ಟು ಪ್ರಯತ್ನಪಟ್ಟ... ಪಾಪ ಅವನಿಗೂ ಅದೇ ವ್ಯಥೆ...''

''ಒಟ್ನಲ್ಲಿ ನಾನು ಏನೇ ಆಡಿದರೂ ಅದು ಸರಿಯಲ್ಲ. ನಾನೇ ಈ ಮನೆಗೆ ಹೊರಗಿನವನಾಗಿ ಬಿಟ್ಟಿದೀನಿ.'' ಮನದ ಕಹಿಯನ್ನು ಉಗುಳಿದ.

''ಯಾಕಪ್ಪಾ ಹೀಗೆಲ್ಲಾ ಮಾತನಾಡ್ತೀಯ.. ಈಗ ನೀನೇ ಈ ಮನೆಗೆ ಯಜಮಾನ... ಎಲ್ಲವನ್ನೂ ನೀನೇ ಸರಿ ತೂಗಿಸಬೇಕು... ಈಗ ಮುಂದಿನ ಕೆಲಸಗಳ ಕಡೆ ಗಮನಕೊಡು...'' ಅಷ್ಟರಲ್ಲಿ ಫೋನು ರಿಂಗಾದಾಗ, ಮಧುಕರ ಅತ್ತ ನಡೆದ. ಅತ್ತಲಿಂದ ಧ್ರುವ ಮಾತನಾಡಿದ್ದ. ಅವನ ಧ್ವನಿಯನ್ನು ಕೇಳಿ ಇವನ ಮುಖ ಅಗಲ ವಾಗಿತ್ತು. ಮಾತು ಮುಗಿಸಿ ಇತ್ತ ತಿರುಗಿದ.

''ಮುಂಬೈನಿಂದ ನನ್ನ ಇಬ್ಬರು ಫ್ರೆಂಡ್ಸ್ ಬರ್ತಾ ಇದಾರೆ. ನಾನು ಈಗಲೇ ಏರ್‌ಪೋರ್ಟ್‌ಗೆ ಹೋಗಬೇಕು'' ಎಂದವನನ್ನು ಭಟ್ಟರು ತಡೆದರು.

''ನೀನ್ಯಾಕಪ್ಪ ಹೋಗಬೇಕು? ಡ್ರೈವರನ್ನು ಕಳಿಸಿದ್ರೆ ಆಗುಲ್ವೆ?''

''ಇಲ್ಲ ಭಟ್ಟರೇ... ಮುಖ್ಯವಾದ ವಿಷಯವನ್ನು ಮಾತನಾಡಬೇಕು. ಇಲ್ಲದೇ ಇದ್ದರೆ ಭಾರ್ಗವನನ್ನೇ ಕಳಿಸ್ತಿದ್ದೆ'' ಎಂದು ಹೇಳಿ ಹೊರಗೆ ನಡದೇ ಬಿಟ್ಟ.

* * * *

ಸದಾಶಿವರಾಯರ ಕರ್ಮಾಂತರಗಳು ಮುಗಿದಿದ್ದವು. ಮಧುಕರನೇ ಎಲ್ಲಾ ವಿಧಿ ಗಳನ್ನು ನೆರವೇರಿಸಿದ. ಭಾರ್ಗವ ಅವನಿಗೆ ಸಹಾಯಕನಾಗಿದ್ದ. ಪರಿಚಯದವರಲ್ಲಿ ಕೆಲವರು ಭಾರ್ಗವನ ಪ್ರಶಂಸೆ ಮಾಡಿದರೆ, ಕೆಲವರು ವ್ಯಂಗ್ಯವಾಗಿಯೂ ಮಾತನಾಡಿದರು. ಭಾರ್ಗವನಿಗೆ ಬೇಸರವಾಗಿತ್ತು.

ಮಾರನೇ ದಿನವೇ ಸದಾಶಿವನ ಲಾಯರ್ರು ಸದಾಶಿವನು ಬರೆಸಿದ್ದ 'ವಿಲ್'ನ್ನು ಓದಲು ಬಂದರು. ಲಾಯರ್ರು ಭಾರ್ಗವ ಹಾಗೂ ಭಟ್ಟರು ಅಲ್ಲಿ ಹಾಜರಾಗಿರಬೇಕೆಂದು ಹೇಳಿದಾಗ ಮಧು ಹುಬ್ಬೇರಿಸಿದ. ಮುಖದಲ್ಲಿ ಅಸಹನೆಯ ಗೆರೆಗಳು ಮೂಡಿದವು. ಆದರೂ ವಿಧಿ ಇರಲಿಲ್ಲ. ತಂದೆಯ ಇಚ್ಛೆ ಎಂದು ಲಾಯರ್ರು ಹೇಳಿದುದರಿಂದ ಏನೂ ಹೇಳುವಂತಿರಲಿಲ್ಲ.

ವಿಲ್ಲಿನ ಪ್ರಕಾರ, ಸದಾಶಿವ ತನ್ನ ಸ್ವಯಾರ್ಜಿತ ಆಸ್ತಿಯನ್ನು ತನ್ನ ಸ್ವಂತ ಇಚ್ಛೆಯಿಂದ ಭಾರ್ಗವ, ಮಧುಕರ ಹಾಗೂ ಮಾಲಾಳಿಗೆ ಸಮನಾಗಿ ಹಂಚಿದ್ದ. ತನ್ನ ಕಂಪೆನಿಯ ವಹಿವಾಟು, ಬಿಸಿನೆಸ್ ವ್ಯವಹಾರಗಳನ್ನು ಮೂರು ಜನರೂ ಒಟ್ಟಾಗಿ ನಡೆಸಬೇಕೆಂದು ತಿಳಿಸಿದ್ದ. ಹಾಗೇ ಈಗ ವಾಸವಾಗಿರುವ ಮನೆಯನ್ನು ಮಾಲಾಳ ಹೆಸರಿಗೂ, ಬ್ಯಾಂಕಿನಲ್ಲಿ ತನ್ನ ಹೆಸರಿನಲ್ಲಿದ್ದ ಹಣವನ್ನು ಮಧುಕರನ ಹೆಸರಿಗೂ ಹಾಗೂ ತನ್ನ ಪೂರ್ವಜರಿಂದ ಸಿಕ್ಕಿದ ಹಳ್ಳಿಯಲ್ಲಿದ್ದ ಜಮೀನನ್ನು ಭಾರ್ಗವನ ಹೆಸರಿಗೂ ಬರೆಸಿದ್ದ. ಉಳಿದ ಚರಾಸ್ಥಿಗಳಲ್ಲಿ ತನ್ನ ಮೂರು ಮಕ್ಕಳಿಗೂ ಸಮಪಾಲು ಸಿಗಬೇಕೆಂದು ತಿಳಿಸಿದ್ದ.

ಲಾಯರ್ರು ವಿಲ್ಲನ್ನು ಓದುತ್ತಿದ್ದಂತೆಯೇ ಮಧುಕರನ ಮುಖದ ನರಗಳು ಬಿಗಿಯಾಗತೊಡಗಿದವು. ಭಾರ್ಗವ ಮುಜುಗರದಿಂದ ಕುಳಿತಲ್ಲೇ ಚಡಪಡಿಸಿದ. ಇದನ್ನು ಅವನು ಕನಸಿನಲ್ಲೂ ಊಹಿಸಿರಲಿಲ್ಲ. ಮಾಲಾ ಮಾತ್ರ ತನ್ನ ಸಂತೋಷವನ್ನು

ವ್ಯಕ್ತಪಡಿಸಿದಳು. ಭಟ್ಟರನ್ನು ವಿಲ್ಲಿಗೆ ಎಕ್ಸಿಕ್ಯೂಟರ್‌ನ್ನಾಗಿ ಮಾಡಿರುವ ವಿಷಯವನ್ನು ತಿಳಿದದ್ದೇ ತಡ ಮಧುಕರ ಎದ್ದು ನಿಂತ. ಕೋಪದಿಂದ ಮಾತುಗಳು ಹೊರಡಲಿಲ್ಲ. ಅಲ್ಲಿಂದ ಎದ್ದು ಹೊರಟುಹೋಗಿದ್ದ. ಲಾಯರ್ರು ಸ್ವಲ್ಪ ಹೊತ್ತು ಉಳಿದವರೊಡನೆ ಮಾತನಾಡಿ, ವಿಲ್ಲಿನ ಜೆರಾಕ್ಸ್ ಪ್ರತಿಗಳನ್ನು ಕೊಟ್ಟು ತಾವೂ ತೆರಳಿದ್ದರು.

ರಾತ್ರಿ ಬಹಳ ತಡವಾಗಿ ಮಧುಕರ ಮನೆಗೆ ಬಂದಾಗ, ಯಾರಿಗೂ ಅವನನ್ನು ಮಾತನಾಡಿಸುವ ಧೈರ್ಯವಿರಲಿಲ್ಲ. ಆಗರೆ ಮಗುಕರ ಸಮಾಧಾನದಿಂಗ ಭಟ್ಟಗನ್ನು ಕೇಳಿದ.

''ಮಾಲಾಳದ್ದು ಊಟ ಆಯ್ತಾ? ನಾನು ಅವಳ ಹತ್ತಿರ ಪರ್ಸನಲ್ ಆಗಿ ಮಾತನಾಡಬೇಕು. ಅವಳನ್ನು ಕರೀತೀರಾ?''

''ನಿನ್ನ ಊಟ ಆಯ್ತೇನಪ್ಪಾ...''

''ಇಲ್ಲ ಭಟ್ಟರೇ... ನನಗೆ ತಟ್ಟೆಗೆ ಬಡಿಸಿಕೊಂಡಿ. ನಾನು ನನ್ನ ರೂಂನಲ್ಲೇ ಊಟ ಮಾಡ್ತೀನಿ... ಮಾಲಾಳನ್ನು ಅಲ್ಲಿಗೇ ಕಳಿಸಿ'' ಎಂದು ಹೇಳಿ ತನ್ನ ರೂಮಿಗೆ ಹೊರಟು ಹೋದ.

ಮಾಲಾ ಅಸಹನೆಯಿಂದಲೇ ಅವನ ರೂಮಿನೊಳಗೆ ಅಡಿಯಿಟ್ಟಳು. ಚಮಚದಿಂದ ಕಲಿಸಿದ ಅನ್ನವನ್ನು ತಿನ್ನುತ್ತಿದ್ದವನು ಅವಳನ್ನು ಒಳಗೆ ಬಂದು ಕುಳಿತುಕೊಳ್ಳುವಂತೆ ಸಂಜ್ಞೆಮಾಡಿದ.

''ಇಷ್ಟು ಹೊತ್ನಲ್ಲಿ ಏನ್ಮಾತು? ಬೆಳಿಗ್ಗೆ ಆಡಿದರೆ ಆಗುಲ್ವಾ? ನಾನು ನೋಟ್ಸ್ ಓದುತ್ತಿದ್ದೆ...''

''ಹೇಗೆ ಓದ್ತಾ ಇದೀಯ? ಪರೀಕ್ಷೆಯಾವಾಗ? ಮುಂದೇನು ಮಾಡಬೇಕೂಂತ ಇದೀಯ?''

''ಓಹೋಹೋ... ಅದೇನಪ್ಪಾ ಬಹಳ ವಿಚಾರಿಸಿಕೊಳ್ತಿದೀಯ? ನನಗೆ ನಂಬೋಕೇ ಆಗ್ತಿಲ್ಲ...''

''ತಮಾಷೆ ಮಾಡಬೇಡ ಮಾಲಾ...''

''ಸರಿ... ಅದೇನು ಮಾತನಾಡಬೇಕೂಂತ ಕರೆದ್ಯಂತೆ. ಬೇಗ ಹೇಳಿದ್ರೆ ನಾನು ಹೋಗ್ತೀನಿ.''

''ಕೂತ್ಕೋ...'' ಎನ್ನುತ್ತಾ ಬಾಗಿಲನ್ನು ಭದ್ರಪಡಿಸಿದ. ಅವಳು ಅವನನ್ನೇ ವಿಚಿತ್ರವಾಗಿ ನೋಡಿದಳು. ''ಡ್ಯಾಡೀ ಹೀಗೆ ಮಾಡಬಾರದಾಗಿತ್ತು. ಯಾಕೆ ಹೀಗ್ಮಾಡಿದ್ರು?''

''ಯಾವ ವಿಷಯ ಹೇಳ್ತಿದೀಯಾ?''

''ಅದೇ ವಿಲ್ಲಿನ ವಿಷಯ. ಭಾರ್ಗವಂಗೆ ಯಾಕೆ ಪಾಲು ಕೊಡಬೇಕಾಗಿತ್ತು? ಅವನಿಗೆ ಯಾವ ಹಕ್ಕೂ ಇಲ್ಲ.''

"ಓ... ಅದಾ? ಅದು ಡ್ಯಾಡಿಯ ವಿಷ್... ಅದಕ್ಕೆ ನಾನೇನು ಹೇಳಲಿ?"

"ನಿನಗೆ ಏನೂ ಅನ್ನಿಸ್ತಾ ಇಲ್ವಾ?..."

"ಇಲ್ಲಪ್ಪಾ... ನನಗೆ ಏನೂ ಅನ್ನಿಸ್ತಿಲ್ಲ. ಇದರಲ್ಲಿ ಯಾವ ತಪ್ಪೂ ಕಾಣಿಸ್ತಿಲ್ಲ. ಇದನ್ನು ಕೇಳೋಕೇ ಕರೆಸಿದ್ಯಾ?"

"ನಿನಗೆ ಯಾವ ತಪ್ಪೂ ಕಾಣಿಸದೇ ಇರಬಹುದು. ನನಗೆ ಎಲ್ಲಾ ತಪ್ಪಾಗಿ ಕಾಣಿಸ್ತಿದೆ. ಡ್ಯಾಡಿ ಅವನಿಗೆ ಯಾಕೆ ಆಸ್ತಿಯಲ್ಲಿ ಸಮಪಾಲು ಕೊಡಬೇಕೂಂತ? ಇನ್ ಫ್ಯಾಕ್ಟ್ ಏನೂ ಕೊಡಬೇಕಾಗಿಲ್ಲ. ಯಾವ ಕಮಿಟ್‌ಮೆಂಟೂ ಇಲ್ಲ..." ಮಾಲಾ ಆಕಳಿಸಿದಳು.

"ನನಗೆ ಇದೆಲ್ಲಾ ಗೊತ್ತೂ ಇಲ್ಲ. ತಿಳಿದುಕೊಂಡು ಏನಾಗಬೇಕು?"

"ಹಾಗಂದ್ರೆ ಹೇಗೆ? ನಾವಿಬ್ರೂ ಸ್ವಂತ ಮಕ್ಕಳು. ಎಲ್ಲಾ ಹಕ್ಕೂ ನಮ್ಮಿಬ್ಬರಿಗೆ ಮಾತ್ರ. ನಾವಿಬ್ರೂ ಸೇರಿ ಆ ವಿಲ್‌ನ ಕ್ಯಾನ್ಸಲ್ ಮಾಡಿಸೋಣ."

"ಅದ್ಯಾಕೆ ಹಾಗಾಡ್ತೀಯೋ... ಭಾರ್ಗವನೂ ನಮ್ಮ ಮನೆಯೋನೇ ಅಲ್ವಾ? ಇಲ್ಲೇ ಬೆಳೆದಿದಾನೆ..."

"ನಾನ್ಸೆನ್ಸ್. ಅದ್ಹೇಗೆ ನಮ್ಮ ಮನೆಯವನಾಗ್ತಾನೆ...? ಈ ಮನೆಗೆ ಅಳಿಯನಲ್ಲ... ಮಗನಂತೂ ಅಲ್ಲವೇ ಅಲ್ಲ. ಮಾಲಾ, ನಿನಗೆ ಏನೂ ಅರ್ಥವಾಗುಲ್ಲ. ಡ್ಯಾಡಿಯ ಆಸ್ತಿಯೆಲ್ಲಾ ಕೋಟಿಗಟ್ಟಲೆ ಬೆಲೆಬಾಳುತ್ತೆ. ನಾವಿಬ್ಬರೂ ಪೂರ್ಣ ಹಕ್ಕುದಾರರು..."

"ಡ್ಯಾಡಿ ಏನೂ ತಿಳುವಳಿಕೆ ಇಲ್ಲದವರಲ್ಲ. ಎಲ್ಲಾ ಸರಿಯಾಗಿ ತಿಳಿದೇ ಮಾಡಿರುತ್ತಾರೆ. ಅವರ 'ವಿಷ್'ಗೆ ವಿರುದ್ಧವಾಗಿ ನಾವ್ಯಾಕೆ ಹೋಗಬೇಕು?"

"ಏನ್ ವಿಷ್ ವಿಷ್ ಅಂತ? ನಿನಗೇನು ಮಹಾ ಗೊತ್ತು? ಅವನು ಕಾವೇರಮ್ಮನ ಮಗ... ಕಾವೇರಮ್ಮ ಈ ಮನೆಗೆ ಗವರ್ನೆಸ್ ತರಹ ಬಂದು ಸೇರಿಕೊಂಡರು.... ಕಾವೇರಮ್ಮ ನಮಗೆ ಯಾವ ರೀತಿಯಿಂದಲೂ ಸಂಬಂಧಿಕರಲ್ಲ..." ಕಾವೇರಮ್ಮನಿಗೂ ಡ್ಯಾಡಿಗೂ ಯಾವ ತರಹವಾದರೂ ಸಂಬಂಧವೇನಾದರೂ ಇತ್ತೇ ಎಂಬ ಅನುಮಾನ ತಕ್ಷಣಕ್ಕೆ ಬಂದರೂ ಅದನ್ನು ತಂಗಿಯ ಎದುರಿಗೆ ಹೇಳಲಿಲ್ಲ. ಹಾಗೇನಾದರೂ ಇದ್ದರೆ, ವಿಪರೀತ ಕಾಂಪ್ಲಿಕೇಶನ್ಸ್‌ಗಳು ಹುಟ್ಟಬಹುದು ಎಂದುಕೊಂಡು ಹಾಗೇ ಸುಮ್ಮನಾಗಿಬಿಟ್ಟ. ಅವನು ಮಾತನಾಡದೇ ಹಾಗೇ ಸುಮ್ಮನಾಗಿಬಿಟ್ಟಾಗ ಮಾಲಾ ಮೆಲ್ಲಗೆ ಅಲ್ಲಿಂದ ಸರಿದುಹೋಗಿದ್ದಳು.

ಆ ರಾತ್ರಿ, ಕಾವೇರಮ್ಮನಿಗೂ ತನ್ನ ತಂದೆಗೂ ಏನಾದರೂ ಸಂಬಂಧವಿತ್ತೇ ಎನ್ನುವ ಅನುಮಾನ ಮಧುಕರನನ್ನು ಕಾಡಿದರೆ, ಮಾಲಾ ತನ್ನದೇ ಆದ ಹೊಸ ಆಲೋಚನೆಯಲ್ಲಿ ಮುಳುಗಿದ್ದಳು. ಭಾರ್ಗವನೇನು ಈ ಮನೆಗೆ ಅಳಿಯನೇ ಎಂದು ಮಧು ಪ್ರಶ್ನಿಸಿದನಲ್ಲ... ಅದೇ ಯಾಕೆ ನಿಜವಾಗಬಾರದು? ತಾನೇಕೆ ಭಾರ್ಗವನನ್ನು ಮದುವೆಯಾಗಬಾರದು? ಆ ಅನಿಸಿಕೆಯೇ ಅವಳ ಮೈಮನಗಳಲ್ಲಿ ಪುಳಕವನ್ನುಂಟು ಮಾಡಿತು. ಇದುವರೆಗೂ

ತಾನೆಂದೂ ಆ ಬಗ್ಗೆ ಯೋಚಿಸಿಯೇ ಇರಲಿಲ್ಲವಲ್ಲ ಅಂತಂದುಕೊಂಡಾಗ ತಾನು ತಪ್ಪು ಮಾಡಿದೆ ಅಂತೆನ್ನಿಸಿತ್ತು. ಆದಷ್ಟು ಬೇಗ ತಾವಿಬ್ಬರೂ ಮದುವೆಯಾಗಬೇಕು. ಆಗ ಈ ಮಧು ಏನೂ ಮಾಡಲಾಗುವುದಿಲ್ಲ. ಈಗಲೇ ಹೋಗಿ ಭಾರ್ಗವನೊಡನೆ ಮಾತ ನಾಡಲೇ ಅಂತಂದುಕೊಂಡರೂ ಭಟ್ಟರೂ ಅವನೊಂದಿಗೆ ಇರುತ್ತಾರೆ ಎಂದುಕೊಂಡು ಸುಮ್ಮನಾದಳು.

* * * *

ನಿತ್ಯದಂತೆ, ಅವಳು ಸಮಯಕ್ಕೆ ಸರಿಯಾಗಿ ಎದ್ದು ಬರದಿದ್ದಾಗ ಭಟ್ಟರು ಆತಂಕ ದಿಂದ ಭಾರ್ಗವನಿಗೆ ಹೇಳಿದರು.

''ನೆನ್ನೆ ರಾತ್ರಿ, ಮಧು ಏನೇನನ್ನೋ ಆ ಮಗುವಿನ ತಲೆಗೆ ತುಂಬಿರಬಹುದು. ನೋಡು ಯಾಕೋ ಎದ್ದು ಬಂದೇ ಇಲ್ಲ. ಸ್ವಲ್ಪ ಹೋಗಿ ನೋಡ್ತೀಯಾ? ಕಾಲೇಜಿಗೆ ಹೊತ್ತಾಗುಲ್ವೇ?''

''ಹೂಂ ಮಾವಾ...'' ಎಂದು ಹೊರಬಂದವನು, ಹಾಗೇ ಮಧುಕರನ ರೂಮಿನ ಕಡೆ ನೋಡಿದ. ಆ ರೂಮಿನ ಬಾಗಿಲು ಸಹ ಹಾಕಿತ್ತು... ಸೀದಾ ಮಾಲಾ ಮಲಗಿದ್ದ ರೂಮಿಗೆ ಬಂದ. ಕಣ್ಣುಗಳನ್ನು ಬಿಟ್ಟುಕೊಂಡು ಮಲಗಿದ್ದ ಮಾಲಾ ಅವನನ್ನು ಕಂಡೊಡನೆ ಚಂಗನೆ ಎದ್ದು ಕುಳಿತಳು.

''ಗುಡ್‌ಮಾರ್ನಿಂಗ್ ಭಾರ್ಗವ...... ನಾನು ಇವತ್ತು ನಿನ್ನ ಹತ್ತಿರ ತುಂಬಾ ಮಾತನಾಡಬೇಕು.... ನೀನು ಇವತ್ತು ಆಫೀಸಿಗೆ ಹೋಗಬೇಡ.'' ಮುಗುಳ್ನಗುತ್ತಾ ಅವಳು ಅವನನ್ನೇ ನೋಡುತ್ತಾ ನುಡಿದಾಗ ಅವನು ಬೆರಗಾದ. ಅವಳಲ್ಲಿ ಏನೋ ಬದಲಾವಣೆ ಆಗಿರುವುದನ್ನು ಗಮನಿಸಿ ನಕ್ಕ.

''ಗುಡ್‌ಮಾರ್ನಿಂಗ್ ಬೇಬಿ... ಏಳು... ಕಾಲೇಜಿಗೆ ಹೊತ್ತಾಗುಲ್ವಾ?''

''ಕಾಲೇಜಿಗೆ ಮಾರೋ ಗೋಲಿ... ನಾನು ಒಂದು ಮುಖ್ಯವಾದ ವಿಷಯವನ್ನು ಮಾತನಾಡಬೇಕು... ಅದೂ ನಿನ್ನ ಹತ್ತಿರ ಮಾತ್ರ...''

''ಏನು ವಿಷಯ ಅಂತ ಕೇಳಬಹುದಾ...''

''ಪರ್ಸನಲ್.... ವೆರಿ ಪರ್ಸನಲ್.... ನಾನೇ ಹೇಳ್ತೀನಿ ಅಂತ ಅಂದ್ನಲ್ಲಾ... ಮೊದಲು ಆ ಮಧು ಆಫೀಸ್ಗೆ ಹೋಗಲಿ. ಆಮೇಲೆ ನಾನೂ ನೀನು ಇಬ್ಬರೇ ಕೂತು ಮಾತನಾಡೋಣ...''

''ನಾನೂ ಆಫೀಸ್ಗೆ ಹೋಗ್ಬೇಕಲ್ಲಾ ಮೇಡಂ.... ನಾನು ಎಲ್ಲಿಯೂ ಓಡಿ ಹೋಗುಲ್ಲ.. ನೀವೂ ಹೋಗುಲ್ಲ.. ರಾತ್ರಿ ಮಾತನಾಡೋಣ...''

''ರಾತ್ರಿಯ ಹೊತ್ತಿಗೆ ವಿಷಯ ಹಳೆಯದಾಗುತ್ತೆ. ನಾನೇ ಮನಸ್ಸು

ಬದಲಾಯಿಸಿದರೂ ಬದಲಾಯಿಸಬಹುದು... ಅಲ್ಲಿಯವರೆಗೆ ಕಾಯಲು ನನ್ನಿಂದ ಆಗುವುದಿಲ್ಲ..''

''ಆಯ್ತು... ನಾನು ಸ್ವಲ್ಪ ಲೇಟಾಗಿ ಆಫೀಸ್ಗೆ ಬರ್ತೀನಿ ಅಂತ ಹೇಳಿಬಿಡ್ತೀನಿ'' ಎನ್ನುತ್ತಾ ಹಿಂದೆ ಸರಿದವನ ಬಲಗೈಯನ್ನು ಹಿಡಿದಳು.

''ಥ್ಯಾಂಕ್‌ಯೂ ಭಾರ್ಗವ... ಈ ಮನೆಯಲ್ಲಿ ನನ್ನನ್ನು ಅರ್ಥ ಮಾಡಿಕೊಂಡಿರುವವನು ನೀನೊಬ್ಬನೇ'' ಎನ್ನುತ್ತಾ ಅವನ ಕೈಯನ್ನು ತನ್ನ ತುಟಿಗಳಿಗೆ ಒತ್ತಿಕೊಂಡಳು. ಭಾರ್ಗವನ ಮೈಯಲ್ಲಿ ವಿದ್ಯುತ್‌ಸಂಚಾರವಾದಂತಾಯಿತು. ಮೆಲ್ಲನೆ ಕೈಯನ್ನು ಬಿಡಿಸಿಕೊಂಡ. ಅವಳನ್ನು ದೃಷ್ಟಿಸಿ ನೋಡಲು ಮುಜುಗರವೆನಿಸಿತು. ತಾನೇ ಏನೋ ಅಪರಾಧ ಮಾಡುತ್ತಿದ್ದೀನೇನೋ ಎಂಬಂತೆ ಅಲ್ಲಿಂದ ಸರಿದುಹೋದ. ತೂರಾಡುತ್ತ ಹೊರಬಂದವನು ಹಾಗೇ ಗೋಡೆಗೆ ಒರಗಿನಿಂತ. ಮೈಯಲ್ಲೆಲ್ಲಾ ಏನೋ ಹೊಸ ಅನುಭವ ತುಂಬಿಕೊಂಡಿದೆ ಅಂತೆನಿಸಿತ್ತು. ತುಟಿಗಳ ಬಿಸಿ ಕೈಯ ಮುಖಾಂತರವಾಗಿ ದೇಹದೊಳಗೆಲ್ಲಾ ಹರಡಿ ಮೈ ಬಿಸಿಯಾಗುತ್ತಿದೆ ಎಂದೆನಿಸಿತ್ತು. ನಿಧಾನವಾಗಿ ತನ್ನ ಬಲಗೈಯನ್ನು ಎತ್ತಿ ತನ್ನ ತುಟಿಯ ಬಳಿಗೆ ಒಯ್ದು ಕಳ್ಳನಂತೆ. ತನ್ನ ಕೈಯನ್ನು ತಾನೇ ಚುಂಬಿಸಿಕೊಂಡ. ಮೈಮನಗಳು ಗರಿಗೆದರಿ ಕುಣಿದವು. ಹೃದಯ ನರ್ತಿಸಿತು. ಮಾಲಾಳ ತುಟಿಗಳು ಸ್ಪರ್ಶಿಸಿದ ತನ್ನ ಮುಂಗೈಯನ್ನು ಹಾಗೇ ತನ್ನ ತುಟಿಗಳಿಗೆ ಒತ್ತಿಕೊಂಡು ನಿಂತಿದ್ದವನನ್ನು ಭಟ್ಟರ ಕೂಗು ತಟ್ಟಿತು. ಬೆಚ್ಚಿ ಬಿದ್ದವನಂತೆ ವಾಸ್ತವಕ್ಕೆ ಬಂದು ಎಚ್ಚೆತ್ತುಕೊಂಡ. ಅರೇ, ಈ ದಿನ ತನಗೇನಾಯ್ತು? ಈ ಮಾಲಾಳನ್ನು ಚಿಕ್ಕ ವಯಸ್ಸಿನಿಂದ ನೋಡಿದ್ದೇನೆ, ಎತ್ತಿ ಆಡಿಸಿದ್ದೇನೆ. ಮಾತುಕತೆಯಾಡಿದ್ದೇನೆ. ಆದರೆ ಎಂದೂ ತನಗೆ ಈ ಅನುಭವಗಳಾಗಿರಲಿಲ್ಲ. ಈ ದಿನ ಯಾಕೆ ಹೀಗಾಯ್ತು...? ಬಹುಶಃ ಈ ಮುಂಚೆ ಎಂದೂ ಮಾಲಾ ಹೀಗೆ ವರ್ತಿಸಿರಲಿಲ್ಲ... ತಾನು ಇಷ್ಟಕ್ಕೇ ಹೀಗೆ ಉದ್ವೇಗಿಯಾಗಿ ಬಿಟ್ಟೆನಲ್ಲಾ. ಆ ಹುಡುಗಿ ಸಲುಗೆಯಿಂದ ಮಾಡಿದ್ದನ್ನು ತಾನು ತಿಳಿದದ್ದೇ ಬೇರೆ ರೀತಿಯಲ್ಲಿ... ತಾನು ಜಾಗರೂಕನಾಗಿರಬೇಕು... ಇನ್ನು ಮುಂದೆ ಹೀಗೆಲ್ಲಾ ಯೋಚಿಸಬಾರದು ಎಂದು ತನಗೆ ತಾನೇ ಹೇಳಿಕೊಂಡು ಅಡಿಗೆಮನೆಯ ಕಡೆಗೆ ಬಂದ.

''ಮಧು, ಮಾಲಾ ಇಬ್ಬರೂ ಎದ್ದೇ ಇಲ್ಲ. ತಿಂಡಿ ಆರಿ ತಣ್ಣಗಾಗುತ್ತಿದೆ. ನೀನಾದ್ರೂ ಅಷ್ಟೇ... ಬೇಗ ಸ್ನಾನ ಮಾಡಿ ಸಿದ್ಧನಾಗಬಾರದಾ? ನಾನು ಹೋಗಿ ಮಧೂನ ಎಬ್ಬಿಸ್ತೀನಿ'' ಎನ್ನುತ್ತಾ ಭಟ್ಟರು ಹೊರಬಂದಾಗ ಭಾರ್ಗವ ಸ್ನಾನದ ಮನೆಗೆ ಹೊರಟ.

* * * *

''ಭಟ್ಟರೇ, ನಾನು ಒಂದು ದಿನದ ಮಟ್ಟಿಗೆ ಬಾಂಬೆಗೆ ಹೋಗಿಬರ್ತೀನಿ... ಮನೆ ಕಡೆ ಜೋಪಾನ...'' ತಾನೇ ಈ ಮನೆಯ ಯಜಮಾನ ಎಂಬ ಗತ್ತಿನಿಂದ ಮಧು ನುಡಿದಾಗ ಭಟ್ಟರು ತಲೆಯಾಡಿಸಿದರು. ಮಾಲಾ ಭಾರ್ಗವನ ಕಡೆ ನೋಡಿ

ಮುಗುಳ್ನಕ್ಕಾಗ, ಅವನು ತಲೆತಗ್ಗಿಸಿದ. ಮಧು, ಮಾಲಾಳಿಗಾಗಲೀ, ಭಾರ್ಗವನಿಗಾಗಲೀ ಏನನ್ನೂ ಹೇಳದೆ ತನ್ನ ಪಾಡಿಗೆ ತಾನು ಹೊರಟುಹೋದ.

''ಸದ್ಯ, ದೂರ್ವಾಸ ತೊಲಗಿದ... ಭಟ್ಟರೇ ನನಗೆ ಒಂದು ಲೋಟ ಸಿಹಿಯಾದ ಹಾಲು...'' ಮಾಲಾ ಮುಗುಳ್ನಗುತ್ತ ನುಡಿದಳು.

''ಹಾಗೆಲ್ಲಾ ಆಡಬಾರದಮ್ಮ... ಅವನ ಸ್ವಭಾವ ಸ್ವಲ್ಪ ಕೋಪದ್ದು. ಏನೋ ಟೆನ್ಷನ್... ಮದುವೆಯಾಗಲಿ ಅವನ ಕೋಪ ತಾಪ ಎಲ್ಲಾ ತಾನೇ ತಾನಾಗಿ ಕಡಿಮೆ ಆಗುತ್ತೆ...''

''ಅದ್ಹೇಗೆ ಕಡಿಮೆ ಆಗುತ್ತೆ ಭಟ್ಟರೇ... ಅದೆಲ್ಲಾ ಸುಳ್ಳು... ನಿಮಗೆ ಕೋಪ ಬರುಲ್ಲ.. ಭಾರ್ಗವಂಗೆ ಕೋಪ ಬರುಲ್ಲ...'' ಭಟ್ಟರ ಮುಖ ಪೆಚ್ಚಾಯಿತು. ಪೆದ್ದನಂತೆ ಭಾರ್ಗವನ ಕಡೆ ನೋಡಿದರು. ಭಾರ್ಗವ ಮಾಲಾಳ ಕಡೆ ನೋಡಿ ನಕ್ಕ.

''ನಾನು ಮಾರ್ಕೆಟ್ಟಿಗೆ ಹೋಗಿ ಬಂದುಬಿಡ್ತೀನಿ. ನೀನು ಆಮೇಲೆ ಆಫೀಸ್ಗೆ ಹೋಗುವಂತೆ'' ಎಂದು ಹೇಳಿ ಭಟ್ಟರು ಭಾರ್ಗವನಿಂದ ದುಡ್ಡು ತೆಗೆದುಕೊಂಡು ಕೈಚೀಲಗಳನ್ನು ಹಿಡಿದು ಹೊರನಡೆದರು. ಮಾಲಾ ತಕ್ಷಣವೇ ಭಾರ್ಗವನ ಕೈ ಹಿಡಿದು, ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಅವನಿಗೂ ಕುಳಿತುಕೊಳ್ಳುವಂತೆ ಹೇಳಿದಳು. ಭಾರ್ಗವನ ಎದೆಬಡಿತ ತೀವ್ರವಾಗತೊಡಗಿತು. ಅವಳ ಕಡೆ ಕಳ್ಳನೋಟವನ್ನು ಬೀರಿ ಕುಳಿತುಕೊಂಡು ಮೆಲ್ಲಗೆ ಅವಳ ಕೈಯನ್ನು ಬಿಡಿಸಿಕೊಂಡ.

''ನಾನೊಂದು ತೀರ್ಮಾನಕ್ಕೆ ಬಂದಿದೀನಿ'' ಅವನ ಕಡೆ ನೋಡದೇ ಜಡೆಯನ್ನು ಹೊಸೆಯುತ್ತಾ ನುಡಿದಳು.

''ಎಂಥಾ ತೀರ್ಮಾನ?'' ಎಂದು ಭಾರ್ಗವ ಕೇಳಲಿಲ್ಲ, ಆದರೆ ಅವಳು ಏನು ಹೇಳಿಬಿಡುವಳೋ ಎಂಬಂತೆ ಅವಳನ್ನೇ ಮಿಕಿಮಿಕಿ ನೋಡಿದ.

''ಏಯ್... ನಾನು ನಿನಗೇ ಹೇಳ್ತಾ ಇರೋದು... ಕೇಳಿಸಲಿಲ್ವಾ?'' ಅವನ ಮುಖದ ಮುಂದೆ ಕೈಯಾಡಿಸಿದಳು.

''ಹೂಂ. ಕೇಳ್ತಾ ಇದೀನಿ ಹೇಳು...''

''ಮತ್ತೆ... ಮತ್ತೆ... ನಾವಿಬ್ರೂ ಆದಷ್ಟು ಬೇಗ ಮದುವೆಯಾಗೋಣ'' ಅವಳು ಮುದ್ದು ಮುದ್ದಾಗಿ ಹೇಳಿದಾಗ ಅವನು ದಡಕ್ಕನೇ ಎದ್ದು ನಿಂತ.

''ಏನು?... ಏನಂದೆ?'' ತೊದಲಿದ.

''ನಾವಿಬ್ರೂ ಆದಷ್ಟು ಬೇಗ ಮದುವೆಯಾಗೋಣ ಅಂತ ಹೇಳ್ದೆ... ಕೇಳಿಸ್ತಾ?'' ಎತ್ತರದ ಧ್ವನಿಯಲ್ಲಿ ಅವಳು ಮತ್ತೆ ನುಡಿದಾಗ, ಅವಳನ್ನೇ ವಿಚಿತ್ರವಾಗಿ ನೋಡಿದ.

''ಷ್... ಮೆಲ್ಲಗೆ... ಏನು ಮಾತನಾಡ್ತಿದೀಯ ಅನ್ನೋ ಅರಿವು ಇದೇ ತಾನೇ ನಿನಗೆ...''

"ಹುಂ... ಇದೆ.... ಬೇಕಾದ್ರೆ ರಿಪೀಟ್ ಮಾಡ್ತೀನಿ... ನಾವು ಯಾಕೆ ಹೆದರಬೇಕು....?"

"ಅದ್ಯಾಕೆ ಇದ್ದಕ್ಕಿದ್ದ ಹಾಗೆ ಇಂತಹ ಆಲೋಚನೆ ಬಂತು... ಎಷ್ಟೋ ವರ್ಷಗಳಿಂದ ಜತೇಲೇ ಇದೀವಿ... ನಾನು ಎಂದಾದ್ರೂ ನಿನಗೆ ಇಂತಹ ಆಸೆ ಬರೋ ಹಾಗೆ ಬಿಹೇವ್ ಮಾಡಿದೀನಾ....?"

"ಇಲ್ಲ ಭಾರ್ಗವ, ನೀನು ತುಂಬಾ ಗ್ರೇಟ್... ಇದೇ ಮನೆಯಲ್ಲಿ ಒಟ್ಟಿಗೆ ಬೆಳೆಗೆವು. ಹೀಗೇ ಮುಂದೆ ಜೀವನ ಸಂಗಾತಿಗಳಾಗಿ ಇರೋಣ ಅಂತ ಅನ್ನಿಸ್ತು... ನನ್ನ ಅನಿಸಿಕೆ ತಪ್ಪಾ...?"

"ತಪ್ಪೇನಿಲ್ಲ ಮಾಲಾ... ಆದರೆ ನಿನಗ್ಯಾಕೆ ಈಗಲೇ ಮದುವೆ ಯೋಚನೆ... ಮೊದಲು ನಿನ್ನ ಓದು ಮುಗೀಲಿ. ಆಮೇಲೆ ನೋಡೋಣ."

"ಇಲ್ಲ ಭಾರ್ಗವ, ನೀನು ಒಪ್ಪಲೇಬೇಕು... ಈ ಓದು ಗೀದು ಸಾಕಾಯ್ತು. ನಿನ್ನ ಜೊತೆ ಸಂಸಾರ ಮಾಡಿಕೊಂಡಿರಬೇಕೂಂತ ಅನ್ನಿಸ್ತಾ ಇದೆ" ಎನ್ನುತ್ತಾ ಮತ್ತೆ ಅವನ ಕೈಯನ್ನು ತನ್ನ ಕೈಯೊಳಗೆ ತೆಗೆದುಕೊಂಡಳು. ಅವನು ಒರಟಾಗಿ ಕೈ ಬಿಡಿಸಿಕೊಂಡ.

"ಇಷ್ಟೆಲ್ಲಾ ಮುಂದುವರೆಯುವುದು ಬೇಡ ಮಾಲಾ... ಇದುವರೆಗೆ ಹೇಗೆ ಇದ್ದೆವೋ ಹಾಗೇ ಇರೋಣ. ಮಾವನಿಗಾಗಲೀ, ಮಧುವಿಗಾಗಲೀ ಅನುಮಾನ ಬರಬಾರದು..."

"ನೀನ್ಯಾಕೆ ಮಧುಗೆ ಹೆದರ್ತೀಯ? ನಾನು ಅವನಿಗೆ ಹೇಳಿಬಿಡ್ತೀನಿ. ಅವನಿಗೆ ಇಷ್ಟವಿದ್ದರೆ ಅವನೇ ನಿಂತು ಮದುವೆ ಮಾಡಲಿ... ಇಲ್ಲದಿದ್ದರೆ, ನಾವೇ ಓಡಿ ಹೋಗಿ ಮದುವೆ ಮಾಡಿಕೊಳ್ಳೋಣ."

ಭಾರ್ಗವ ನಕ್ಕ. "ಭಾರ್ಗವ, ನಗೋದ್ಯಾಕೆ?"

"ನಗದೇ ಏನು ಮಾಡಲಿ? ಅಲ್ಲಾ ನಾವು ಓಡಿ ಹೋಗೋದಾದ್ರೂ ಎಲ್ಲಿಗೆ? ಇದು ನಾವು ಬೆಳೆದ ಮನೆ. ಇಲ್ಲಿಂದ ಹೋಗೋದಾದ್ರೂ ಎಲ್ಲಿಗೆ?" ಅವನು ಮತ್ತೆ ಗಹಗಹಿಸಿ ನಕ್ಕಾಗ ಅವಳು ಪೆಚ್ಚಾದಳು.

"ಈಗಲಿಂದ ಮದುವೆ ಗಿದುವೆ ಚಿಂತೆ ಬೇಡ. ಮೊದಲು ನೀನು ನಿನ್ನ ವಿದ್ಯಾಭ್ಯಾಸವನ್ನು ಮುಗಿಸು. ಮದುವೆಗೆ ಅವಾಂತರವೇನಿಲ್ಲ"

"ನಿನಗೆ ಅವಾಂತರವಿಲ್ಲದೇ ಇರಬಹುದು. ನನಗೆ ಇದೆ. ನಾನು ನೀನಿಲ್ಲದೇ ಇರಲಾರೆ..."

"ನಾನೆಲ್ಲಿಗೆ ಹೋಗ್ತೀನಿ? ಇಲ್ಲೇ ಇರ್ತೀನಲ್ಲ..."

"ಇಲ್ಲ ಭಾರ್ಗವ, ಅದು ಹಾಗಲ್ಲ..." ಮುಂದೆ ಹೇಳಲಾಗದೇ ಅವಳು ಬಿಕ್ಕಳಿಸಿದಾಗ ಅವನು ಗಾಬರಿಯಾದ. ಮುಂದೆ ಬಂದು ಅವಳ ಗಲ್ಲವನ್ನು ಹಿಡಿದೆತ್ತಿದ. ಮಾಲಾಳ ಕಣ್ಣುಗಳಿಂದ ನೀರು ಸುರಿಯುತ್ತಿತ್ತು.

‘‘ಏನಾಯ್ತು? ಮಾಲಾ... ಯಾಕೆ ಅಳ್ತಿದೀಯ?’’ ಅವಳು ಉತ್ತರಿಸದೇ ಅವನನ್ನು ತಬ್ಬಿಕೊಂಡು ಅಳುತ್ತಲೇ ಇದ್ದಾಗ ಅವನ ಸಹನೆ ಮೀರಿತು. ಅವಳನ್ನು ಸರಿಸಿದ.

‘‘ಏನಾಯ್ತು ಅಂತ ಹೇಳದೇ ಹೀಗೇ ಅತ್ತರೆ ಏನು ಗೊತ್ತಾಗುತ್ತೆ? ಯಾರಾದ್ರೂ ಏನಾದ್ರೂ ಅಂದ್ರಾ...?’’

ಇಲ್ಲ ಎನ್ನುವಂತೆ ತಲೆಯಾಡಿಸಿ ಕಣ್ಣುಗಳನ್ನು ಒರೆಸಿಕೊಂಡಳು. ‘‘ಏನೇ ಆದರೂ ನೀನು ನನ್ನ ಕೈ ಬಿಡಬಾರದು... ಪ್ರಾಮಿಸ್ ಮಾಡು’’ ಅವನ ಮುಂದೆ ಕೈ ಚಾಚಿಗಳು. ಅವನು ತನ್ನ ಕೈಯನ್ನು ಅವಳ ಕೈಯ ಮೇಲೆ ಇಟ್ಟು ‘ಪ್ರಾಮಿಸ್’ ಎಂದ.

‘‘ಹಾಗಾದ್ರೆ... ನಾನು ಒಂದು ಮಾತು ಹೇಳ್ತೀನಿ. ನಮ್ಮ ಈ ಮದುವೆಗೆ ಮಧು ಖಂಡಿತಾ ಒಪ್ಪಲ್ಲ. ನನಗೆ ಗೊತ್ತು... ಯಾರು ಒಪ್ಪದಿದ್ದರೂ ಸರಿ ನೀನು ನಾನೂ ಮದುವೆಯಾಗಲೇ ಬೇಕು.’’

‘‘ಆಗಲೇ ಹೇಳಿದ್ನಲ್ಲ. ಈಗಲಿಂದ ಈ ಮದುವೆ ಮಾತು ಯಾಕೆ ಅಂತ? ಆ ಕಾಲ ಬಂದಾಗ ಎಲ್ಲರನ್ನು ಎದುರಿಸೋಣ... ಏಳು ರೆಡಿಯಾಗು ಕಾಲೇಜಿಗೆ ಹೋಗೋವಂತೆ...’’

‘‘ಮಧುಗೆ ನಿನ್ನನ್ನು ಕಂಡರೇ ಆಗುಲ್ಲ. ಡ್ಯಾಡಿ ‘ವಿಲ್’ನಲ್ಲಿ ನಿನಗೂ ಸಮಪಾಲು ಬರೆದಿರುವುದು ಅವನಿಗೆ ಇಷ್ಟವಿಲ್ಲ...’’ ಭಾರ್ಗವ ಸರಿಯಾಗಿ ನಿಂತ.

‘‘ನನಗೆ ಹಾಗೇ ಅನ್ನಿಸಿತ್ತು. ನನಗೆ ಯಾವ ಹಕ್ಕೂ ಇಲ್ಲ. ಅಪ್ಪಾಜಿ ಯಾಕೆ ಬರದ್ರೋ...?’’

‘‘ಹಾಗೆನ್ನಬೇಡ ಭಾರ್ಗವ. ಡ್ಯಾಡಿಗೆ, ನೀನು ಮಧುಕರನಿಗಿಂತ ಹೆಚ್ಚು. ನಿನ್ನನ್ನೇ ಹಿರಿಯಮಗ ಅಂತ ತಿಳಿದುಕೊಂಡಿದ್ದರು. ನೀನು ಹಾಗೇ ಇದ್ದೋನು... ಆದರೆ ಮಧು ಏನಂದು ಬಿಟ್ಟ ಗೊತ್ತಾ! ಅವನು ಈ ಮನೆಗೆ ಅಳಿಯನೂ ಅಲ್ಲ, ಮಗನೂ ಅಲ್ಲ... ಅಂತ... ನೀನು ಈ ಮನೆಗೆ ಸ್ವಂತ ಮಗನಲ್ಲದಿದ್ದರೆ ಏನಾಯ್ತು! ಅಳಿಯ ಅಂತೂ ಖಂಡಿತಾ...’’ ಅವಳು ಮುಗುಳ್ನಗುತ್ತಾ ಅವನಿಗೆ ಆತುಕೊಂಡಾಗ, ಅವನು ಅವಳಿಂದ ದೂರ ನಿಂತ. ಅವನ ಮನದಲ್ಲಿ ನಡೆಯುತ್ತಿದ್ದ ಮಥನವೇ ಬೇರೆ... ಮಧುಕರನಿಗೆ, ನನಗೆ ಆಸ್ತಿಯಲ್ಲಿ ಸಮಪಾಲು ಕೊಡುವುದು ಇಷ್ಟವಿಲ್ಲ... ತಂಗಿಯೊಂದಿಗೆ ಪಿತೂರಿ ನಡೆಸಿದ್ದಾನೆ. ಆದರೆ ಇವಳೋ ಮುಗ್ಧೆ... ಅಳಿಯನಾಗಿಬಿಟ್ಟರೆ ಎಲ್ಲಾ ಸರಿ ಹೋಗುತ್ತದೆ ಅಂತ ತಿಳಿದುಕೊಂಡಿದ್ದಾಳೆ... ಇಲ್ಲ... ಬಹುಶಃ ಇವನು ನಮ್ಮಿಬ್ಬರ ಮದುವೆಗೂ ಒಪ್ಪುವುದಿಲ್ಲ. ಆಸ್ತಿಯ ಆಸೆಗೆ ತಾನು ಮದುವೆಯಾಗುತ್ತಿರುವುದು ಅಂತ ಹಂಗಿಸಿ ಅನ್ನಬಹುದು. ಹಾಗೆಲ್ಲಾ ಮಾತುಗಳು ಬರುವ ಮೊದಲೇ ತಾನು ಏನಾದರೊಂದು ಇತ್ಯರ್ಥ ಮಾಡಲೇಬೇಕು ಅಂತಂದುಕೊಂಡು,

‘‘ಮಾಲಾ ಆಫೀಸಿಗೆ ಹೊತ್ತಾಯ್ತು... ಉಳಿದ ವಿಷಯಗಳನ್ನು ಸಾಯಂಕಾಲ ಮಾತಾಡೋಣ...’’

"ಯಾಕೆ? ನನ್ನನ್ನು ಮದುವೆಯಾಗೋಕೆ ನಿನಗೆ ಇಷ್ಟವಿಲ್ವಾ?" ಮುಖ ಗುಂಡಗೆ ಮಾಡಿಕೊಂಡು ಕೇಳಿದಾಗ, ಅವಳ ಕೆನ್ನೆ ಹಿಂಡಿದ.

"ನಾನೆಲ್ಲಿ ಹಾಗಂದೆ? ನಮ್ಮಿಬ್ಬರ ಮದುವೆಗೆ ಮುಂಚೆ, ಇತ್ಯರ್ಥವಾಗಬೇಕಾದ ವಿಷಯಗಳು ಬಹಳ ಇವೆ... ಮದುವೆ ಒಂದೇ ಮುಖ್ಯ ಅಲ್ಲ, ಜೊತೆಗೆ ಮರ್ಯಾದೆ ಯಾಗಿಯೂ ಇರಬೇಕು... ಮಧುಕರನ ಮನಸ್ಸಿನಲ್ಲಿರುವ ಕಹಿ ಎಲ್ಲಾ ಹೋಗಬೇಕು... ತಿಳೀತಾ?"

"ಅಂದ್ರೇ.... ಮಧುಕರನ ಹತ್ತಿರ ಜಗಳ ಆಡ್ತೀಯಾ?"

"ನಾನೇಕೆ ಜಗಳ ಆಡಲಿ? ಆ ಹಕ್ಕೂ ಇದೆಯೋ ಇಲ್ಲವೋ... ನಾನೇನು ಮಾಡ್ತೀನಿ ಅನ್ನೋದು ನಿನಗೆ ಬೇಡ. ಸದ್ಯಕ್ಕೆ ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು. ಹ್ಞಾಂ... ಒಂದು ಮುಖ್ಯವಾದ ವಿಷಯ... ನಿನ್ನ ಅಣ್ಣನಿಗೆ ಯಾವ ವಿಷಯದಲ್ಲೂ ಅನುಮಾನ ಬರಬಾರದು. ಸಮಯ ಬಂದಾಗ ನಾನೇ ಅವನ ಹತ್ತಿರ ಮಾತನಾಡ್ತೀನಿ."

"ನಾನು ನಿನ್ನನ್ನು ಪ್ರೀತಿಸ್ತೀನಿ ಭಾರ್ಗವ..." ಕೆನ್ನೆಗಳನ್ನು ಕೆಂಪು ಮಾಡಿಕೊಂಡಳು.

"ನೆನ್ನೆಯವರೆಗೂ ಈ ಭಾವನೆ ನಿನಗಿರಲಿಲ್ಲ.. ದಿಢೀರನೇ ಹುಟ್ಟಿರುವ ಪ್ರೀತಿ ಇದು. ಸ್ವಲ್ಪ ಟೈಂ ಕೊಡು..."

"ಯಾಕೆ ಹೀಗೆಲ್ಲಾ ಮಾತನಾಡ್ತೀಯ ಭಾರ್ಗವ. ನನಗೆ ಭಯ ಆಗುತ್ತೆ."

"ಭಯ ಪಡುವಂಥಾದ್ದು ಏನೂ ಇಲ್ಲ. ನಿನ್ನ ಅಣ್ಣ ತುಂಬಾ ಜಾಣ. ನೀನು ಸ್ವಲ್ಪ ಮುಗ್ಧೆ. ಅದಕ್ಕೆ ನಾವು ಸ್ವಲ್ಪ ಹುಶಾರಾಗಿರಬೇಕು. ನಾವಿಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿದ್ದೀವಿ ಅನ್ನೋ ವಿಷಯವೇ ಅವನಿಗೆ ಇಷ್ಟವಾಗುವುದಿಲ್ಲ..."

"ಅವನ್ಯಾರು ನನ್ನ ಇಷ್ಟಕ್ಕೆ ಅಡ್ಡಿ ಬರೋಕೆ...? ಹಾಗೇನಾದರೂ ಅಡ್ಡಿ ಬಂದರೆ, ನಾನೇ ಅವನನ್ನು ಈ ಮನೆಯಿಂದ ಹೊರಗೆ ಹಾಕ್ತೀನಿ. ಡ್ಯಾಡಿ ಈ ಮನೆಯನ್ನು ನನ್ನ ಹೆಸರಿಗೆ ಬರೆದಿದಾರೆ..."

"ಪ್ಲೀಸ್ ಸಾಕು ಈ ಆಸ್ತಿಯ ಮಾತು. ಕಾಲ ಬಂದಾಗ ಎಲ್ಲಾ ತಾನೇ ಸರಿ ಹೋಗುತ್ತದೆ. ಅಲ್ಲಿಯವರೆಗೆ ಯಾವ ವಿಷಯವನ್ನೂ ಮಾತನಾಡುವುದು ಬೇಡ" ಎಂದು ಹೇಳಿ ಅವಳನ್ನು ಅಲ್ಲೇ ಬಿಟ್ಟು, ತಾನು ಹೊರಗೆ ಬಂದಿದ್ದ. ಅಷ್ಟರಲ್ಲಿ ಭಟ್ಟರೂ ಬಂದಿದ್ದರು. ಬೇಗ ಬೇಗ ಸಿದ್ಧನಾಗಿ ಬೈಕ್ ಹತ್ತಿದ. ಏಕೋ ಏನೋ, ಆ ದಿನ ಆ ಬೈಕ್ ಸಹ ತನ್ನದಲ್ಲವೇನೋ ಎಂಬ ಅನುಮಾನ ಕಾಡಿತು.

* * * *

ಆದರೆ, ಮಾಲಾಳಿಗೆ ತನ್ನ ಅನಿಸಿಕೆಗಳನ್ನು ಭಾವನೆಗಳನ್ನು ಅದುಮಿಡಲು ಆಗುತ್ತಿರಲಿಲ್ಲ. ಇದ್ದಕ್ಕಿದ್ದಂತೆಯೇ ತಾನು ಭಾರ್ಗವನನ್ನು ಪ್ರೀತಿಸುತ್ತಿದ್ದೇನೆ ಎಂದು ಅನಿಸಿದ

ಕ್ಷಣದಿಂದ, ಅವಳು ಬೇರೆಯೇ ಲೋಕದಲ್ಲಿ ವಿಹರಿಸುತ್ತಿದ್ದಳು. ಆದಷ್ಟು ಬೇಗ ತಮ್ಮಿಬ್ಬರ ಮದುವೆ ನೆರವೇರಬೇಕು. ತಾವಿಬ್ಬರೂ ಪ್ರೇಮಲೋಕದಲ್ಲಿ ಹಕ್ಕಿಗಳಂತೆ ವಿಹರಿಸಬೇಕು ಎಂದು ಕಾವ್ಯಮಯವಾಗಿ ಆಲೋಚಿಸುತ್ತಿದ್ದಳು. ಆಗಾಗ್ಗೆ ಭಟ್ಟರು ಎಚ್ಚರಿಸುತ್ತಿದ್ದರು.

''ಏನಮ್ಮಾ... ಸದಾ ಏನೋ ಯೋಚನೆ ಮಾಡ್ತಾ ಇರ್ತೀಯಲ್ಲ... ಪರೀಕ್ಷೆ ಯಾವಾಗ?''

''ಇನ್ನೂ ಟೈಂಟೇಬಲ್ ಬಂದಿಲ್ಲ ಭಟ್ಟರೇ... ಯಾಕೋ ಓದೋಕೇ ಮನಸ್ಸಿಲ್ಲ...''

''ಹಾಗಂದ್ರೆ ಹೇಗಮ್ಮ? ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗಬೇಡವೆ?''

''ಅಯ್ಯೋ ಸದ್ಯ, ಬರೀ ಪಾಸಾದ್ರೆ ಸಾಕಾಗಿದೆ... ಎಲ್ಲಾ ಬೇಜಾರಾಗ್ತಿದೆ...'' ಭಟ್ಟರು ನಕ್ಕರು.

''ಅದು ಹಾಗೇನೇ... ಪರೀಕ್ಷೆ ಕಳೆಯೋವರೆಗೆ ಹಾಗೇ ಅನ್ನಿಸುತ್ತೆ... ಆಮೇಲೆ ಕಾಲೇಜು ಯಾವಾಗ ಶುರುವಾಗುತ್ತೋ ಅಂತ ಕಾಯ್ತಾ ಕೂತ್ಕೋತೀಯ...''

''ಇಲ್ಲ ಭಟ್ಟರೇ, ಪಾಸಾದ್ರೂ ಸರಿ ಫೇಲಾದ್ರೂ ಸರಿ... ನಾನು ಇನ್ನು ಮುಂದೆ ಖಂಡಿತಾ ಓದುಲ್ಲ...''

''ಯಾಕಮ್ಮ... ಮತ್ತೆ ಹೇಗೆ ಕಾಲ ಕಳಿತೀಯ?''

''ಮನೇಲೇ ಇದ್ದುಕೊಂಡು ಅಡಿಗೆ ಗಿಡಿಗೆ ಕೆಲಸ ಕಲಿತೀನಿ.''

''ಥೂ ಬಿಡ್ತು ಅನ್ನು... ನಿನ್ನಂತಹ ರಾಜಕುಮಾರಿಗೆ ಯಾಕೆ ಒಲೆ ಹಚ್ಚೋ ಕೆಲಸ...? ಹೋಗಲಿ ಮದುವೆ ಮಾಡಿ ಗಂಡನ ಮನೆಗೆ ಕಳಿಸೋಣ ಅಂತಂದ್ರೆ, ನೀನಿನ್ನೂ ಮಗು...''

ಮಾಲಾ ಕಿಲಕಿಲನೆ ನಕ್ಕಳು... ''ನಾನು ಮದುವೆಯಾದ್ರೂ ಗಂಡನ ಮನೆಗೆ ಹೋಗುಲ್ಲ ಭಟ್ಟರೇ... ಅವನೇ ನನ್ನ ಮನೇಲಿರ್ತಾನೆ...''

''ಹಾಗೂ ಆಗಬಹುದು. ನಿನ್ನಂಥೋಳಿಗೆ ಏನಮ್ಮ? ನೀನು ಹೇಳಿದ ಹಾಗೇ ಕೇಳೋ ರಾಜಕುಮಾರನೇ ಸಿಗ್ತಾನೆ... ರಾಜಕುಮಾರಿಯ ತರಹ ಹಾಯಾಗಿರು...''

''ಹೌದು ಭಟ್ಟರೇ... ನಾನೀಗಾಗ್ಲೇ ಒಬ್ಬ ರಾಜಕುಮಾರನ್ನ ಸೆಲೆಕ್ಟ್ ಮಾಡಿ ಕೊಂಡಿದೀನಿ...''

''ಹೌದೇನಮ್ಮಾ... ಯಾರು ಆ ಅದೃಷ್ಟವಂತ... ಎಲ್ಲಿದಾನೆ? ಹೇಗಿದಾನೆ?''

''ಸಸ್ಪೆನ್ಸ್... ಈಗಲೇ ಯಾರಿಗೂ ಹೇಳಬಾರದು ಅಂತ ಡಿಸೈಡ್ ಮಾಡಿ ಕೊಂಡಿದೀವಿ...''

''ಮಧೂಗೆ ಒಪ್ಗೆಯಾಗ್ತಾನಾ?'' ಕಾತುರದಿಂದ ಕೇಳಿದರು.

''ನಂಗೊತ್ತಿಲ್ಲ ಭಟ್ಟರೇ... ನನಗಿರೋ ಧೈರ್ಯ ಆ ಹುಡುಗನಿಗಿಲ್ಲ, ನನಗೆ ಮಧು ಒಪ್ಗೆ ಏನೂ ಬೇಕಿಲ್ಲ ಆದರೆ... ಆ ಹುಡುಗನೇ ಅನುಮಾನಿಸ್ತಾನೆ.''

''ಅಂಥಾ ಹುಡುಗ, ನಿನಗೆ ಸರಿಹೋಗುಲ್ಲ ಬಿಡು...''

''ಇಲ್ಲ ಭಟ್ಟರೆ ನಾನು ಅವನನ್ನು ತುಂಬಾ ತುಂಬಾ ಪ್ರೀತಿಸ್ತೀನಿ. ಅವನನ್ನೇ ಮದುವೆಯಾಗೋದು ಅಂತ ತೀರ್ಮಾನಿಸಿಬಿಟ್ಟಿದೀನಿ.'' ತನ್ನ ಎದೆಯ ಮೇಲೆ ಕೈಗಳನ್ನಿಟ್ಟುಕೊಂಡು ಕಣ್ಣುಗಳನ್ನು ತೇಲಿಸಿ ಮಾದಕ ನಗೆಯನ್ನು ನಕ್ಕಾಗ, ಭಟ್ಟರು ಆತಂಕದಿಂದ ಅವಳ ಮೇಲೆ ತಲೆಯಾಡಿಸಿದರು.

''ಹುಚ್ಚು ಹುಡುಗಿ ಏನೇನೋ ಕನಸುಗಳನ್ನು ಕಟ್ಟಿದೆ. ಈ ಮಗುವಿನ ಕನಸೆಲ್ಲಾ ನನಸಾಗಲಿ'' ಎಂದು ಹಾರೈಸಿದರು. ಮಾಲಾ, ಭಾರ್ಗವನನ್ನು ತನ್ನ ಕಣ್ಣ ಮುಂದೆ ನಿಲ್ಲಿಸಿಕೊಂಡು, ಈ ಮೊದಲೇ ನಾನೇಕೆ ಅವನನ್ನು ಪ್ರೀತಿಸಲಿಲ್ಲ.. ಸಮಯ ವ್ಯರ್ಥವಾಯಿತು ಎಂದು ಕೊರಗುತ್ತಿದ್ದಳು.

ಮಧು, ಭಾರ್ಗವನಿಗೆ ತನ್ನ ಛೇಂಬರಿಗೆ ಬರುವಂತೆ ಹೇಳಿಕಳಿಸಿದ. ಒಳಬಂದವನಿಗೆ, ಅಲ್ಲಿ ತಮ್ಮ ಕಂಪೆನಿಯ ಲೀಗಲ್ ಅಡ್ವೈಸರ್ ಸೂರ್ಯಪ್ರಕಾಶ್ ಸಹ ಇರುವುದನ್ನು ಗಮನಿಸಿದ. ಮುಖ ಗಂಭೀರವಾಯಿತು.

''ಕೂತ್ಕೋ ಭಾರ್ಗವ...'' ಎಂದಿಗಿಂತ ಹೆಚ್ಚಿನ ಮರ್ಯಾದೆಯನ್ನು ತೋರುತ್ತಾ ನುಡಿದ. ಭಾರ್ಗವ ಕುಳಿತ. ಸ್ವಲ್ಪ ಹೊತ್ತು ಅದೂ ಇದೂ ಬೇರೆ ಮಾತನಾಡಿ, ಲಾಯರ್ರು ಎದ್ದು ಹೋಗಿದ್ದರು. ಮಧುಕರ ಮಾತನ್ನು ಹೇಗೆ ಪ್ರಾರಂಭಿಸುವುದೆಂದು ಯೋಚಿಸುತ್ತಿದ್ದ. ಭಾರ್ಗವನೇ ತನ್ನ ಬಳಿಯಿದ್ದ ಪೇಪರ್‌ಗಳನ್ನು ಮಧುಕರನ ಕೈಗೆ ಕೊಟ್ಟ. ಮಧುಕರ ಒಂದೊಂದಾಗಿ ಪೇಪರ್ರುಗಳನ್ನು ನೋಡಿದ. ಮುಖದಲ್ಲಿ ಯಾವ ಭಾವನೆಯೂ ತುಳುಕದಂತೆ ಎಚ್ಚರಿಕೆ ವಹಿಸಿದ.

''ಏನಿದೆಲ್ಲಾ...? ಆಂ...'' ಬಹಳ ಕಷ್ಟಪಟ್ಟು ಕೇಳಿದ.

''ಏನು ಅಂತ ಅರ್ಥವಾಗಿದ್ದರೂ ಕೇಳ್ತಾ ಇದೀಯಲ್ಲ...''

''ಯಾಕೆ ಹೀಗೆ ಮಾಡಿದೆ ಅಂತ ಕೇಳ್ತಾ ಇದೀನಿ...''

''ಯಾಕೋ ಹೀಗೆ ಮಾಡಬೇಕು ಅಂತ ಅನ್ನಿಸ್ತು...''

''ನೀನು ಡ್ಯಾಡಿಯ 'ವಿಲ್'ಗೆ ಅವಮಾನ ಮಾಡ್ತಾ ಇದೀಯ...''

''ಇಲ್ಲ, ಖಂಡಿತಾ ಹಾಗೆ ಮಾಡ್ತಾ ಇಲ್ಲ, ಅವರ ಪ್ರೀತಿಗೆ, ವಿಶ್ವಾಸಕ್ಕೆ ನಾನು ಎಷ್ಟು ಜನ್ಮ ಎತ್ತಿ ಬಂದರೂ, ಅವರ ಋಣವನ್ನು ತೀರಿಸಲಾರೆ... ಆದರೆ ನಾನು ಅವರ ಸ್ವಂತ ಮಗ ಅಲ್ಲ ಎನ್ನುವುದು ಕಟುಸತ್ಯ. ನಿಮ್ಮಿಬ್ಬರಿಗೇ ಸಿಗಬೇಕಾದ ಪಾಲಿನಲ್ಲಿ ನಾನು ಹಕ್ಕುದಾರನಾಗಲಾರೆ... ಅದು ನನ್ನ ಆತ್ಮಸಾಕ್ಷಿಗೆ ಒಗ್ಗದ ವಿಷಯ...''

''ಓಹೋಹೋ... ಬಹಳ ದೊಡ್ಡ ದೊಡ್ಡ ಮಾತುಗಳನ್ನಾಡ್ತಿದೀಯ. ಇದಕ್ಕೆ ನಾನು ಒಪ್ಪದಿದ್ದರೆ...?''

''ಅದು ನಿನಗೆ ಸೇರಿದ್ದು. ನನಗೆ ಅನ್ನಿಸಿದ್ದನ್ನು ನಾನು ಮಾಡಿಯಾಗಿದೆ.

ನ್ಯಾಯವಾಗಿ ನಿನಗೆ ಸಿಗಬೇಕಾದ್ದನ್ನು ನಾನು ಹಿಂತಿರುಗಿಸಿದ್ದೇನೆ. ನಾನು ಮಾಡಿದುದರಲ್ಲಿ ಯಾವ ಸ್ವಾರ್ಥವೂ ಇಲ್ಲ ಎಂಬ ನಂಬಿಕೆ ನನಗಿದೆ''

''ಭಟ್ಟರಿಗೆ ಈ ವಿಷಯ ಗೊತ್ತಾ?''

''ಗೊತ್ತಿಲ್ಲ. ಗೊತ್ತಾದರೂ ಮಾವ ಏನನ್ನೂ ಹೇಳುವುದಿಲ್ಲ. ಅವರಿಗೆ ನನ್ನ ಮೇಲೆ ವಿಶ್ವಾಸವಿದೆ.''

'''ವಿಲ್'ಗೆ ಭಟ್ಟರು ಎಕ್ಸಿಕ್ಯೂಟರ್ ಆಗಿದಾರಲ್ಲ... ವಿಲ್‌ನಲ್ಲಿ ಏನೇನು ಬರೆದಿದೆ ಅಂತ ನಿನಗೆ ಮೊದಲೇ ತಿಳಿದಿತ್ತು ಅಲ್ವಾ?''

''ಇಲ್ಲ, ನನಗೆ ಏನೂ ಗೊತ್ತಿರಲಿಲ್ಲ. ಮಾವನಿಗೂ ಸಹ ಏನೂ ಗೊತ್ತಿರಲಿಲ್ಲವಂತೆ. ಅಪ್ಪಾಜಿ ಸೈನ್ ಮಾಡು ಅಂತ ಹೇಳಿದ ಕಡೆ ಸೈನ್ ಮಾಡಿದಾರೆ ಅಷ್ಟೇ...''

''ಈ ಮಾತನ್ನೆಲ್ಲಾ ನಾನು ಹೇಗೆ ನಂಬಲಿ ಭಾರ್ಗವ?'' ಮಧುಕರ ಸೊಟ್ಟನಗೆ ನಕ್ಕಾಗ, ಭಾರ್ಗವ ಹಲ್ಲು ಕಡಿದ. ಆದರೂ ಕೋಪವನ್ನು ತಡೆದುಕೊಂಡ.

''ಓ ಕೇ. ಡ್ಯಾಡಿಯ ಆಸ್ತಿಯಲ್ಲಿ ಪಾಲು ಬೇಡ ಅಂತ ನೀನು ಹೇಳುವುದರಲ್ಲಿ ಅರ್ಥವಿದೆ. ನೀನು ಸ್ವಂತ ಮಗನಲ್ಲ. ಆದರೆ ನೀನು ಅವರಿಗೆ ಅವಮಾನ ಮಾಡ್ತಾ ಇದೀಯೇನೋ ಅಂತ ಅನ್ನಿಸ್ತಿದೆ... ಅಥವಾ ಬೇರೆ ಏನಾದ್ರೂ ಉದ್ದೇಶವಿದ್ದರೆ ಈಗಲೇ ಹೇಳಿಬಿಡು...''

''ಅಂದ್ರೆ... ಏನು ನಿನ್ನ ಮಾತಿನ ಅರ್ಥ?'' ತಾನು ಹಾಗೂ ಮಾಲಾ ಮದುವೆ ಬಗ್ಗೆ ಮಾತಾಡಿಕೊಂಡಿರುವುದರ ಬಗ್ಗೆ ಏನಾದರೂ ಅನುಮಾನ ಬಂದಿರಬಹುದೇ ಅಂತಂದುಕೊಂಡಾಗ ತಲೆ ತಗ್ಗಿತು.

''ಏನೂ ಇಲ್ಲ, ಹೋಗಲಿಬಿಡು. ನಿನ್ನ ಅಪ್ಪಾಜಿ ನಿನ್ನನ್ನು ಸದಾ ಹೊಗಳುತ್ತಿದ್ದರು. ನಾನು ಸ್ವಂತ ಮಗನಾದರೂ, ನೀನೇ ಒಂದು ತೂಕ ಹೆಚ್ಚು ಅವರಿಗೆ. ಹಾಗೆ ಜಾದು ಮಾಡಿಬಿಟ್ಟಿದ್ದೆ ನೀನು. ನಾನೇ ಮಂಕುದಿಣ್ಣೆ... ಮನೆಯಿಂದ ಹೊರಗೇ ಇದ್ದೂ ಇದ್ದೂ ಹೊರಗಿನವನಾಗಿಬಿಟ್ಟಿದ್ದೆ. ಈಗ ನೀನು ಉದಾರ ಹೃದಯದಿಂದ ನಿನ್ನ ಭಾಗದ ಆಸ್ತಿಯನ್ನೆಲ್ಲಾ ನನಗೆ ಬರೆದುಕೊಟ್ಟು, ಇನ್ನೂ ಎತ್ತರಕ್ಕೆ ಬೆಳೆದಿದೀಯ. ಅಪ್ಪನ ಆತ್ಮಕ್ಕೆ ನಿಜವಾಗಿಯೂ ಹೆಮ್ಮೆಯಾಗಿರುತ್ತದೆ. ನಿನ್ನಂತಹ ಮಗನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದಕ್ಕೆ ಅವರ ಆತ್ಮಕ್ಕೆ ನಿಜವಾಗಿಯೂ ಶಾಂತಿ ಸಿಗುತ್ತದೆ.''

''ನೀನ್ಯಾಕೆ ಹೀಗೆ ವ್ಯಂಗ್ಯವಾಗಿ ಮಾತನಾಡ್ತೀಯೋ ನನಗೆ ಅರ್ಥವಾಗ್ತಿಲ್ಲ. ಅಪ್ಪಾಜಿ ಇಂದು ಬದುಕಿಲ್ಲ ನಿಜ... ಅವರು ನನ್ನನ್ನು ಹಿರಿಮಗನಂತೆ ಬೆಳೆಸಿ, ನನ್ನ ಮೇಲೆ ವಿಪರೀತ ವಿಶ್ವಾಸ ಹಾಗೂ ನಂಬಿಕೆಯನ್ನಿಟ್ಟುಕೊಂಡಿದ್ದರು. ಅವರ ಮಗನಾದ ನೀನು ನನಗೆ ಸ್ವಂತ ತಮ್ಮನಿದ್ದ ಹಾಗೆ. ನಿನಗೆ ನನ್ನಿಂದ ಯಾವುದೇ ರೀತಿಯ ತೊಂದರೆಯಾಗ ಬಾರದು ಅನ್ನುವುದೇ ನನ್ನ ಆಸೆ... ನಿನಗೆ ನನ್ನಿಂದ ಯಾವುದೇ ಸಹಾಯ ಬೇಕಾದರೂ ಕೇಳು. ನನಗೆ ನಿನ್ನ ಮೇಲೆ ಯಾವುದೇ ವಿಷಯದಲ್ಲೂ ಬೇಸರವಿಲ್ಲ.''

ಮಧುಕರ ಅಡ್ಡಡ್ಡ ತಲೆಯಾಡಿಸಿ ನಕ್ಕ. ''ಎಷ್ಟೋ ವರ್ಷಗಳು ನಾವಿಬ್ಬರೂ ಒಟ್ಟಿಗೇ ಬೆಳೆದರೂ, ನೀನು ಎಂದೂ ನನ್ನ ಎದುರಿಗೆ ಇಷ್ಟು ಮಾತುಗಳನ್ನಾಡಿರಲಿಲ್ಲ. ಹೋಗಲಿ ಬಿಡು... ನನಗೆ ಯಾವ ರೀತಿಯಲ್ಲೂ ಬೇಸರವಿಲ್ಲ. ನೀನು ನ್ಯಾಯದ ಪರವಾಗಿದ್ದರೆ, ನನಗೂ ಅನುಕೂಲವೇ. ಡ್ಯಾಡಿ ಯಾವುದೋ ಋಣಕ್ಕೆ ಹೆದರಿ ಹೀಗೆ ಮಾಡಿರಬಹುದು. ನಿನ್ನ ತಾಯಿ ನಮ್ಮಿಬ್ಬರನ್ನು ತನ್ನ ಮಕ್ಕಳಂತೆಯೇ ಸಾಕಿ ಬೆಳೆಸಿದರು. ಆ ಋಣವನ್ನು ನಾವಿಬ್ಬರೂ ಈ ಜನ್ಮದಲ್ಲಿ ತೀರಿಸುವುದಂತೂ ಅಸಾಧ್ಯ. ಆ ಉಪಕಾರಕ್ಕೆ ಬದಲಾಗಿ ನಿನಗೆ ಏನು ಬೇಕೋ ಕೇಳು. ನನ್ನ ಕೈಲಾದರೆ ಕೊಡ್ತೀನಿ.''

''ಸದ್ಯಕ್ಕೆ ಏನೂ ಬೇಡ ಮಧುಕರ. ನನ್ನ ತಾಯಿಯ ಮೇಲೆ ನೀನು ಇಟ್ಟಿರುವ ಗೌರವಕ್ಕೆ ಥ್ಯಾಂಕ್ಸ್... ನಾನಿನ್ನು ಬರ್ಲಾ?''

''ಓ..ಕೇ. ನಾನು ಮತ್ತೊಮ್ಮೆ ಈ ಪೇಪರ್ಸ್‌ನ್ನೆಲ್ಲಾ ನೋಡಿ, ನಮ್ಮ ಲಾಯರನ್ನ ಕನ್ಸಲ್ಟ್ ಮಾಡ್ತೀನಿ. ಅವರು ಹೇಗೆ ಹೇಳ್ತಾರೋ ಹಾಗೇ... ಆಮೇಲೆ ಒಂದ್ಮಾತು... ನೀನೂ ಯಾರಾದ್ರೂ ಲಾಯರ್‍ನ್ನ ಕನ್ಸಲ್ಟ್ ಮಾಡಿದೀಯ ಹೇಗೆ?''

''ಇಲ್ಲಪ್ಪಾ, ನನಗ್ಯಾಕೆ ಲಾಯರ್ರು... ನನಗೆ ನಾನೇ ಅಡ್ವೈಸರ್. ಈ ವಿಷಯ ನನ್ನ ಮಾವನಿಗೂ ಸಹ ಗೊತ್ತಿಲ್ಲ''

''ಅಂತೂ ನಮ್ಮನ್ನೆಲ್ಲ ಚಿಕ್ಕೋರನ್ನ ಮಾಡಿಬಿಟ್ಟೆ... ಈಗಲೂ ಸಮಯವಿದೆ. ವಿಥ್‌ಡ್ರಾ ಮಾಡ್ಕೊಳ್ಳೋದಾದ್ರೆ ನೋಡು...''

''ಛೆ...ಛೆ ನಾನು ಅಂಥೋನಲ್ಲ. ಒಂದೇ ಮಾತು. ಕೊಟ್ಟ ಮಾತಿಗೆ ತಪ್ಪೋನಲ್ಲ...''

''ಓಕೇ ಭಾರ್ಗವ. ನಿನಗೆ ಏನು ಹೇಳಬೇಕೂಂತ ನನಗೆ ತಿಳೀತಿಲ್ಲ. ಮಾಲಾಳನ್ನು ಒಂದ್ಮಾತು ಕೇಳ್ತೀನಿ. ಆಮೇಲೆ ಅವಳು ನನ್ನ ಹತ್ತಿರ ಜಗಳ ಆಡ್ತಾಳೆ. ಅವಳಿಗೂ ಅಷ್ಟೇ ನಿನ್ನನ್ನು ಕಂಡರೇ ಹೆಚ್ಚು ಪ್ರೀತಿ...''

''ಅವಳಿಗೆ ಹೇಳೋ ಅಗತ್ಯವಿಲ್ಲ''

''ಆಫ್ಟರ್ ಆಲ್ ಷೀ ಈಸ್ ಮೈ ಸಿಸ್ಟರ್. ಅವಳಿಗೆ ಏನು ಹೇಳಬೇಕು, ಹೇಳಬಾರದ್ದು ಯಾವುದು ಅನ್ನೋದು ನನ್ನ ಕನ್ಸರ್ನ್... ರೈಟ್?''

ಭಾರ್ಗವ ಕೆಂಪಾದ. ಅವಡುಕಚ್ಚಿ ಸುಮ್ಮನಾದ. ಮಧುಕರ ಒಳಗೊಳಗೇ ಖುಷಿಯಿಂದ ನಗುತ್ತಿದ್ದಾನೆನ್ನುವುದು ಕಾಣುತ್ತಿತ್ತು. ಇನ್ನು ಇವನ ಎದುರಿಗಿದ್ದರೆ ತನ್ನ ಸಂಯಮವೂ ಮೀರಬಹುದು ಎಂದುಕೊಂಡು, ಆ ಛೇಂಬರಿನಿಂದ ಹೊರಬಂದ. ತನ್ನ ಬೆನ್ನ ಹಿಂದೆ, ಮಧುಕರ ಮುಕ್ತವಾಗಿ ನಗುತ್ತಿರಬಹುದು ಅಂತೆನ್ನಿಸಿದರೂ ತಿರುಗಿ ನೋಡಿರಲಿಲ್ಲ.

* * * *

ಕಾಯಿದೆ ಪ್ರಕಾರ ಸದಾಶಿವರಾಯರ ಎಲ್ಲಾ ಖಾತೆಯೂ ಮಧುಕರನ ಹೆಸರಿಗೆ ವರ್ಗವಾಗಿತ್ತು. ಈ ಬಗ್ಗೆ ಅವನು ಮಾಲಾಳೊಡನೆಯಾಗಲೀ, ಭಾರ್ಗವನೊಡನೆ ಯಾಗಲೀ ಯಾವ ವಿಷಯವನ್ನು ಚರ್ಚಿಸದಿದ್ದರೂ ಕೆಲವು ಪೇಪರ್‌ಗಳಿಗೆ ಸಹಿಯನ್ನು ಹಾಕಿಸಿಕೊಂಡಿದ್ದ. ಭಾರ್ಗವ ಅದು ತನಗೆ ಸಂಬಂಧಿಸಿದ ವಿಷಯವಲ್ಲವೆಂದು ಸುಮ್ಮನಾಗಿದ್ದ. ಮಾಲಾ ಆ ಬಗ್ಗೆ ತಿಳಿದುಕೊಳ್ಳುವ ಗೋಜಿಗೇ ಹೋಗಿರಲಿಲ್ಲ.

ತಮ್ಮಿಬ್ಬರ ಮಧ್ಯೆ ಯಾವ ಮಾತುಕತೆಗಳು ನಡೆದಿಲ್ಲವೆಂಬಂತೆ ಭಾರ್ಗವ ಸಹಜವಾಗಿಯೇ ವರ್ತಿಸುತ್ತಿದ್ದ. ಮಧುಕರನೇ ಸಂಶಯದ ಕಣ್ಣುಗಳಿಂದ ಭಾರ್ಗವನನ್ನು ಗಮನಿಸುತ್ತಿದ್ದ.

ಮಾಲಾ ತನ್ನ ಹಾಗೂ ಭಾರ್ಗವನ ಮದುವೆಯ ಬಗ್ಗೆ ಹೊಂಗನಸುಗಳನ್ನು ಕಾಣುತ್ತಿದ್ದಳು. ವಯಸ್ಸಿಗೆ ಸಹಜವಾದ ಆಸೆಯಂತೆ, ಯಾವುದಾದರೂ ಸುಂದರವಾದ ಸ್ಥಳಕ್ಕೆ ಹನಿಮೂನ್‌ಗೆ ಹೋಗಬೇಕೆಂದು ಪ್ಲಾನ್ ಮಾಡುತ್ತಿದ್ದಳು. ಭಾರ್ಗವ ಇಂತಹ ಮಾತುಗಳಿಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಮಧುಕರ ತಮ್ಮಿಬ್ಬರ ಮದುವೆಗೆ ಖಂಡಿತಾ ಒಪ್ಪಿಗೆ ಕೊಡುವುದಿಲ್ಲವೆನ್ನುವುದು ಅವನಿಗೆ ಖಚಿತವಾಗಿತ್ತು. ತನ್ನ ಆಸೆಗಳಿಗೆ ಕಡಿವಾಣವನ್ನು ಹಾಕಿಕೊಂಡಿದ್ದ. ತಾನು ಅವಳ ಆಸೆಗಳಿಗೆ ನೀರೆರೆದು ಪೋಷಿಸಬಾರದು, ಮುಂದೆ ಏನಾಗುತ್ತದೋ... ಅವಳನ್ನು ಈ ಮನೆಯಿಂದ ಓಡಿಸಿಕೊಂಡು ಹೋಗಿ, ಈ ಮನೆಯ ಮರ್ಯಾದೆಗೆ ಭಂಗ ತರುವುದು ಸರಿಯಲ್ಲ ಎಂದೇ ಯೋಚಿಸುತ್ತಿದ್ದ.

ಈಗ ಕಂಪೆನಿಯ ಛೇರ್‌ಮನ್ ಮಧುಕರನೇ ಆಗಿದ್ದ. ಹೊಸದಾಗಿ, ಧ್ರುವನನ್ನು ತನ್ನ ಪಾರ್ಟನರ್‌ನನ್ನಾಗಿ ಮಾಡಿಕೊಂಡಿದ್ದ. ಈ ಬಗ್ಗೆ ಅವನು ಯಾರಿಗೂ ಸುಳಿವನ್ನೇ ಕೊಟ್ಟಿರಲಿಲ್ಲ. ಮೀಟಿಂಗ್‌ಗೆ ಬಂದಿದ್ದ ಭಾರ್ಗವನಿಗೆ ಧ್ರುವನ ಹಾಗೂ ಅವನ ಗೆಳೆಯ ಪ್ರತಾಪನ ಪರಿಚಯವಾಗಿತ್ತು. ಮಾಲಾ ಕಾಲೇಜು ಡೇ ಫಂಕ್ಷನ್ ಇದೆಯೆಂದು ಮೀಟಿಂಗ್‌ಗೆ ಬಂದಿರಲಿಲ್ಲ. ಆ ರಾತ್ರಿಯ ಡಿನ್ನರ್ ಪಾರ್ಟಿಗೂ ಭಾರ್ಗವ ಹೋಗಲಿಲ್ಲ. ಮಧುಕರ ನಾಲ್ಕಾರು ಸಲ ಮನೆಗೆ ಫೋನು ಮಾಡಿದಾಗಲೂ ಮಾಲಾ ಮನೆಗೆ ಬಂದಿಲ್ಲವೆಂದು ತಿಳಿದು ಸುಮ್ಮನಾದ.

ಕಾಲೇಜಿನ ಫಂಕ್ಷನ್ ಮುಗಿಯುವ ವೇಳೆಗೆ ಹೋಗಿ ಭಾರ್ಗವ ಹೋಗಿ ಅವಳನ್ನು ಮನೆಗೆ ಕರೆತಂದ. ಮಧ್ಯರಾತ್ರಿಯ ಹೊತ್ತಿಗೆ ಪಾರ್ಟಿಯಿಂದ ಬಂದ ಮಧು ಮಲಗಿದ್ದ ತಂಗಿಯುನ್ನು ಎಬ್ಬಿಸಿ, ಚೆನ್ನಾಗಿ ಬೈದ.

''ನಿನಗೆ ನಿನ್ನ ಕಾಲೇಜಿನ ಫಂಕ್ಷನ್ ಹೆಚ್ಚಾಯಿತಲ್ವಾ? ನೀನೂ ಕಮಿಟಿ ಮೆಂಬರ್ರು. ಪಾರ್ಟಿಗಾದರೂ ಬರಬೇಕು ಅಂತ ಗೊತ್ತಾಗ್ತುಲ್ವಾ? ಬೇಕೂಂತ ನೀವುಗಳೆಲ್ಲ ಸೇರಿಕೊಂಡು ನನಗೆ ಅವಮಾನ ಮಾಡ್ತೀರಾ...''

''ಇದರಲ್ಲಿ ಅವಮಾನ ಏನು ಬಂತು? ನಾನು ಅವತ್ತೇ ಹೇಳಿದ್ದೆ ನನಗೆ ಮೀಟಿಂಗ್‌ಗೆ ಬರುಕ್ಕಾಗುಲ್ಲ ಅಂತ. ನೀನು ನಿನ್ನ ಪ್ರೋಗ್ರಾಂನೆ ಪೋಸ್ಟ್‌ಪೋನ್ ಮಾಡಬಹುದಾಗಿತ್ತಲ್ಲ...''

''ನಾನು ಏನು ಮಾಡಬೇಕು, ಏನು ಮಾಡಬಾರದು ಅಂತ ನನಗೆ ಬುದ್ಧಿ ಹೇಳೋರೇ ಎಲ್ಲಾ... ನಿನಗಾದ್ರೂ ಗೊತ್ತಾಗಬೇಡ್ವಾ ಭಾರ್ಗವ... ನಾನು ಫೋನು ಮಾಡಿದಾಗ ಹೋಗಿ ಕರೆದುಕೊಂಡು ಬರಬೇಕಾಗಿತ್ತು...''

''ನೀನು ಹಾಗಂತ ಹೇಳಲಿಲ್ಲವಲ್ಲ ಮಧು...''

''ಓ... ಷಟಪ್... ಎಲ್ಲಾ ನಾನೇ ಹೇಳಬೇಕಾ? ನಿಮಗೆ ಜವಾಬ್ದಾರಿ ಬೇಡವಾ?...''

''ಐ ಆಮ್ ಸಾರಿ ಮಧು... ನನಗೆ ಗೊತ್ತಾಗಲಿಲ್ಲ''

''ನೀನ್ಯಾಕೆ ಸಾರಿ ಕೇಳಬೇಕು ಭಾರ್ಗವ? ನಿಂದೇನೂ ತಪ್ಪು ಇಲ್ಲ ಇದರಲ್ಲಿ'' ಮಾಲಾ ಭಾರ್ಗವನ ಪರವಾಗಿ ಮಾತನಾಡಿದಾಗ ಮಧುಕರನ ಕೋಪ ನೆತ್ತಿಗೇರಿತು.

''ನಿನಗೆ ನಾಚಿಕೆಯಾಗೋಲ್ವಾ ಮಾಲಾ... ನಾನು ನಿನ್ನ ಸ್ವಂತ ಅಣ್ಣ... ನಾನು ಮಾಡೋದೆಲ್ಲಾ ತಪ್ಪು... ಇವನು ಮಾಡೋದೆಲ್ಲ ಸರಿ ಅಲ್ವಾ?''

''ತಪ್ಪು ಯಾರದು ಸರಿ ಯಾರದು ಅಂತ ನನಗೂ ಗೊತ್ತಾಗುತ್ತೆ. ನೀವೇ ಹೇಳಿ ಭಟ್ಟರೇ... ಭಾರ್ಗವಂದು ಏನಾದ್ರೂ ತಪ್ಪು ಇದೆಯಾ?''

''ಓ... ಓತಿಕೇತಕ್ಕೆ ಬೇಲಿ ಸಾಕ್ಷಿ... ನಂಗೊತ್ತು... ನೀವೆಲ್ಲಾ ಒಂದಾಗಿ ನನ್ನನ್ನೇ ಬೇರೆ ಮಾಡಿದೀರಿ... ಆದರೇನು? ಈ ಮನೆಗೆ ನಾನೇ ಯಜಮಾನ... ನನ್ನ ಮಾತೇ ನಡೆಯಬೇಕು... ಇಲ್ಲದಿದ್ದರೆ ನಿಮ್ಮ ನಿಮ್ಮ ದಾರಿ ಹಿಡಿದು ಹೊರಟುಹೋಗಿ... ನಾನು ಯಾರನ್ನೂ ತಡೆಯೋಲ್ಲ''

''ಯಾಕಪ್ಪಾ ಹಾಗೆಲ್ಲಾ ಮಾತಾಡ್ತೀಯ...'' ಅಂತ ಹೇಳುತ್ತಾ ಹತ್ತಿರ ಬಂದವರಿಗೆ ಅವನು ಕುಡಿದಿದ್ದಾನೆಂಬ ವಾಸನೆ ಬಡಿಯಿತು. ಹಿಂದಕ್ಕೆ ಸರಿದು ಭಾರ್ಗವನಿಗೆ ಸಂಜ್ಞೆ ಮಾಡಿದರು. ಭಾರ್ಗವ ಮಾಲಾಳ ಕೈ ಹಿಡಿದು ಅವಳನ್ನು ಅವಳ ರೂಮಿಗೆ ಕರೆದೊಯ್ಯಲು ಹೊರಟವನನ್ನು ಮಧು ತಡೆದ.

''ಏಯ್ ಕೈ ಬಿಡೋ... ಅವಳು ನನ್ನ ತಂಗಿ... ಅವಳ ಮೈ ಮುಟ್ಟುವ ಅಧಿಕಾರ ನಿನಗಿಲ್ಲ'' ಏನೋ ಹೇಳ ಹೊರಟವಳನ್ನು ಭಾರ್ಗವ ತಡೆದ. ಭಟ್ಟರು ಅವಳನ್ನು ಅವಳ ರೂಮಿಗೆ ಕರೆದೊಯ್ದರು. ಭಾರ್ಗವ ಅವನ ಕಡೆ ತಿರಸ್ಕಾರವಾಗಿ ನೋಡಿ, ತನ್ನ ಪಾಡಿಗೆ ತಾನು ತನ್ನ ರೂಮಿಗೆ ಹೊರಟುಹೋದ. ಒಂದು ಗಳಿಗೆ ಅಲ್ಲಿಯೇ ನಿಂತಿದ್ದು ಸುತ್ತಲೂ ಕೆಕ್ಕರಿಸಿ ನೋಡಿ ಮಧು ತನ್ನ ರೂಮಿಗೆ ಹೋಗಿ ಮಂಚದ ಮೇಲೆ ಉರುಳಿಕೊಂಡ.

''ಭಟ್ಟರೇ ಇವನ್ಯಾಕೆ ಹೀಗಾಡ್ತಾನೆ? ಇವನನ್ನು ನನ್ನ ಅಣ್ಣ ಅಂತ ಹೇಳಿಕೊಳ್ಳೋಕೇ ಅಸಹ್ಯವಾಗುತ್ತೆ''

''ಹೋಗಲಿ ಬಿಡಮ್ಮ... ಪಾರ್ಟಿಲಿ ಸ್ವಲ್ಪ ಕುಡಿದುಬಿಟ್ಟಿದಾನೆ ಅಂತ ಕಾಣಿಸುತ್ತೆ. ಮೊದಲೇ ಮುಂಗೋಪ''

"ಇವನು ಹೀಗೇ ಆಡುತ್ತಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ತೀನಿ ಅಷ್ಟೇ. ತಂದೆ ತಾಯಿ ಇಲ್ಲದ ಅನಾಥೆ ನಾನು ಅನ್ನೋ ಕರುಣೆನಾದ್ರೂ ಬೇಡ್ವಾ ಇವನಿಗೆ...?"

"ಬೆಳಗಿನ ಹೊತ್ತಿಗೆ ಸರಿ ಹೋಗ್ತಾನೆ ನೋಡ್ತಿರು. ನಿನ್ನನ್ನ ಬಂದು ಸಾರಿ ಕೇಳ್ತಾನೆ..." ಬಲವಂತವಾಗಿ ನಗುತ್ತಾ ಅವಳ ತಲೆ ಸವರಿ ಅಲ್ಲಿಂದ ಹೊರಬಂದರು. ಈಗ ಭಾರ್ಗವ ನನ್ನ ಬಳಿಯಲ್ಲಿ ಇದ್ದಿದ್ದರೇ... ಅವನ ಎದೆಯಲ್ಲಿ ಮುಖವಿಟ್ಟು ಅತ್ತು ಹೃದಯ ಹಗುರ ಮಾಡಿಕೊಳ್ಳಬಹುದಾಗಿತ್ತು ಈ ರಾಕ್ಷಸ ಅರ್ಧ ರಾತ್ರೀಲಿ ಎಷ್ಟು ರಂಪ ಮಾಡಿದ! ಬೆಳಿಗ್ಗೆ ಸಾರಿ ಕೇಳಲಿ, ನಾನಂತೂ ಅವನನ್ನು ಕ್ಷಮಿಸೋಲ್ಲ. ತನ್ನಲ್ಲೇ ಹೇಳಿಕೊಂಡು ಕೆನ್ನೆಯ ಮೇಲೆ ಹರಿದಿದ್ದ ಕಣ್ಣೀರನ್ನು ನೈಟಿಯ ತುದಿಯಿಂದ ಒರೆಸಿಕೊಂಡು ಮಲಗಿದಳು. ಏಕೋ ಏನೋ ತಂದೆಯ ನೆನಪು ಒತ್ತಿ ಒತ್ತಿಕೊಂಡು ಬಂತು. "ಡ್ಯಾಡೀ ನೀವು ಯಾಕೆ ಹೀಗೆ ಮಾಡಿದಿರಿ? ನನ್ನ ಭಾರ್ಗವನ ಮದುವೆಯಾಗೋವರೆಗಾದರೂ ನೀವು ಬದುಕಿರಬೇಕಾಗಿತ್ತು..." ನಿಧಾನವಾಗಿ ನಿದ್ದೆ ಆವರಿಸಿಕೊಂಡಾಗ ಈ ಚಿಂತೆಗಳು ದೂರವಾದವು.

* * * *

ಬೆಳಿಗ್ಗೆ ತಿಂಡಿಯ ಸಮಯದಲ್ಲಿ ಮಾಲಾಳಾಗಲೀ, ಭಾರ್ಗವನಾಗಲೀ ಡೈನಿಂಗ್ ಟೇಬಲ್ ಬಳಿ ಕಾಣದಿದ್ದಾಗ ಮಧು ಹುಬ್ಬೇರಿಸಿದ.

"ಎಲ್ಲೀ ಭಟ್ರೇ... ಅವರ್‍ಯಾರೂ ಇಲ್ಲ. ಅವರುಗಳದ್ದು ತಿಂಡಿ ಆಯ್ತಾ?"

"ಇನ್ನೂ ಇಲ್ಲ. ಮಾಲಾ ಇನ್ನೂ ಎದ್ದಿಲ್ಲ. ಭಾರ್ಗವ ಮಾರ್ಕೆಟ್ಟಿಗೆ ಹೋಗಿದಾನೆ."

"ಅವನ್ಯಾಕೆ ಹೋದ? ನೀವು ಅಲ್ವಾ ದಿನಾ ಹೋಗೋದು?"

"ನೀವಿಬ್ರೂ ಇನ್ನೂ ಎದ್ದಿರಲಿಲ್ಲ. ಅವನೇ ಹೋಗ್ತೀನಿ ಅಂತಂದ..."

"ಹೋಗಲಿಬಿಡಿ... ಮಾಲಾಳನ್ನು ಎಬ್ಬಿಸಿ..."

"ಯಾಕೋ ತಲೆ ನೋಯ್ತಿದೆ ಅಂತ ಮಲಗೇ ಇದೆ... ಬೇಬಿ..."

"ಮುದ್ದು ಅತಿಯಾಯ್ತು ನಿಮ್ಮದು... ಯಾಕಂತೆ ತಲೆನೋವು?"

"ನೆನ್ನೆ ಇಡೀ ದಿನವೆಲ್ಲಾ ಕಾಲೇಜಿನಲ್ಲಿ ಫಂಕ್ಷನ್ ಅಂತ... ಅಲ್ಲೇ ಇದ್ದಳು... ಅಲ್ಲದೇ ರಾತ್ರಿ..."

"ರಾತ್ರಿ ಏನಾಯ್ತು...?"

"ನೀನು ಹಾಗೆ ಎಬ್ಬಿಸಿ ಬೈಯಬಾರದಾಗಿತ್ತಪ್ಪ..."

"ಓ ಅದಾ? ನೀವೂ ನಂದೇ ತಪ್ಪು ಅಂತೀರಿ... ನಂಗೆ ಗೊತ್ತು.. ರಾತ್ರಿ ಡ್ರಿಂಕ್ಸ್ ಹೆಚ್ಚಾಯ್ತು ಅಂತ ಕಾಣುತ್ತೆ... ಏನೋ ನಾಲ್ಕು ಮಾತು ಅಂದೆ... ಅದೇ ದೊಡ್ಡದಾ? ಅವಳು ನನ್ನನ್ನ ಬೈಯಲ್ವಾ?"

''ಅವಳು ಎಷ್ಟಾಗಲೀ ಹುಡುಗಿ... ನಿನಗಿಂತ ಚಿಕ್ಕವಳು... ಅವಳು ಮುಗ್ಧೆ... ನೀನಾದ್ರೆ ಜವಾಬ್ದಾರಿಯುಳ್ಳವನು... ಈ ಮನೆಯ ಯಜಮಾನ... ಹಾಗೆಲ್ಲಾ ಹೆಣ್ಣು ಹುಡುಗಿಯರ ಮನಸ್ಸನ್ನು ನೋಯಿಸಬಾರದಪ್ಪಾ... ನಿನಗೆ ಶ್ರೇಯಸ್ಸಲ್ಲ''

''ನೋಡಿದ್ರಾ... ನೋಡಿದ್ರಾ... ನನಗೇ ಉಪದೇಶ ಮಾಡ್ತೀರಿ... ಹೋಗಲಿ ಬಿಸಿ ಬಿಸಿ ಕಾಫಿ ಕೊಡಿ... ನಾನು ಅವಳನ್ನು ಎಬ್ಬಿಸಿಕೊಂಡು ಬರ್ತೀನಿ.''

''ತಪ್ಪುತಿಳ್ಕೋಬೇಡಪ್ಪಾ... ನಾನು ನಿನ್ನತಂದೆಗಿಂತ ಹಿರಿಯವನು. ಈ ಮನೆಯಲ್ಲಿ ಒಬ್ಬನಾಗಿಬಿಟ್ಟಿದೀನಿ... ಏನೋ ಚಿಕ್ಕೋನು ಅಂತ ನಾಲ್ಕು ಮಾತು ಹೇಳ್ತೀನಿ... ನಿನ್ನ ತಂದೆ ಬದುಕಿದ್ದಿದ್ದರೆ, ನಾನು ಯಾವ ಮಾತಿಗೂ ಬಾಯಿ ಹಾಕುತ್ತಿರಲಿಲ್ಲ.''

''ಸರಿ ಸರಿ, ಇದಕ್ಕೆಲ್ಲಾ ಡ್ಯಾಡೀನೇ ಕಾರಣ. ತಾಯಿಯಿಲ್ಲದ ಮಗು ಅಂತ ಅವಳನ್ನು ಮುದ್ದು ಮಾಡಿ ಕೆಡಿಸಿದರು. ನನ್ನನ್ನು ಮನೆಯಿಂದ ಹೊರಗೇ ಇಟ್ಟು ಹಾಳು ಮಾಡಿದರು.''

''ಹಾಗೆಲ್ಲಾ ಹೇಳಬಾರದಪ್ಪಾ... ಎಲ್ಲಾ ನಿಮ್ಮ ಒಳ್ಳೇದಕ್ಕೇ ತಾನೇ...''

''ಹೌದು ಹೌದು. ಎಲ್ಲಾ ನನ್ನ ಒಳ್ಳೇದಕ್ಕೇನೇ... ಈ ಮನೆಯ ವಿಷಯ ಭಾರ್ಗವನಿಗೆ ಗೊತ್ತಿರುವಷ್ಟು ನನಗೆ ಗೊತ್ತಿಲ್ಲ... ನನಗೆ ಹೇಳೋರೂ ಯಾರೂ ಇಲ್ಲ... ನಿಜವಾದ ಅನಾಥ ನಾನು...''

''ಹಾಗೆಲ್ಲಾ ಅಂದ್ಕೋಬಾರದು. ನಾವೆಲ್ಲಾ ಇಲ್ವಾ ! ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ತಿದೀವಲ್ಲ. ಇನ್ನು ಆಸ್ತಿಪಾಸ್ತಿ ವಿಚಾರ... ಅದರ ಬಗ್ಗೆ ನನಗೆ ಹೇಗಪ್ಪಾ ತಿಳಿಯುತ್ತೆ. ಅಲ್ಲದೇ ನನಗ್ಯಾಕೆ?''

''ಹೋಗಲಿ ಬಿಡಿ. ಮಾತು ಎಲ್ಲಿಂದೆಲ್ಲಿಗೋ ಹೋಗ್ತಿದೆ. ನಾನು ಮಧ್ಯಾಹ್ನದ ಹೊತ್ತಿಗೆ ಏರ್‌ಪೋರ್ಟ್‌ಗೆ ಹೋಗಬೇಕು... ಕಾಫಿ ಕೊಡ್ತೀರಾ?''

''ಹೂಂ ತಂದೆ ಈಗ'' ಎನ್ನುತ್ತಾ ಅವರು ಒಳಗೆ ಬಂದರು. ಮಧು ಎದ್ದು ಮಾಲಾಳ ರೂಮಿಗೆ ಬಂದ. ಭಾರ್ಗವ ಹೊರಗಿನಿಂದ ಒಳಕ್ಕೆ ಬಂದ.

''ಮಾಲಾ... ಮಾಲಾ...'' ಮಧು ಬಾಗಿಲಲ್ಲೇ ನಿಂತು ಕರೆದಾಗ, ಮಾಲಾ ಮುಸುಕನ್ನು ಎಳೆದುಕೊಂಡಳು.

''ಸುಳ್ಳು ನಿದ್ದೆ ಮಾಡ್ತಿದೀಯಾ... ಗಂ ಹತ್ತಾಯ್ತು ಏಳು'' ಅವಳು ಮಿಸುಕಾಡಲಿಲ್ಲ.

''ನನ್ನ ಮೇಲೆ ಕೋಪಾನಾ? ಸಾರಿ... ಸಾರಿ... ಈಗಲಾದ್ರೂ ಏಳು''

''ನಿಂಗೆ ಅತಿ ಜಂಭ... ಸಾರಿ ಕೇಳಿದ್ರೂ ಉತ್ತರ ಕೊಡುಲ್ವಾ? ಹೀಗೇ ಆಡ್ತಿರು ನಿನಗೆ ಮದುವೆ ಮಾಡಿ, ನಿನ್ನನ್ನ ಈ ಮನೆಯಿಂದಲೇ ಕಳಿಸಿಬಿಡ್ತೀನಿ'' ಮಾಲಾ ಸರ್ರನೆ ಎದ್ದು ಕುಳಿತು ಅವನನ್ನೇ ದುರುದುರು ನೋಡಿದಳು.

''ತಮಾಷೆ ಮಾಡ್ದೆ ಕಣೇ... ನಿಂಗೆ ಈಗಲೇ ಮದುವೆ ಬೇಡವಾದರೆ ಬೇಡ.. ಆದರೆ ನನ್ನ ಮನೇಲಿ ಇರೋವರೆಗಾದರೂ, ನಗ್ತಾ ನಗ್ತಾ ಇರು... ನನ್ನನ್ನ ದ್ವೇಷಿಸ ಬೇಡ...''

''ಏನು ಏನೇನೋ ಮಾತಾಡ್ತಾ ಇದೀಯ... ಈಗ ನನ್ನಿಂದ ಏನಾಗ ಬೇಕಾಗಿದೆಯೋ... ಉರಿಸಿಂಗನ ಹಾಗೆ ಆಡೋನು ನೀನು... ರಾತ್ರಿ ಆಡಿದ್ದೆಲ್ಲಾ ಮರೆತು ಬಿಟ್ಯಾ? ಬೈದೇ... ನಾನು ಈ ಮನೆಯಿಂದ ಎಲ್ಲಿಗೂ ಹೋಗೋಳಲ್ಲ... ಇದು ನನ್ನ ಮನೆ... ಮದುವೆ ಮಾಡಿಕೊಂಡರೂ ಇಲ್ಲೇ ಇರುವವಳು... ಆಗ ನೀನೇ ಈ ಮನೆ ಯಿಂದ ಹೊರಗೆ ಹೋಗೋನು...''

ಮಧು ಬೆಚ್ಚಿದ. ನಾನು ತಮಾಷೆಯಾಗಿ ಏನೇ ಹೇಳಿದರೂ, ಇವಳು ಸೀರಿಯಸ್ಸಾಗಿ ತಗೊಳ್ತಾಳಲ್ಲ... ಈಗಲೇ ಮತ್ತೆ ಜಗಳವಾಡಿ ಪರಿಸ್ಥಿತಿಯನ್ನು ಕೆಡಿಸಬಾರದು ಎಂದುಕೊಂಡು,

''ಸಾರಿ... ಸಾರಿ... ನಾನು ಮರೆತೇ ಬಿಟ್ಟಿದ್ದೆ. ಹೇಗೂ ಮೊದಲ್ನಿಂದಲೂ ಈ ಮನೆ ಯಿಂದ ಹೊರಗೇ ಇದ್ದವನು ನಾನು. ನನಗೆ ಯಾವತ್ತೂ ಈ ಮನೆಯಲ್ಲಿ ಜಾಗವಿರಲಿಲ್ಲ. ಆಲ್‌ರೈಟ್... ನಿನ್ನ ಆಸೆ ಹೇಗೋ ಹಾಗೇ ಆಗಲಿ. ಈಗ ನಾವು ಫ್ರೆಂಡ್ಸ್... ಓ..ಕೇ..''

''ಯಾಕಪ್ಪಾ ಇದ್ದಕ್ಕಿದ್ದ ಹಾಗೇ ಏನಾಯ್ತು ನಿನಗೆ? ರಾತ್ರಿ ನೋಡಿದರೆ ಅಕ್ಕಪಕ್ಕ ದವರಿಗೆಲ್ಲ ಕೇಳಿಸುವ ಹಾಗೆ ಕಿರುಚಾಡಿದೆ. ಈಗ...? ಮತ್ತು ಇಳೀತಾ?''

''ಎಂಥಾ ಮತ್ತು?''

''ನಂಗೇನೂ ಗೊತ್ತಿಲ್ಲ ಅಂತ ಅಂದ್ಕೊಬೇಡ.. ಪಾರ್ಟಿಲಿ ಡ್ರಿಂಕ್ಸ್ ತಗೊಂಡಿ ದೀಯ.. ಇಲ್ಲಿ ಬಂದು ಯಕ್ಷಗಾನ ಆಡಿದೀಯ...''

ಮಧು ಗೊಳ್ಳನೆ ನಕ್ಕ. ''ಪರವಾಗಿಲ್ವೇ ಎಷ್ಟು ಚೆನ್ನಾಗಿ ಮಾತನಾಡ್ತೀಯಲ್ಲೇ... ಕಾಲೇಜು ಡೇ ಫಂಕ್ಷನ್ ಹೇಗಿತ್ತು?''

''ನಿಂಗ್ಯಾಕೆ? ಮಜಾ ಎಲ್ಲಾ ಕೆಡಿಸಿದ್ದಾಯ್ತಲ್ಲ...''

''ಸಾರಿ ಸಾರಿ ಎಷ್ಟು ಸಾರಿ ಕೇಳಿದರೂ ಬೈಯುತ್ತಾನೆ ಇದೀಯಲ್ಲ... ನೆನ್ನೆ ರಾತ್ರಿ ನಾನು ಹಾಗೆ ಆಡಬಾರದಾಗಿತ್ತು. ಇದೇ ಫಸ್ಟ್ ಅಂಡ್ ಲಾಸ್ಟ್... ಐ ಸ್ವೇರ್...'' ಕತ್ತಿನ ಬಳಿಗೆ ಕೈಯನ್ನು ಒಯ್ದ.

''ಹಾಗಾದ್ರೆ ನೀನು ಭಟ್ಟರನ್ನೂ ಭಾರ್ಗವನನ್ನೂ ಸಾರಿ ಕೇಳಬೇಕು.''

''ಆಗಲೇ ಕೇಳಿದ್ದಾಯ್ತು. ಬೇಕಾದ್ರೆ ಭಟ್ಟರನ್ನೇ ಕೇಳು....''

''ಸರಿ ನಡೀ'' ಎನ್ನುತ್ತಾ ಅವಳು ಎದ್ದು ಬಂದಾಗ ಅವಳ ಜಡೆಯನ್ನು ಹಿಡಿದೆಳೆದ.

''ಈ ಕಾಲದಲ್ಲಿ ಇಷ್ಟುದ್ದ ಜಡೇನ ಯಾರು ಇಟ್ಕೋತಾರೆ... ನೀಟಾಗಿ ಬಾಬ್‌ಕಟ್ ಮಾಡಿಸ್ಕೋ...''

''ನಾನು ನನಗೆ ಹೇಗೆ ಇಷ್ಟವೋ ಹಾಗೇ ಇರ್ತೀನಿ... ನನ್ನ ಪರ್ಸನಲ್ ವಿಷಯಕ್ಕೆ ನೀನು ಬರಬೇಡ...'' ಎನ್ನುತ್ತಾ ಅವಳು ಮುಂದೆ ಮುಂದೆ ನಡೆದಳು. ಇವನು ಹಿಂಬಾಲಿಸಿದ.

''ನಿಜ ಹೇಳಿ ಭಟ್ಟರೇ, ಇವನು ನಿಮ್ಮಿಬ್ಬರನ್ನೂ ಸಾರಿ ಕೇಳಿದ್ನಾ?'' ಭಟ್ಟರು ನಕ್ಕರು.

''ಹೂಂ ಕಣಮ್ಮಾ... ಬೆಳಿಗ್ಗೆ ಎದ್ದು ಬರ್ತಿದ್ದ ಹಾಗೇ ಸಾರಿ ಕೇಳಿದ.''

''ಭಾರ್ಗವ ನಿನ್ನನ್ನ...''

''ನನ್ನನ್ನೂ ಕೇಳಿದ...'' ಭಾರ್ಗವ ಎತ್ತಲೋ ನೋಡುತ್ತಾ ಹೇಳಿದಾಗ ಮಧುಕರ ಕೆಟ್ಟ ಮುಖ ಮಾಡಿದ. ಖಿಲಾಡಿಗಳು... ಎಲ್ಲರೂ ನನ್ನನ್ನು ಕೆರಳಿಸ್ತಾರೆ.

''ಮಾಲಾ ನನ್ನ ಹೊಸ ಪಾರ್ಟನರ್ಸ್ ಮನೆಗೆ ಬರ್ತಾ ಇದಾರೆ. ಅವರ ಪರಿಚಯ ಮಾಡಿಸಿಕೊಡ್ತೀನಿ. ಅವರು ಇಲ್ಲೇ ಊಟ ಮಾಡಿ, ಇಲ್ಲಿಂದಲೇ ಏರ್‌ಪೋರ್ಟ್‌ಗೆ ಹೋಗ್ತಾರೆ... ನೀನು ಮನೇಲೇ ಇರಬೇಕು...''

''ನನ್ನ ಪರಿಚಯ ಏಕೆ?... ನನಗೆ ಇಷ್ಟವಿಲ್ಲ...''

''ನೀನು ನನ್ನ ತಂಗಿ... ಅವನು ನನ್ನ ಪಾರ್ಟನರ್... ಪರಿಚಯವಿರಲೇ ಬೇಕು...''

''ಅವಳಿಗೆ ಕಾಲೇಜಿಗೆ ರಜ. ಮನೇಲೇ ಇರ್ತಾಳೆ... ಏನಾದ್ರೂ ಸ್ಪೆಷಲ್ ಅಡಿಗೆ ಮಾಡಬೇಕಾ?'' ಭಟ್ಟರು ವಿಚಾರಿಸಿದರು.

''ಹೂಂ. ಭಟ್ಟರೇ ನಾನೇ ಹೇಳೋಣ ಅಂತಿದ್ದೆ. ಆದರೆ ಊಟ ಹೆವಿಯಾಗೋದು ಬೇಡ. ನಿಮಗೆ ತಿಳಿದದ್ದು ಮಾಡಿ. ಆದರೆ ಖಾರ ಕಡಿಮೆ ಇರಲಿ... ಏನಾದ್ರೂ ದುಡ್ಡು ಬೇಕಿತ್ತಾ ಭಟ್ಟರೇ.''

''ಏನೂ ಬೇಡ. ಎಲ್ಲಾ ಸಾಮಾನೂ ಇದೆ.''

''ಮಧು, ಇದಕ್ಕೆ ಮೊದಲು ಎಂದಾದ್ರೂ ಭಟ್ಟರಿಗೆ ಮನೆ ಖರ್ಚಿಗೆ ಅಂತ ದುಡ್ಡು ಕೊಟ್ಟಿದ್ಯಾ?'' ಇದ್ದಕ್ಕಿದ್ದಂತೆ ಮಾಲಾ ಪ್ರಶ್ನಿಸಿದಳು.

''ಇಲ್ಲ ಅವರು ಕೇಳಲಿಲ್ಲ, ನಾನೂ ಕೊಡಲಿಲ್ಲ.''

''ಇದುವರೆಗೂ ಎಲ್ಲಾ ಖರ್ಚನ್ನು ಯಾರು ಮಾಡ್ತಿದಾರೆ ಗೊತ್ತಾ?''

''ನಂಗೇನು ಗೊತ್ತು?'' ಸಿಡುಕಿದ.

''ಸಿಡುಕಬೇಡ. ಡ್ಯಾಡಿ ಹೋದ ಮೇಲೆ ಎಲ್ಲಾ ಖರ್ಚನ್ನೂ ಭಾರ್ಗವನೇ ಮಾಡ್ತಿದಾನೆ... ಅವನ ಸಂಪಾದನೆಯನ್ನೆಲ್ಲಾ ಮನೆ ಖರ್ಚಿಗೆ ಹಾಕ್ತಿದಾನೆ.''

''ಹೌದಾ ಭಾರ್ಗವ? ನನ್ನನ್ಯಾಕೆ ಕೇಳಲಿಲ್ಲ ನೀನು?''

''ಇರಲಿ ಬಿಡಪ್ಪಾ. ಅವನೂ ಈ ಮನೆಗೆ ಮಗನ ಹಾಗೇ... ಅವನೂ ಸಂಪಾದಿಸ್ತಾನೆ... ಯಾರು ಮಾಡಿದರೇನು?''

''ಅದೆಲ್ಲಾ ಸರಿಯಲ್ಲ ಭಟ್ಟರೇ... ನೀವ್ಯಾಕೆ ನನಗೆ ಮೊದಲೇ ಹೇಳಲಿಲ್ಲ... ನಾನು ಯಾರಿಗೂ ಕಾಣಿಸೋದೇ ಇಲ್ಲ ಅಲ್ವಾ?''

''ನಿಮ್ಮ ತಂದೆ ಬದುಕಿದ್ದಾಗಲೂ ಭಾರ್ಗವನೇ ಹಣಕಾಸಿನ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ. ಹಾಗೇ ಮುಂದುವರೀತು ಅಷ್ಟೇ...''

''ಸರಿ. ಇದುವರೆಗೆ ನಡೆದದ್ದನ್ನು ಬಿಡಿ. ಇನ್ನು ಮುಂದೆ ನನಗೆ ತಿಳಿಸದೇ ಯಾವ ಖರ್ಚನ್ನೂ ಮಾಡಬಾರದು. ಎಲ್ಲಾ ಅಕೌಂಟನ್ನು ನನಗೆ ಕೊಡಬೇಕು. ಹಾಗೇ ದುಡ್ಡನ್ನು ಕೇಳಿ ತಗೋಬೇಕು.''

ಭಟ್ಟರು ಆಗಲಿ ಎನ್ನುವಂತೆ ತಲೆಯಾಡಿಸಿದಾಗ ಮಾಲಾ ಉರಿದುಬಿದ್ದಳು. ''ನೀವು ಒಪ್ಪಬೇಡಿ ಭಟ್ಟರೇ. ಡ್ಯಾಡಿ ಇದ್ದಾಗ ಹೇಗೆ ನಡೆಯುತ್ತಿತ್ತೋ ಹಾಗೇ ನಡೆಯಲಿ...''

''ಬಿಡಮ್ಮ... ಹೇಗೆ ನಡೆದರೇನು? ಕೆಲಸವಾಗಬೇಕಾದದ್ದು ಮುಖ್ಯ... ನಿಮ್ಮ ತಂದೆ ಹಳೆಯ ಕಾಲದವರು... ಹಾಗೇ ನಡೆಯುವುದು ಕಷ್ಟ. ಈಗ ಮಧುಕರ ಹೇಳಿದಂತೆ ಕೇಳುವುದೇ ನಮ್ಮ ಧರ್ಮ...''

''ಹಾಗಲ್ಲ ಭಟ್ಟರೇ... ನಿಮಗೆ ನೋವುಂಟು ಮಾಡಬೇಕೂಂತ ನಾನು ಹೇಳಲಿಲ್ಲ. ನನಗೆ ಯಾರಾದ್ರೂ ಹೇಳಿದ್ರೆ ತಾನೇ ತಿಳಿಯೋದು... ನನಗೆ ತಿಳಿಸದೇ ನೀವು ನೀವೇ ಎಲ್ಲಾ ಮಾಡಿಕೊಳ್ತೀರಲ್ಲ'' ಮಧು ಸಮರ್ಥನೆ ಕೊಟ್ಟ.

''ಏನೋ ನೀನು ಚಿಕ್ಕೋನು... ಭಾರ್ಗವನಿಗಾದರೆ ಎಲ್ಲಾ ಅಭ್ಯಾಸವಿತ್ತು. ನಮಗೇನೂ ಬೇಸರವಿಲ್ಲ. ನಿನಗೆ ಹೇಗೆ ಬೇಕೋ ಹಾಗೇ ತಿದ್ದುಪಡಿ ಮಾಡು. ನಮ್ಮ ಅಭ್ಯಂತರವೇನಿಲ್ಲ.''

ಅಷ್ಟರಲ್ಲಿ ಫೋನಿನ ಗಂಟೆ ಬಡಿಯಿತು. ಮಧುಕರ ಹೊರಗೆ ಹೋದ. ಮಾಲಾ ಭಟ್ಟರ ಮೇಲೆ ರೇಗಿದಳು.

''ನಿಮಗ್ಯಾಕೆ ಏನೂ ತಿಳಿಯುಲ್ಲ. ಅವನು ಮೊದಲೇ ಯಜಮಾನಿಕೆ ಮಾಡ್ತಾನೆ. ನೀವು ಮೊದಲು ಹೀಗಿರಲಿಲ್ಲ.''

''ಈಗ ಯಜಮಾನರು ಬದಲಾಗಿದಾರಮ್ಮ... ನಿಮ್ಮ ತಂದೆಯ ನಡವಳಿಕೆಯೇ ಬೇರೆ. ಮಧುಕರನ ನಡೆವಳಿಕೆಯೇ ಬೇರೆ... ನಾವು ಎಷ್ಟಾದರೂ ಹೊರಗಿನವರು...''

''ನೀವು ಹೀಗೆಲ್ಲಾ ಮಾತನಾಡಬೇಡಿ ಭಟ್ಟರೇ... ನನಗೆ ಅಳು ಬರುತ್ತದೆ.''

''ನಿನಗಿರೋ ಅಂತಃಕರಣ ಅವನಿಗಿಲ್ಲ ಮಾಲಾ... ನಾವು ಅದನ್ನು ಅವನಲ್ಲಿ ತುಂಬಿಸುಕ್ಕೆ ಆಗುಲ್ಲ. ಆ ಕಾಲ ಹೋಯ್ತು. ಈಗ ಈ ಕಾಲಕ್ಕೆ ಅಡ್ಜಸ್ಟ್ ಆಗಬೇಕಾಗಿದೆ. ನೀನು ಯಾವುದನ್ನೂ ತಲೆಗೆ ಹಚ್ಚಿಕೋಬೇಡ.''

''ನಿಮ್ಮಿಬ್ಬರ ತರಹ ನನ್ನ ಕೈಲಿ ಅವನ ಆರ್ಭಟಗಳನ್ನು ಸಹಿಸುಕ್ಕೆ ಆಗುಲ್ಲ... ನಾನು ಅವನನ್ನು ವಿರೋಧಿಸ್ತೀನಿ. ಆದದ್ದಾಗಲಿ...'' ಮಾಲಾ ದಡದಡ ಸದ್ದು ಮಾಡುತ್ತಾ ಹೊರ

ಬಂದಳು. ಮಧುಕರ ಅಲ್ಲಿರಲಿಲ್ಲ. ಗೇಟಿನ ಬಳಿಗೆ ನಡೆದಿದ್ದ. ಅಲ್ಲಿ ಬಂದು ನಿಂತಿದ್ದ ಕಾರಿನಿಂದ ಯಾರೋ ಇಬ್ಬರು ಇಳಿಯುತ್ತಿದ್ದರು. ಮಾಲಾ ನೋಡಿದರೂ ನೋಡದವ ಳಂತೆ ಒಳಗೆ ಹೋದಳು. ಅವಳ ಹಿಂದೆ ನಿಂತಿದ್ದ ಭಾರ್ಗವ ಕಾರಿನಿಂದ ಇಳಿದವರನ್ನು ನೋಡಿ ಅಡಿಗೆ ಮನೆಗೆ ಸರ‍್ರನೆ ನುಗ್ಗಿದ.

''ಮಾವ, ಅವರುಗಳು ಬಂದ್ರೂಂತ ಕಾಣುತ್ತೆ. ಏನು ತರಕಾರಿ ಹೆಚ್ಚಿಕೊಡಲಿ?''

''ಅವರಿಗೇನಾದ್ರೂ ಕುಡಿಯೋಕೆ ಬೇಕಾ ಅಂತ ಕೇಳಬೇಕಲ್ಲ...''

''ಕುಡಿಯೋಕೆ ಅವನೇ ಕೊಡ್ತಾನೆ ಬಿಡಿ. ಬೇಗ ಬೇಗ ಅಡಿಗೆ ಮಾಡಿ ಮುಗಿಸೋಣ. ಊಟಕ್ಕೆ ಯಾವಾಗ ಎಬ್ಬಿಸ್ತಾನೋ...''

ಮಧುಕರ ಬಂದವರೊಡನೆ ಗಹನವಾದ ವಿಚಾರಗಳನ್ನು ಮಾತನಾಡುತ್ತಾ ಕೆಲ ಸಮಯ ಕಳೆದ. ನಂತರ ಒಳ ಬಂದವನು, ಭಟ್ಟರಿಗೆ ಹೇಳಿದ. ''ನನ್ನ ಸ್ನೇಹಿತರು ಇಬ್ಬರು ಬಂದಿದಾರೆ. ತಣ್ಣಗೆ ಫ್ರೂಟ್ ಜ್ಯೂಸ್ ಮಾಡಿ, ಮಾಲಾಳ ಕೈಯಲ್ಲಿ ಕೊಟ್ಟು ಕಳಿಸಿ.''

ಭಾರ್ಗವ ಕಿತ್ತಳೆ ಹಣ್ಣುಗಳನ್ನು ಬಿಡಿಸಿ, ಜ್ಯೂಸ್ ಮಾಡಿ, ಐಸ್‌ಕ್ಯೂಬ್‌ಗಳನ್ನು ಹಾಕಿ, ಗ್ಲಾಸುಗಳಲ್ಲಿ ಸಿದ್ಧಗೊಳಿಸಿದ. ''ಹೋಗು ಭಾರ್ಗವ, ಮಾಲಾ ಏನು ಮಾಡ್ತಿದಾಳೋ ನೋಡು... ಕರೆದು ಬಾ...''

''ನಿಮಗೆ ತಾನೇ ಅವನು ಹೇಳಿರೋದು. ನೀವೇ ಹೋಗಿ...''

''ಏನೋ ನೀನೂ ಅವನ ಹಾಗೇ ಮೂರ್ಖನ ತರಹ ಆಡ್ತೀಯಲ್ಲ. ಒಲೆ ಮೇಲೆ ಪಲ್ಯ ಸೀದು ಹೋಗುತ್ತದೆ. ನಾನು ಹೇಳಿದಷ್ಟನ್ನು ಕೇಳು.''

ಭಾರ್ಗವ ವಿಧಿ ಇಲ್ಲದೇ ಮಾಲಾಳ ರೂಮಿಗೆ ಬಂದ. ಅವಳು ದಿಂಬಿನ ಮೇಲೆ ಕೈಗಳನ್ನು ಊರಿ ಯಾವುದೋ ಪುಸ್ತಕವನ್ನು ಓದುತ್ತಾ ಬೆನ್ನು ಮೇಲೆ ಮಾಡಿ ಮಲಗಿದ್ದಳು. ಕಾಲುಗಳನ್ನು ಕುಣಿಸುತ್ತಿದ್ದಳು. ಭಾರ್ಗವ ಒಂದು ಗಳಿಗೆ ಹಾಗೇ ನಿಂತ. ಮುಂದಿದ್ದ ಕನ್ನಡಿ ಯಲ್ಲಿ ಭಾರ್ಗವ ಬಂದು ನಿಂತಿದುದನ್ನು ಮಾಲಾ ಗಮನಿಸಿದ್ದಳು. ಆದರೂ ಏನೂ ಅರಿಯದವಳಂತೆ ಕಾಲುಗಳನ್ನು ಕುಣಿಸುತ್ತಾ ಮಲಗಿದ್ದಳು.

''ಮಾಲಾ...'' ಬಾಗಿಲಲ್ಲೇ ನಿಂತು ಕರೆದ.

''ಯಾರು? ಓ ನೀನಾ? ಬಾ... ಒಳಗೆ ಬಾ... ಏನು ಬೇಕಾಗಿತ್ತು...''

''ಮಧು ಕರೀತಿದಾನೆ. ಅವನ ಪಾರ್ಟನರ್ಸ್ ಬಂದಿದಾರೆ... ನೀನೇ ಜ್ಯೂಸ್ ತಗೊಂಡು ಹೋಗಿ ಕೊಡಬೇಕಂತೆ.''

''ನಾನಾ... ಇಂಪಾಸಿಬಲ್... ಅವರೇನು ವಧುಪರೀಕ್ಷೆಗೆ ಬಂದಿದಾರಾ ! ಬೇಕಾದರೆ ಮಧೂನೇ ಕೊಡಲಿ...''

''ಪ್ಲೀಸ್ ಇವತ್ತೊಂದು ದಿನ ಮಧು ಹೇಳಿದ ಹಾಗೆ ಕೇಳಿಬಿಡು. ಸುಮ್ಮನೇ ರಂಪ ಯಾಕೆ?''

''ನೀನೂ ಹೀಗೇ ಹೇಳ್ತೀಯಾ ಭಾರ್ಗವ. ಯಾವನೋ ಪರ ಗಂಡಸು ಅವನಿಗೆ ನಾನ್ಯಾಕೆ ಜ್ಯೂಸ್ ಕೊಡಬೇಕು...?''

''ಜ್ಯೂಸ್ ನಾನು ಕೊಡ್ತೀನಿ. ನೀನು ಬಂದು ಪರಿಚಯ ಮಾಡಿಕೊಂಡು ಅವರ ಜತೆ ಕುಳಿತು ಮಾತನಾಡು. ನೆನ್ನೆ ನೀನು ಮೀಟಿಂಗ್‌ಗೂ ಬಂದಿರಲಿಲ್ಲ.''

''ಓ... ಅವನೇನಾ ಈ ಮಹಾಶಯ? ಆಗಲಿ ಅವನು ಹೇಗಿದಾನೆ ಅಂತ ನೋಡಿಯೇ ಬಿಡ್ತೀನಿ...'' ಹಾಗೇ ಎದ್ದು ಹೊರಟವಳನ್ನು ಭಾರ್ಗವ ತಡೆದ.

''ಅವರು ಬಾಂಬೆಯವರು... ಅವರೆದುರಿಗೆ ಹೀಗೇ ಹೋಗ್ತೀಯಾ?''

''ನಾನು ಹೇಗಿದೀನೋ ಹಾಗೇ ಪರಿಚಯ ಮಾಡಿಕೊಳ್ತೀನಿ...''

''ಬೇಡ ಮಾಲಾ... ಪ್ಲೀಸ್... ನೆನ್ನೆ ಡ್ರೆಸ್ ಮಾಡಿಕೊಂಡಿದ್ದೆಯಲ್ಲ ಹಾಗೇ ಡ್ರೆಸ್ ಮಾಡ್ಕೋ... ನಿನಗೆ ಚೆನ್ನಾಗಿ ಒಪ್ಪುತ್ತೆ...''

''ನಿನಗಿಷ್ಟ ಅಂತ ಮಾಡಿಕೊಳ್ತೀನಿ. ಆದರೆ ಅವರುಗಳಿಗೋಸ್ಕರ ಮಾಡ್ಕೋ ಅಂತ ಹೇಳಬೇಡ.''

''ನೀನು ಹೇಗೇ ಇದ್ದರೂ ನನಗೆ ಚೆನ್ನವೇ. ಆದರೆ ನನ್ನ ಮಾಲಾ ಇನ್ನೊಬ್ಬರೂ ಮೆಚ್ಚುಗೆಯಿಂದ ನೋಡುವಂತಿರಬೇಕು. ಹೌದೋ ಅಲ್ವೋ...?''

''ಹೌದು... ಹೌದು...'' ಎಂದು ತಲೆಯಾಡಿಸಿ, ''ನೀನು ಹೋಗು... ನಾನು ಬೇಗ ಡ್ರೆಸ್ ಮಾಡಿಕೊಂಡು ಬರ್ತೀನಿ'' ಎಂದು ಅವನನ್ನು ಕಳಿಸಿ, ಕನ್ನಡಿಯ ಮುಂದೆ ನಿಂತಳು. ಈಗ ತಾನು ಇರುವ ರೀತಿಯೇ ಸರಿಯಾಗಿದೆ ಅಂತೆನ್ನಿಸಿತ್ತು. ತಲೆಗೂದಲ ಮೇಲೆ ಹಾಗೇ ಬಾಚಣಿಗೆಯನ್ನಾಡಿಸಿದಳು. ಎರಡೂ ಕೈಗಳನ್ನು ಉಜ್ಜಿ, ಮುಖವನ್ನು ಒಂದೆರಡುಬಾರಿ ಉಜ್ಜಿ ಸವರಿಕೊಂಡಳು. ಹಲ್ಲು ಕಿರಿದು ತನ್ನನ್ನು ತಾನೇ ನೋಡಿಕೊಂಡಳು. ಅಲ್ಲಿಯೇ ಕ್ಲಾತ್‌ಸ್ಟ್ಯಾಂಡ್ ಮೇಲಿದ್ದ ಚೂಡಿದಾರ್ ಸೆಟ್‌ನ್ನು ಧರಿಸಿ, ಮೇಲೆ ಒಂದು ದುಪ್ಪಟ್ಟಾವನ್ನು ಹೊದ್ದು ಆಚೆಗೆ ಬಂದಳು.

ಅವಳು ಬಂದ ರೀತಿಯನ್ನು ನೋಡಿ ಮಧುಕರ ತಬ್ಬಿಬ್ಬಾದ. ನಖಶಿಖಾಂತ ಮೈ ಉರಿಯಿತು. ಸದ್ದು ಮಾಡದಂತೆ ಹಲ್ಲು ಕಡಿದ. ವಿಧಿಯಿಲ್ಲದೆ ತಂಗಿಯನ್ನು ಅವರಿಬ್ಬರಿಗೆ ಪರಿಚಯಿಸಿದ.

''ಇವಳು ನನ್ನ ತಂಗಿ ವನಮಾಲಾ...'' ಇಬ್ಬರೂ ಎದ್ದು ನಿಂತು ''ಹಲೋ ಮಿಸ್... ಹೌ ಡು ಯು ಡು...'' ಎಂದಾಗ ಇವಳೂ ಮುಗುಳ್ನಕ್ಕು ಹಲೋ ಎಂದಿದ್ದಳು.

''ಇವನು ಧ್ರುವ ನನ್ನ ಪಾರ್ಟನರ್, ಇವರು ಪ್ರತಾಪ್ ಧ್ರುವನ ಲೀಗಲ್ ಅಡ್ವೈಸರ್...'' ಮಾಲಾ ಇಬ್ಬರಿಗೂ ಕೈ ಮುಗಿದಳು.

''ಕೂತ್ಕೋ...'' ಅವನು ಅಧಿಕಾರವಾಣಿಯಿಂದ ಹೇಳಿದಾಗ, ಅವಳು ಕಾರಣವಿಲ್ಲದೇ ನಕ್ಕಳು. ''ನಾನು ಕುಡಿಯೋಕೆ ಏನಾದ್ರೂ ತರ್ತೀನಿ'' ಎಂದು ಹೇಳಿ ಅಡಿಗೆ

ಮನೆಯ ಕಡೆಗೆ ತಿರುಗಿದಳು. ಅವಳ ಉದ್ದನೆಯ ಜಡೆ ರೊಯ್ಯನೆ ಬೀಸಿತು. ದುಪಟ್ಟಾ ಹಾರಿತು. ಅತ್ತಿಂದಿತ್ತ ತೂಗಾಡುವ ಜಡೆಯನ್ನೇ ಅವರಿಬ್ಬರೂ ನೋಡಿದಾಗ, ಮಧುಕರ ಮುಜುಗರಗೊಂಡ.

ಕೆಲವೇ ನಿಮಿಷಗಳಲ್ಲಿ ಭಟ್ಟರು ಜ್ಯೂಸ್ ಗ್ಲಾಸುಗಳನ್ನು, ಬಿಸ್ಕತ್ತುಗಳನ್ನು ಇಟ್ಟುಕೊಂಡ ಟ್ರೇ ಹಿಡಿದು ಹೊರಬಂದರು. ಅಲ್ಲಿದ್ದ ಟೀಪಾಯಿಯ ಮೇಲೆ ಇಟ್ಟು, ಒಂದು ಗಳಿಗೆ ನಿಂತ ಹಾಗೆ ಮಾಡಿ, ಅಡಿಗೆ ಮನೆಗೆ ಬಂದುಬಿಟ್ಟರು. ಮಾಲಾ ಚಪ್ಪಾಳೆ ತಟ್ಟಿ ಕಿಲಕಿಲನೆ ನಕ್ಕಿದ್ದು ಮಧುಗೆ ಕೇಳಿಸಿತು. ''ಇರಲಿ, ನಿನ್ನನ್ನು ನೋಡಿಕೊಳ್ತೀನಿ'' ಎಂದು ಮನದಲ್ಲೇ ಬೈದುಕೊಂಡ. ಮತ್ತೆ ಅವಳು ಹೊರಗೆ ಬಂದಿರಲಿಲ್ಲ.

ಎಷ್ಟೋ ಸಮಯದ ನಂತರ, ಮಧು ಅಡಿಗೆ ಮನೆಯೊಳಗೆ ಇಣುಕಿದ. ಭಾರ್ಗವ ತಟ್ಟೆಗಳನ್ನು ಒರೆಸುತ್ತಿದ್ದ. ಮಾಲಾ ಕಾಣಲಿಲ್ಲ.

''ಭಟ್ಟರೇ ಊಟಕ್ಕೆ ರೆಡಿ ಮಾಡಿ... ಮಾಲಾ ಎಲ್ಲಿ?'' ಎನ್ನುತ್ತಾ ಅವಳ ರೂಮಿನ ಬಳಿಗೆ ಬಂದ. ಒಳಗಿನಿಂದ ಬಾಗಿಲು ಹಾಕಿತ್ತು. ಮೆಲ್ಲಗೆ ಬೆರಳಿನಿಂದ ಬಾಗಿಲನ್ನು ಬಡಿದ. ಬಾಗಿಲು ತೆಗೆದಳು. ಅವಳನ್ನೇ ಕೆಕ್ಕರಿಸಿ ನೋಡಿದ. ಅವಳು ಗೆಲುವಿನಿಂದ ನಕ್ಕಳು.

''ಊಟಕ್ಕೆ ಬಾ... ಅವರುಗಳು ಕಾಯ್ತಾ ಇದಾರೆ.''

''ನನ್ನ ಊಟ ಆಯ್ತು... ನನಗೆ ದಿನಾ ಬೇಗ ಊಟ ಮಾಡಿ ಅಭ್ಯಾಸ... ಹೊಟ್ಟೆ ಹಸೀತಿತ್ತು.''

''ನಾನು ಎಕ್ಸ್‌ಪ್ಲನೇಷನ್ ಕೇಳಲಿಲ್ಲ, ಕಂಪೆನಿ ಕೊಡು ಬಾ...''

''ನಂದು ಆಯ್ತು ಅಂದೆನಲ್ಲ. ಬಲವಂತ ಮಾಡಬೇಡ.''

''ನೀನು ಬೇಕೂಂತ ನನಗೆ ಅವಮಾನ ಮಾಡ್ತಾ ಇದೀಯ... ನಿನಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ.''

''ಬಾ... ಈಗಲೇ ಕಲಿಸು ಬಾ... ನಾವು ಅಣ್ಣತಂಗಿ ಎಷ್ಟು ಪ್ರೀತಿಯಿಂದ ಇದೀವಿ ಅಂತ ನಿನ್ನ ಗೆಸ್ಟ್‌ಗೂ ತಿಳೀಲಿ...'' ಎರಡು ಹೆಜ್ಜೆ ಮುಂದಿಟ್ಟವಳನ್ನು ಹಿಂದಕ್ಕೆ ನೂಕಿದ.

''ಯೂ ಆರ್ ಇಂಪಾಸಿಬಲ್'' ಎಂದು ನುಡಿದು, ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು ಅಲ್ಲಿಂದ ಕದಲಿದ. ಒಳಗಿನಿಂದ ಅವಳು ಜೋರಾಗಿ ನಕ್ಕಿದ್ದು ಕೇಳಿಸಿತು.

ಮೂರು ಜನರೂ ಊಟಕ್ಕೆ ಕುಳಿತರು. ಭಟ್ಟರೇ ಬಡಿಸಲು ನಿಂತರು. ಅವರಿಬ್ಬರಿಗೂ ಭಾರ್ಗವ ಪರಿಚಯವಿದ್ದರೂ ಅವರುಗಳು ಹೆಚ್ಚಿಗೆ ಮಾತನಾಡಿಸಲಿಲ್ಲ. ಭಟ್ಟರಿಗೆ ಪಿಚ್ಚೆನಿಸಿತ್ತು. ಅವರೊಂದಿಗೆ ಏನು ಹೇಳಿದ್ದಾನೋ ಈ ಭೂಪತಿ ಎಂದುಕೊಂಡು ಭಾರ್ಗವ ಸುಮ್ಮನಾಗಿದ್ದ.

''ನಿಮ್ಮ ತಂಗಿ ಬರುಲ್ವಾ?'' ಪ್ರತಾಪ ಕೇಳಿದಾಗ ಮಧುಕರ ಪೆಚ್ಚುನಗೆ ನಕ್ಕ.

''ಅವಳಿಗೆ ಸ್ವಲ್ಪ ಹುಶಾರಿಲ್ಲ. ನೆನ್ನೆ ಕಾಲೇಜು ಡೇ ಫಂಕ್ಷನ್ ಇತ್ತಂತೆ. ಸ್ವಲ್ಪ ಟೈರ್ಡ್. ರೆಸ್ಟು ತಗೋತಿದಾಳೆ.''

''ಅಡಿಗೆ ತುಂಬಾ ರುಚಿಯಾಗಿದೆ...'' ಭಟ್ಟರು ಉಪಚಾರ ಹೇಳುತ್ತಾ ಬಡಿಸಿದಾಗ ಅತಿಥಿಗಳು ಹೊಗಳಿದರು. ಹೊಟ್ಟೆ ತುಂಬಾ ಉಂಡು ಮೆಲ್ಲನೆ ತೇಗುತ್ತಾ ಎದ್ದರು. ತಟ್ಟೆಯಲ್ಲೇ ಕೈ ತೊಳೆದು ಎದ್ದವರನ್ನು ಕಂಡು ಭಟ್ಟರು ಅಸಹ್ಯಿಸಿಕೊಂಡರು. ''ಇಲ್ಲೇ ವಾಷ್ ಬೇಸಿನ್ ಇದೆ... ಅಲ್ಲಿ ಹೋಗಿ ಕೈ ತೊಳೆಯುವುದು ಬಿಟ್ಟು ಇದೆಂತಹ ಸಭ್ಯತನವೋ... ಇದೇನು ಹೋಟೆಲ್ಲು ಕೆಟ್ಟು ಹೋಯಿತೆ?'' ಅವರ ಗೊಣಗಾಟ ಕೇಳಿ ಭಾರ್ಗವ ತಟ್ಟೆಗಳನ್ನು ತೆಗೆಯಲು ಮುಂದಾದ.

''ಬೇಡ ಭಾರ್ಗವ, ನೀನು ಎಂಜಲು ತಟ್ಟೆಗಳನ್ನು ತೆಗೆಯಬೇಡ. ಕೆಲಸದವಳು ಬಂದು ತೆಗೆಯುತ್ತಾಳೆ... ಬಿಡು. ಇವತ್ಯಾಕೋ ತುಂಬಾ ಬೇಸರವಾಗ್ತಿದೆ ನೋಡು. ಮಧು ನಮ್ಮನ್ನು ಪರಕೀಯರನ್ನಾಗಿ ಮಾಡಿಬಿಟ್ಟ.'' ಅವರ ಕಣ್ಣುಗಳು ತೇವಗೊಂಡವು.

''ನಾವು ನಮ್ಮೂರಿಗೆ ವಾಪಸ್ಸು ಹೊರಟುಹೋಗೋಣ ಮಾವ. ನಿನಗೂ ವಯಸ್ಸಾಯ್ತು... ಇನ್ನು ಈ ಊಳಿಗ ಸಾಕು...''

''ನಾನೂ ಅದನ್ನೇ ಯೋಚಿಸ್ತಿದೀನಿ. ಆದರೆ ರಾಯರ ಉಪ್ಪನ್ನುಂಡ ಮೇಲೆ ಇಲ್ಲಿಯ ಕರ್ತವ್ಯಗಳು ಮುಗಿಯಬೇಡವೇ? ಮಾಲಂಗೆ ಒಂದು ಮದುವೆ ಮಾಡಿ ಗಂಡನ ಮನೆಗೆ ಕಳಿಸಿಬಿಟ್ಟರೆ ಸಾಕು... ಆಮೇಲೆ ಅವನ ಪಾಡು ಅವನಿಗೆ ಸೇರಿದ್ದು.''

''ಮಾಲಾ ಇನ್ನೂ ಚಿಕ್ಕೋಳು ಅಲ್ವಾ ಮಾವ...''

''ವಯಸ್ಸೇನೋ ಚಿಕ್ಕದೇ... ಹಾಗೇ ಮನಸ್ಸು ಮಗು ತರಹಾನೇ... ಆದರೆ ಮಧುಗೆ ತಂಗಿ ಅನ್ನೋ ಅಭಿಮಾನಾನೇ ಇಲ್ಲ. ವಿಚಿತ್ರವಾಗಿ ಆಡ್ತಾನೆ. ನನಗೆ ಆ ಮಗೂದೇ ಚಿಂತೆ...''

''ನಾನಿರುವಾಗ ನಿಮಗೇಕೆ ಚಿಂತೆ?'' ಎಂದು ಹೇಳಬೇಕೆಂದುಕೊಂಡರೂ ಹೇಳಲಾಗದೆ ಸುಮ್ಮನಾದ. ನಮ್ಮಿಬ್ಬರ ಮದುವೆಗೆ ಈ ಮಾವನೂ ಒಪ್ಪದಿದ್ದರೇ... ಎಂಬ ಆತಂಕ ಕಾಡಿತು.

ಸ್ವಲ್ಪ ಹೊತ್ತಿನ ನಂತರ ಅವರುಗಳು ಹೊರಟರು. ಮಧು ಅವರೊಡನೆ ಏರ್‌ಪೋರ್ಟ್‌ಗೆ ಹೊರಟ. ಹೊರಡುವ ಮುಂಚೆ ಮಾಲಾ ಬಂದು ಮಾತನಾಡಿಸಲಿ ಎಂಬ ಆಸೆ ಇದ್ದರೂ, ಸುಮ್ಮನಿದ್ದ.

''ನಿಮ್ಮ ತಂಗಿಗೆ ಹೇಳಿಬಿಡಿ... ಲೆಟ್ ಹರ್ ಟೇಕ್ ರೆಸ್ಟ್... ನೆಕ್ಸ್ಟ್ ಟೈಂ ಬಂದಾಗ ಮತ್ತೆ ಮೀಟ್ ಮಾಡೋಣ ಎಂದು ಹೇಳಿ'' ಅಲ್ಲಿಯೇ ಕಂಡ ಭಟ್ಟರಿಗೆ ಮತ್ತೊಮ್ಮೆ ಥ್ಯಾಂಕ್ಸ್ ಹೇಳಿ ಇಬ್ಬರೂ ಹೊರ ನಡೆದಿದ್ದರು. ಅತ್ತ ಕಾರು ಚಲಿಸಿದ ಸದ್ದು ಮರೆಯಾದ ಕೂಡಲೇ ಮಾಲಾ ರೂಮಿನಿಂದ ಹೊರಕ್ಕೆ ಜಿಗಿದಿದ್ದಳು. ಭಾರ್ಗವ ಅವಳ ಜಡೆ ಎಳೆದು ಚುಡಾಯಿಸಿದ.

''ನಿಂಗೂ ಚೆನ್ನಾಗಿ ನಾಟಕ ಆಡೋಕೆ ಬರುತ್ತೆ...''

"ಹೂಂ ಮತ್ತೆ. ಇಲ್ಲದಿದ್ರೆ ಬದುಕಾದ್ರೂ ಹೇಗೆ?" ಮಾಲಾ ಭಾರ್ಗವನೊಡನೆ ನಗುನಗುತ್ತಾ ಮಾತನಾಡುತ್ತಿರುವುದನ್ನು ಕಂಡು ಭಟ್ಟರಲ್ಲಿ ಒಂದು ಹೊಸ ಆಸೆ ಹೊಮ್ಮಿತು. ಆದರೂ ಅದನ್ನು ಹೊರಗೆಡವದೇ ತಮ್ಮಲ್ಲೇ ಅದುಮಿಟ್ಟುಕೊಂಡರು.

* * * *

ಭಾರ್ಗವ ತಾನಾಗಿಯೇ ಮಧುಕರನೊಂದಿಗೆ ಮಾತುಕತೆಯಾಡುವುದನ್ನು ಬಿಟ್ಟು ಬಿಟ್ಟಿದ್ದ. ಅವನು ಕೇಳಿದಷ್ಟಕ್ಕೇ ಉತ್ತರ. ಆಫೀಸಿನಲ್ಲೂ ಅಷ್ಟೇ. ಭಾರ್ಗವನ ಮನದಲ್ಲಿ ಏನು ನಡೆಯುತ್ತಿರಬಹುದು ಎಂಬುದನ್ನು ಮಧುಕರ ಊಹಿಸಲಾರ. ಅವನಾಗಿಯೇ ತನ್ನ ಭಾಗದ ಆಸ್ತಿಯನ್ನು ಮಧುಕರನಿಗೆ ಕೊಟ್ಟಿದ್ದೂ ಏನೋ ಒಂದು ರೀತಿಯ ಅನುಮಾನಕ್ಕೆ ಎಡೆ ಮಾಡಿಕೊಟ್ಟಿತ್ತು. ಇವನ ಮನಸ್ಸಿನಲ್ಲಿ ಏನಿರಬಹುದು! ನನ್ನ ಹಿಂದೆ ಏನಾದರೂ ಪಿತೂರಿ ನಡೆಸುತ್ತಿರಬಹುದೇ... ಅಥವಾ ನಿಜಕ್ಕೂ ಅಷ್ಟು ಪ್ರಾಮಾಣಿಕನೇ, ಒಂದೂ ಅರ್ಥವಾಗುತ್ತಿರಲಿಲ್ಲ.

ಮನೆಯಲ್ಲೂ ಅಷ್ಟೇ. ಒಬ್ಬರಿಗೊಬ್ಬರು ಮಾತನಾಡುವುದೇ ಇರಲಿಲ್ಲ. ಒಮ್ಮೊಮ್ಮೆ ಮಾಲಾ ಮಧು ಒಟ್ಟಿಗೇ ಊಟಕ್ಕೆ ಕುಳಿತರೂ, ಅಣ್ಣತಂಗಿಯರಲ್ಲಿ ಸರಸವಾದ ಅಥವಾ ವಿರಸವಾದ ಮಾತುಗಳೇ ಬರುತ್ತಿರಲಿಲ್ಲ. ಆದರೆ ಮಾಲಾ ಭಾರ್ಗವನೊಡನೆ ನಗು ನಗುತ್ತಾ ಮಾತನಾಡುವುದನ್ನು ಮಧು ಆಗ ಈಗ ಗಮನಿಸಿದ್ದ. ಅದು ಅವನಿಗೆ ಸಹಿಸುತ್ತಿರಲಿಲ್ಲ. ಇದಕ್ಕೆ ಏನಾದರೂ ಒಂದು ಕೊನೆ ತರಲೇ ಬೇಕೆಂದುಕೊಳ್ಳುತ್ತಿದ್ದ. ಭಾರ್ಗವನನ್ನು ಹೇಗಾದರೂ ಈ ಮನೆಯಿಂದ ದೂರ ಮಾಡಿಬಿಡಬೇಕೆಂದು ಕೊಂಡಿದ್ದರೂ ಅದಕ್ಕೆ ಇನ್ನೂ ಕಾಲ ಬಂದಿರಲಿಲ್ಲ. ಅವನಾಗಿಯೇ ಆಸ್ತಿಯನ್ನು ಹಿಂತಿರುಗಿಸಿದ್ದರೂ, ಸ್ವಲ್ಪಕಾಲ ಕಾದು ನೋಡಬೇಕೆಂದು ಲಾಯರ್ರು ಸಲಹೆಯನ್ನಿತ್ತಿದ್ದರು. ಕಂಪೆನಿಯ ವ್ಯವಹಾರಗಳನ್ನೆಲ್ಲಾ ತಿಳಿದವನು, ನಿಮ್ಮ ತಂದೆಗೆ ಆಪ್ತನಾಗಿ ಬೆಳೆದವನು, ಹಾಗೆ ಏಕಾಏಕೀ ಅವನನ್ನು ಹೊರ ಹಾಕಲು ಆಗುವುದಿಲ್ಲ. ಯಾವುದಾದರೂ ಬಲವಾದ ಕಾರಣ ಬೇಕೆಂದು ಹೇಳಿದ್ದರು. ಇದುವರೆಗೂ, ಭಾರ್ಗವನ ವರ್ತನೆಯಲ್ಲಿ ಯಾವುದೇ ತಪ್ಪನ್ನು ಕಂಡು ಹಿಡಿಯಲಾಗಿರಲಿಲ್ಲ. ದಿನದಿನವೂ ಅದೇ ಆತಂಕದಲ್ಲಿ ಬೆಂದು ಹೋಗಿದ್ದ. ಅದರ ಮೇಲೆ, ಇವರಿಬ್ಬರ ಸಲುಗೆ ಅವನ ಉರಿಯನ್ನು ಹೆಚ್ಚಿಸುತ್ತಿತ್ತು.

ಈ ಸಮಯದಲ್ಲಿ ಅವನ ಬೇಗುದಿಯನ್ನು ಶಮನ ಮಾಡುವ ಅವಕಾಶ ತಾನಾಗಿಯೇ ಒದಗಿತು. ಧ್ರುವನ ತಾಯಿ ಸುಮಿತ್ರಾ, ಮಾಲಾಳನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳುವ ಆಸೆಯನ್ನು ವ್ಯಕ್ತಪಡಿಸಿದಳು. ಈ ವಿಷಯ ಅನಿರೀಕ್ಷಿತ. ನಂಬಲು ಕೆಲವು ಕ್ಷಣಗಳೇ ಬೇಕಾಯಿತು.

"ಪ್ರತಾಪ ಹೇಳಿದ, ನಿನ್ನ ತಂಗಿ ಧ್ರುವನಿಗೆ ತಕ್ಕವಳು ಅಂತ. ನಿನ್ನ ಅಭಿಪ್ರಾಯ ವೇನು?" ಆಕೆ ನೇರವಾಗಿ ಕೇಳಿದ್ದಳು.

''ಈ ಬಗ್ಗೆ ನಾನು ಏನು ಹೇಳಲಿ? ಧ್ರುವನಿಗೆ ಒಪ್ಪಿಗೆಯಾಗಿದ್ದರೆ ನನಗೂ ಖುಷಿಯೇ... ಈಗ ನಾವಿಬ್ಬರೂ ಪಾರ್ಟನರ್ಸ್ ಆಗಿದ್ದೆವು. ಇನ್ನು ಮುಂದೆ ಸಂಬಂಧಿಗಳಾಗುತ್ತೇವೆ'' ಸಂತಸವನ್ನು ವ್ಯಕ್ತಪಡಿಸಿದ.

''ನಿನ್ನ ತಂಗಿಯನ್ನು ಒಂದ್ಮಾತು ಕೇಳಪ್ಪಾ. ಅವಳ ಮನಸ್ನಲ್ಲಿ ಏನಿದೆಯೋ...''

''ಆಗಲಿ'' ಎಂದಷ್ಟೇ ಹೇಳಿ ಊರಿಗೆ ವಾಪಸ್ಸಾಗಿದ್ದ. ಆದರೆ ಯಾಕೋ ಏನೋ ಅವಳೊಡನೆ ಪ್ರಸ್ತಾಪ ಮಾಡಲು ಹಿಂಜರಿದಿದ್ದ. ತನ್ನ ಮಾತುಗಳನ್ನು ಯಾವಾಗಲೂ ವಿರೋಧಿಸುತ್ತಾಳೆ. ನನಗೆ ಅವಮಾನ ಮಾಡುವುದಕ್ಕೆ ಕಾಯುತ್ತಿರುತ್ತಾಳೆ. 'ಇಲ್ಲ' ಎಂದುಬಿಟ್ಟರೆ...? ಅದೇ ಆತಂಕ.

ಇದ್ದಕ್ಕಿದ್ದಂತೆ ಒಂದು ಉಪಾಯ ಹೊಳೆಯಿತು. ಈಗ ಭಟ್ಟರೇ ತನಗೆ ಸಹಾಯ ಮಾಡಬೇಕು. ಹೇಗೂ ಈ ಮನೆಗೆ ಹಿರಿಯವರು, ಮಾಲಾ ಇಲ್ಲ ಎನ್ನಲಾರಳು ಎಂದುಕೊಂಡು, ಅಡಿಗೆಮನೆಗೆ ಬಂದ. ಮಾಲಾ ಇನ್ನೂ ಎದ್ದಿರಲಿಲ್ಲ. ಭಾರ್ಗವ ಮಾರ್ಕೆಟ್ಟಿಗೆ ಹೋಗಿದ್ದ. ಇದೇ ಸುಸಮಯವೆಂದುಕೊಂಡು ಮಾತಿಗೆ ಪ್ರಾರಂಭಿಸಿದ...

''ಭಟ್ಟರೇ, ಈಗ ನೀವೇ ಈ ಮನೆಗೆ ಹಿರಿಯವರು... ಮಾಲಾ ನೀವು ಸಾಕಿ ಬೆಳೆಸಿರುವ ಹುಡುಗಿ, ನಿಮ್ಮ ಮಾತಿಗೆ ಇಲ್ಲ ಎನ್ನುವುದಿಲ್ಲ. ನೀವು ಅವಳನ್ನು ಒಪ್ಪಿಸಬೇಕು...''

''ಯಾವ ವಿಷಯ ಹೇಳ್ತಿದೀಯಪ್ಪಾ...''

''ನನ್ನ ಸ್ನೇಹಿತ ಧ್ರುವ ಮಾಲಾಳನ್ನು ಇಷ್ಟಪಟ್ಟಿದ್ದಾನೆ. ಅವನ ತಾಯಿಗೂ ಇಷ್ಟವಾಗಿದಾಳೆ. ಅವರಿಬ್ಬರ ಮದುವೆಯ ವಿಷಯ... ಅವಳನ್ನು ನೀವು ಒಪ್ಪಿಸಬೇಕು...'' ಭಟ್ಟರು ತಬ್ಬಿಬ್ಬಾದರು. ಆದರೂ ಸಾವರಿಸಿಕೊಂಡು ನುಡಿದರು.

''ಅದು ಇನ್ನೂ ಚಿಕ್ಕದು... ಮದುವೆಗೆ ಏನು ಅವಾಂತರವಪ್ಪಾ?''

''ನನಗೇನೂ ಅವಾಂತರವಿಲ್ಲ. ಆದರೆ ಅವರಾಗಿಯೇ ಕೇಳಿಕೊಂಡು ಬಂದಿರುವಾಗ, ನಿರಾಕರಿಸುವುದು ಹೇಗೆ? ಅಲ್ಲದೇ ಧ್ರುವ ನನ್ನ ಬಿಸಿನೆಸ್ ಪಾರ್ಟನರ್... ತುಂಬಾ ಅನುಕೂಲವಾಗಿದಾರೆ. ಒಂದು ಕಾಲದ ರಾಜ ಮನೆತನದಿಂದ ಬಂದವರು. ನಾವು ಈಗ ಸುಮ್ಮನಾಗಿಬಿಟ್ಟರೇ, ಮುಂದೆ ಇಂತಹ ಸಂಬಂಧ ಸಿಗಬಹುದು ಅಂತ ಏನು ಗ್ಯಾರಂಟಿ?''

''ನಮ್ಮ ಮಾಲು ದಿವಿನಾಗಿದಾಳೆ... ಅವಳಿಗೆ ಇದಕ್ಕಿಂತ ಒಳ್ಳೆಯ ಸಂಬಂಧ ಸಿಗಬಹುದು. ಯಾವುದೇ ಕಾರಣಕ್ಕೂ ದುಡುಕುವುದು ಬೇಡ.''

''ನಾನೂ ಅವಳ ಶುಭಚಿಂತಕನೇ... ಹಾಗೆ ನೋಡ್ತಾ ಹೋದರೆ, ನಿಮಗಿಂತ ಹೆಚ್ಚಿನ ಜವಾಬ್ದಾರಿ ನನ್ನದು. ನನಗೇನೋ ಧ್ರುವ ಎಲ್ಲಾ ರೀತಿಯಿಂದಲೂ ಇಷ್ಟವಾಗಿದಾನೆ. ಅವನೂ, ಅವನ ತಮ್ಮ. ಇಬ್ಬರೇ ಮಕ್ಕಳು. ತಮ್ಮ ಫಾರಿನ್ನಿನಲ್ಲಿ ಓದುತ್ತಿದ್ದಾನೆ. ಆಗರ್ಭ ಶ್ರೀಮಂತರು. ಇನ್ನೇನು ಬೇಕು. ಮಹಾರಾಣಿಯ ತರಹ ಇರ್ತಾಳೆ ನಮ್ಮ ಮಾಲಾ ಆ ಮನೇಲಿ...''

''ಸಂತೋಷ ಕಣಪ್ಪಾ... ನನಗೆ ನೀವಿಬ್ಬರೂ ಸುಖವಾಗಿರುವುದೇ ಮುಖ್ಯ. ಆದರೆ ಯಾವುದೇ ಕಾರಣಕ್ಕೂ ಬಲವಂತ ಮಾತ್ರ ಮಾಡಬೇಡ. ಅವಳಿಗೆ ಒಪ್ಪಿಗೆ ಯಾದರೆ ಮಾತ್ರ ಮುಂದುವರೆಯೋಣ.''

''ಆಯ್ತು ಭಟ್ಟರೇ... ನೀವು ಇಷ್ಟು ಹೇಳಿದ ಮೇಲೆ ಹಾಗೇ ಮಾಡ್ತೀನಿ. ಮೊದಲು ನೀವು ಅವಳ ಹತ್ತಿರ ಮಾತ್ನಾಡಿ...''

''ನಾನೊಂದು ಮಾತು ಪೇಳಲಾ? ನೀನು ಎಷ್ಟಾಗಲೀ ಲವಳ ಸ್ವಂತ ಅಣ್ಣ. ನೀನು ಹೇಳುವುದೇ ಸರಿ. ಮೊದಲೇ ಸ್ವಲ್ಪ ಮೊಂಡು ಸ್ವಭಾವ... ನೀವು ನೀವೇ ಒಪ್ಪಂದ ಮಾಡಿ ಕೊಳ್ಳುವುದೇ ಸರಿ... ನನಗೊಂದು ಮಾತನ್ನು ಅಣ್ಣನಾದವನು ಹೇಳಲಿಲ್ಲ ಅಂತ ಆ ಹುಡುಗಿ ನೊಂದ್ಕೋಬಾರದು.''

''ಏನು ಭಟ್ಟರೇ ನೀವೂ ಕೈ ಕೊಡುತ್ತಿದೀರಲ್ಲ...''

''ಹಾಗಲ್ಲಪ್ಪಾ... ಹೇಗೂ ಅವಳು ಧ್ರುವನ್ನ ನೋಡಿಯೇ ಇದಾಳೆ... ನೀನೇ ಒಂದ್ಮಾತು ಕೇಳಿಬಿಡು... ಬೇಕಾದರೆ, ನಾನೂ ತಿಳುವಳಿಕೆ ಹೇಳ್ತೀನಿ. ಎಷ್ಟಾಗಲೀ ನಿನಗೇ ಅವಳ ಮೇಲೆ ಹಕ್ಕು ಜಾಸ್ತಿ...''

''ನಾನು ಹಕ್ಕು ಚಲಾಯಿಸಿದರೆ ಅವಳು ಸುಮ್ಮನಿರ್ತಾಳಾ?... ಆಮೇಲೆ ನೀವುಗಳೆಲ್ಲ ಒಂದಾಗಿ ನನ್ನ ಮೇಲೆ ಅಟ್ಯಾಕ್ ಮಾಡ್ತೀರಿ...''

''ಏನೋ ಮಗು ಚಿಕ್ಕದು ಅಂತ, ಅವಳ ಪರವಹಿಸಿ ಮಾತನಾಡ್ತೀನಿ ಅಷ್ಟೇ... ನನಗೆ ನೀವಿಬ್ಬರೂ ಒಂದೇ...''

''ನನಗೂ ಗೊತ್ತು ಯಾರು ಯಾರು ಒಂದೇ ಅಂತ. ಹೋಗಲಿಬಿಡಿ. ಅದದೇ ಮಾತುಗಳು ಬೇಡ. ಇನ್ನೊಂದೆರಡು ದಿನಗಳಲ್ಲಿ ಧ್ರುವ ಹಾಗೂ ಅವನ ತಾಯಿ ಮದುವೆ ಮಾತುಗಳನ್ನಾಡಲು ಬರ್ತಾರೆ... ನಮ್ಮ ಗೆಸ್ಟ್‌ಹೌಸ್‌ನಲ್ಲೇ ಇಳಿದುಕೊಳ್ತಾರೆ. ನಿಮಗೆ ಎಲ್ಲಾ ತಿಳಿಸಿದೀನಿ. ಆಮೇಲೆ, ನನಗೆ ಏನೂ ಗೊತ್ತಿರಲಿಲ್ಲ ಎನ್ನಬೇಡಿ...''

''ಆಗಲಿ. ದೈವೇಚ್ಛೆ ಹೇಗಿದೆಯೋ ಹಾಗೆ ಆಗುತ್ತೆ. ನಮ್ಮ ಕೈಲಿ ಏನಿದೆ?'' ಅಷ್ಟರಲ್ಲಿ ಭಾರ್ಗವ ಬಂದನಾದ್ದರಿಂದ ಮಾತುಗಳು ಅಲ್ಲಿಗೇ ನಿಂತವು. ಮಧು ತಣ್ಣಗಾಗಿದ್ದ ಕಾಫಿಯನ್ನು ಕುಡಿಯದೇ ಹಾಗೇ ಬಿಟ್ಟು ಹೋದ. ಈ ವಿಷಯಗಳನ್ನು ಭಾರ್ಗವನಿಗೆ ಹೇಳುವುದೋ ಬೇಡವೋ ಎಂದು ಯೋಚಿಸುತ್ತಾ ನಿಂತವರನ್ನು ಭಾರ್ಗವ ಎಚ್ಚರಿಸಿದ.

''ಅದ್ಯಾಕೆ ಕಾಫೀನ ಕುಡೀದೇ ಹಾಗೆ ಬಿಟ್ಟು ಹೋದ.''

''ಏನೋ ರುಚಿಸಲಿಲ್ಲವೇನೋ... ಬಿಸಿ ಕಾಫಿ ಮಾಡಿಕೊಡ್ತೀನಿ. ಮಾಲಾ ಯಾಕೆ ಇನ್ನೂ ಎದ್ದೇ ಇಲ್ಲ.''

''ನಾನು ಎಬ್ಬಿಸ್ಲಾ ಮಾವಾ?''

''ಬೇಡ ಬಿಡು. ಆರಾಮವಾಗಿ ಮಲಗಿರಲಿ. ಅತ್ತೆಮನೆಗೆ ಹೋದ ಮೇಲೆ ಹೀಗೆ

ಆರಾಮವಾಗಿರುಕ್ಕೆ ಆಗುತ್ತಾ?'' ಭಾರ್ಗವ ಅವರನ್ನೇ ತದೇಕವಾಗಿ ನೋಡಿದ. ತಕ್ಷಣಕ್ಕೆ ಅವರ ಮಾತು ಸರಿಯಾಗಿ ಅರ್ಥವಾಗಲಿಲ್ಲ.

''ಮಧುಕರನ ಬಿಸಿನೆಸ್ ಪಾರ್ಟನರ್ ಧ್ರುವ ಇದಾನಲ್ಲ ಅವನು ಮಾಲಾಳನ್ನು ಮದುವೆಯಾಗ್ತೀನಿ ಅಂತಂದ್ನಂತೆ.'' ಮಾವನ ಮಾತುಗಳು ಅವನನ್ನು ಬೆಚ್ಚಿಬೀಳುವಂತೆ ಮಾಡಿತು.

''ಏನಂತೆ... ಮಾಲಾ ಅವನನ್ನು ಖಂಡಿತಾ ಒಪ್ಪಲ್ಲ.''

''ಮಧು ಒಪ್ಪಿಗೆ ಕೊಟ್ಟುಬಿಟ್ಟಿದಾನಲ್ಲ...''

''ಅವಳನ್ನೂ ಒಂದ್ಮಾತು ಕೇಳಬೇಡವಾ?''

''ಅದನ್ನೇ ನಾನೂ ಹೇಳಿದೆ. ನೋಡೋಣ... ದೇವರಿಚ್ಛೆ ಏನಿದೆಯೋ... ಹಾಗಾಗುತ್ತೆ.''

''ದೇವರಿಚ್ಛೆ ಅಂತ ನಾವು ಸುಮ್ಮನೇ ಕೂತಿದ್ರೆ, ಮಧು ಅವಳ ಜೀವನಾನೇ ಹಾಳು ಮಾಡಿಬಿಡ್ತಾನೆ.''

''ನಾವು ಏನು ಮಾಡುಕ್ಕೆ ಆಗುತ್ತೆ ನೀನೇ ಹೇಳು... ಅವಳು ನನ್ನ ತಂಗಿ ಅವಳ ಜವಾಬ್ದಾರಿ ನನ್ನದು... ಹಾಗೇ ಹೀಗೆ ಅಂತ ಮಾತನಾಡಿದ. ನಮಗೆ ಏನೂ ಹಕ್ಕೇ ಇಲ್ಲ ಎನ್ನುವಂತೆ ಆಡಿದ.''

''ಇವನಿಗೆ ಯಜಮಾನಿಕೆ ಸಿಕ್ಕಿದ ಮೇಲೆ ವಿಪರೀತ ಧಿಮಾಕು ಬಂದುಬಿಟ್ಟಿದೆ. ಅಧಿಕಾರದ ಮದ, ದುರಹಂಕಾರ...''

''ಹಾಗೆಲ್ಲಾ ನೀನೇ ಅನ್ನಬಾರದು. ಬಿಡು ಭಾರ್ಗವ... ಆದರೆ ನನಗೆ ಆ ಹುಡುಗೀದೇ ಚಿಂತೆ...''

''ನೀನು ಒಪ್ಕೋಬೇಡಾಂತ ನಾನು ಹೇಳ್ತೀನಿ...''

''ಯಾರೂ ಎಬ್ಬಿಸಲೇ ಇಲ್ಲ... ಎಷ್ಟು ಹೊತ್ತಾಗಿ ಹೋಗಿದೆ'' ಎಂದು ಆಕಳಿಸುತ್ತಾ ರಾಗವಾಗಿ ಹೇಳುತ್ತಾ ಮಾಲಾ ಅಡಿಗೆಮನೆಗೆ ಬಂದಾಗ ಅವರಿಬ್ಬರ ಮಾತುಕತೆ ನಿಂತಿತು.

''ಏನೋ ಮಾತನಾಡುತ್ತಿದ್ರಿ... ಯಾಕೆ ನಿಲ್ಲಿಸಿಬಿಟ್ರಿ?''

''ಕಾಫಿ ಕೊಡ್ಲಾ ಮಾಲಾ...'' ಭಟ್ಟರು ಕೇಳಿದರು.

''ಕಾಫಿ ಬೇಡ... ಓವಲ್ಟೀನ್ ಕೊಡಿ. ಇವತ್ಯಾಕೋ ಅದನ್ನು ಕುಡಿಬೇಕೂಂತ ಅನ್ನಿಸ್ತಿದೆ.''

''ನಿನ್ನ ರುಚಿ ದಿನಾ ದಿನಾ ಬದಲಾಗುತ್ತೆ...'' ಭಾರ್ಗವ ಚುಡಾಯಿಸಿದ.

''ಹೌದು. ನೀನೂ ಬೇಕಾದ್ರೆ ಬದಲಾಯಿಸ್ಕೋ...''

''ಬೇಡಮ್ಮಾ... ಅದೆಲ್ಲಾ ನಿಮ್ಮಿಬ್ಬರಿಗೇ ಇರಲಿ. ನಾನು ಮಾತ್ರ ಒಂದೇ ತರಹ ಇರ್ತೀನಿ.''

''ಆಹಾಹಾ... ನಾನೂ ನೋಡ್ತೀನಿ'' ಅವಳು ಅಣಕಿಸಿದಳು.

''ಭಾರ್ಗವ ಒಂದಿಷ್ಟು ದಿನಸಿ ಸಾಮಾನುಗಳು ಬೇಕು... ಬೇಗ ಹೋಗಿ ತಂದು ಬಿಡು... ಇವತ್ತೇ ಪುಡಿಗಳನ್ನು ಮಾಡಬೇಕು.''

''ಯಾಕೆ ಭಟ್ಟರೇ... ಯಾರಾದ್ರೂ ಗೆಸ್ಟ್‌ಗಳು ಬರ್ತಿದಾರಾ!''

''ಹುಂ. ನಿಮ್ಮ ಅಣ್ಣನ ಫ್ರೆಂಡ್ಸು... ಈ ಸಾರಿ ಅವರ ತಾಯೀನೂ ಬರ್ತಿದಾರಂತೆ.''

''ಯಾಕಂತೆ? ಬೆಂಗಳೂರು ಸುತ್ತೋಕಾ?'

''ಇರಬಹುದು... ಅವರು ಊಟಕ್ಕೆ ಇಲ್ಲಿಗೇ ಬರ್ತಾರೆ...''

''ಬರದೇ ಏನು ಮಾಡ್ತಾರೆ? ನೀವು ರುಚಿರುಚಿಯಾಗಿ ಅಡಿಗೆ ಮಾಡ್ತೀರಿ... ಪದೇ ಪದೇ ಬರ್ತಾನೇ ಇರ್ತಾರೆ. ಅಲ್ವೇನೋ ಭಾರ್ಗವ?''

''ನಂಗೇನು ಗೊತ್ತು? ಅವರೆಲ್ಲ ನಿನ್ನ ಅಣ್ಣನ ಫ್ರೆಂಡ್ಸು...''

''ಹುಂ.. ಅವನ ಫ್ರೆಂಡ್ಸಾದರೆ ನನಗೇನು? ಅವರಿಗೇನು ಕೋಡು ಬೆಳೆದಿದೆಯಾ?''

''ಕೋಡು ಇದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಭಾರೀ ಶ್ರೀಮಂತರಂತೆ...'' ಭಾರ್ಗವ ಕೆಣಕಿದ.

''ಶ್ರೀಮಂತಿಕೆ ಇದ್ದರೆ ಅವರಿಗೆ ಇರುತ್ತೆ ನನಗೇನು? ನಾವೂ ಶ್ರೀಮಂತರೇ... ನಾವು ಬಿಟ್ಟಿ ಬಿದ್ದಿಲ್ಲ.''

''ಹಾಗೆಲ್ಲಾ ಆಡಬಾರದಮ್ಮ... ಮಧುಗೆ ಕೇಳಿಸಿದರೆ...?''

''ಕೇಳಿಸಲಿ ಬಿಡಿ ಭಟ್ಟರೇ... ನನಗೇನು ಹೆದರಿಕೆ?...''

''ಹೆದರು ಅಂತಲ್ಲ, ಅವನಿಗೂ ಅವನ ಫ್ರೆಂಡ್ಸಿಗೂ ಸ್ವಲ್ಪ ಗೌರವ ಕೊಡಬೇಕು... ನಾಳೆ ಮದುವೆಯಾಗಿ ನಿನ್ನ ಗಂಡನ ಮನೆಗೆ ಹೊರಟುಹೋದರೆ ಅಣ್ಣ-ತಂಗಿ ಹೀಗೇ ಒಂದೇ ಮನೇಲಿ ಇರೋಕ್ಕಾಗುತ್ತಾ?''

''ಮದುವೆಯಾಗಿ ಗಂಡನ ಮನೆಗೆ ಹೋದರೆ ತಾನೇ ಈ ಮಾತು? ನಾನು ಇದೇ ಮನೆಯಲ್ಲಿ ಇರ್ತೀನಿ... ನಾನು ಬೇಕಿದ್ದರೆ ನನ್ನ ಗಂಡನೂ ಇಲ್ಲೇ ಇರಬಹುದು'' ಭಾರ್ಗವನ ಕಡೆ ನೋಡಿ ಕಣ್ಣು ಹೊಡೆದು ನಕ್ಕಳು. ಅವನು ದೃಷ್ಟಿಯನ್ನು ತಪ್ಪಿಸಿದ. ಭಟ್ಟರು ಇಬ್ಬರನ್ನೂ ಗಮನಿಸಿದರು.

''ಹೋಗೋ ಭಾರ್ಗವ... ಹೊತ್ತಾಗುತ್ತೆ... ನೋಡು ಲಿಸ್ಟ್ ಬರೆದು ಇಟ್ಟಿದೀನಿ...'' ಭಾರ್ಗವ ಚೀಲಗಳನ್ನು ಹಿಡಿದು ಹೊರಹೊರಟ. ಬಿಸಿ ಬಿಸಿ ಓವಲ್ಟೀನ್ ಕುಡಿದು, ತಲೆಯ ಕೂದಲನ್ನು ಬಿಚ್ಚಿಕೊಂಡು ಮಾಲಾ ನಡುಮನೆಗೆ ಬಂದಳು. ಕೈಯಲ್ಲಿ ಯಾವುದೋ ವಾರಪತ್ರಿಕೆಯನ್ನು ತಿರುವಿ ಹಾಕುತ್ತಾ ಭಾರ್ಗವನನ್ನೇ ಕುರಿತು ಚಿಂತಿಸುತ್ತಿದ್ದಳು.

''ಮಾಲೀ, ಮಾಲೀ'' ಎನ್ನುತ್ತ ಮಧುಕರ ಅವಳ ಬಳಿಗೆ ಬರುವವರೆಗೂ ತನಗಲ್ಲ ಎಂಬಂತೆ ಕುಳಿತಿದ್ದಳು. ಎಂದಿನಂತೆ ಅವರಿಬ್ಬರ ವಾಗ್ವಾದ ಪ್ರಾರಂಭವಾಗುವುದರಲ್ಲಿತ್ತು. ಮಧುಕರ ಕೋಪವನ್ನು ಅದುಮಿಟ್ಟುಕೊಂಡು ತಂಗಿಯೊಡನೆ ಅನುನಯದ ಮಾತುಗಳಿಂದ, ಧ್ರುವ ಹಾಗೂ ಅವನ ತಾಯಿ ಅವರ ಮನೆಗೆ ಬರಲಿರುವ ಸುದ್ದಿಯನ್ನು ತಿಳಿಸಿದ. ಮಾಲಾ ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ. ಆ ವಿಷಯ ತನಗೆ ಸಂಬಂಧಿಸಿದುದು ಅಲ್ಲವೆಂಬಂತೆ ಕೇಳಿಸಿಕೊಂಡಳು.

* * * *

ಮಧು ಅವಸರವಸರವಾಗಿ ಸಿದ್ಧನಾಗಿ ಅತ್ತ ಹೊರಟ ಕೂಡಲೇ ಇತ್ತ ಭಾರ್ಗವ ಮಾರ್ಕೆಟ್ಟಿನಿಂದ ಬಂದ. ಭಟ್ಟರ ಕೈಗೆ ಚೀಲಗಳನ್ನು ಕೊಟ್ಟು ಬಂದ. ''ಮಾಲಾ ಯಾಕೆ ಹುಶಾರಿಲ್ವಾ ? ಒಂಥರಾ ಕೂತಿದೀಯಲ್ಲ..'' ಅವಳ ಬಳಿ ಬಂದು ನಿಂತು ಕೇಳಿದಾಗ, ಅವಳು ಅವನ ಕೈ ಹಿಡಿದಳು.

''ನಂಗ್ಯಾಕೋ ಮೂಡೇ ಕೆಟ್ಟು ಹೋಯ್ತು... ಧ್ರುವ ಅವನ ತಾಯಿಯ ಜತೆ ಬರ್ತಾನಂತೆ. ನಾನು ಅವತ್ತಿನ ಹಾಗೆ ಬಿಹೇವ್ ಮಾಡಬಾರದು ಅಂತ ಮುನ್ಸೂಚನೆ... ದರಿದ್ರ ಕಾಲೇಜಿಗೆ ರಜ. ಇಲ್ಲದಿದ್ದರೆ ಎಲ್ಲಾದರೂ ಹೊರಟುಹೋಗ್ತಿದ್ದೆ...''

''ಅವರ್ಯಾರೋ ಬಂದರೆ ನೀನೇಕೆ ಮನೆಬಿಟ್ಟು ಹೋಗಬೇಕು...? ಅವರು ಹೊರಗಿನೋರು ಬರ್ತಾರೆ, ಹೋಗ್ತಾರೆ. ಅದಕ್ಕೆ ಟೆನ್ಷನ್ ಯಾಕೆ?'' ಬಾಯಿ ಹಾಗೆ ನುಡಿದರೂ ಅವನಿಗೂ ಏನೋ ಆತಂಕ...

''ಒಂದು ಕೆಲಸ ಮಾಡೋಣ... ನಾಳೆ ಬೆಳಿಗ್ಗೇನೇ ಎದ್ದು ನಾನೂ ನೀನೂ ಬೈಕ್‌ನಲ್ಲಿ ಶ್ರೀರಂಗಪಟ್ಟಣಕ್ಕೆ ಹೊರಟುಹೋಗೋಣ. ಮಜವಾಗಿರುತ್ತೆ.'' ಚಪ್ಪಾಳೆ ತಟ್ಟಿದಳು.

''ಏನು ಮಜಾ? ಆಮೇಲೆ ಇರುತ್ತೆ ಸಜಾ...'' ಅವನೂ ನಕ್ಕ.

''ಸಜಾ ಕೊಡೋಕೆ ಅವನ್ಯಾರು? ನಾನು ಕೇರ್ ಮಾಡುಲ್ಲ...''

''ನೀನು ಅವನ ಮುದ್ದಿನ ತಂಗಿ. ನಿನ್ನ ಜವಾಬ್ದಾರಿ ಅವನ ಮೇಲಿದೆ. ನಿನ್ನ ಮೇಲೆ ಹಕ್ಕು ಚಲಾಯಿಸಬಹುದು. ಅವನ ಮನಸ್ನಲ್ಲಿ ಏನೇನಿದೆಯೋ...?''

''ಏನಿದೆ ಅವನ ತಲೇಲಿ... ಬರೀ ಮಣ್ಣು ತುಂಬಿದೆ... ಅಲ್ಲಾ ನಾನು ಅವನ ತಂಗಿ... ಒಂದು ದಿನವಾದ್ರೂ ಪ್ರೀತಿಯಿಂದ ನಿನಗೇನು ಬೇಕು ಅಂತ ಕೇಳಿದಾನಾ? ತನಗೆ ಬೇಕಾದಾಗ ಮಾತ್ರ ಮಾತನಾಡ್ತಾನೆ...''

''ಅದೆಲ್ಲ ಶ್ರೀಮಂತರ ಲಕ್ಷಣ...'' ವ್ಯಂಗ್ಯವಾಗಿ ನಕ್ಕ.

''ಸೀರಿಯಸ್ಸಾಗಿ ಮಾತ್ನಾಡು ಭಾರ್ಗವ. ನೀನೂ ರೇಗಿಸಬೇಡ.''

''ಓ...ಕೇ. ಈಗ ನಾನು ಏನು ಮಾಡಬೇಕು...?''

''ಆದಷ್ಟು ಬೇಗ ನಮ್ಮಿಬ್ಬರ ಮದುವೆಯಾಗಬೇಕು... ನನಗೆ ನಿನ್ನ ಹಾಗೆ ತಾಳ್ಮೆ ಇಲ್ಲ...'' ಅವನ ಎದೆಯ ಮೇಲೆ ಹಗುರವಾಗಿ ಗುದ್ದುತ್ತಾ ಹೇಳಿದಾಗ ಅವನು ಹಿಂದಕ್ಕೆ ಸರಿದ.

''ಮಧು ಮನೇಲಿಲ್ಲ ಅವನು ಆಗಲೇ ಹೊರಟು ಹೋದ.''

''ಆದರೆ, ನನ್ನ ಮಾವ ಇದಾರೆ. ಅವರೇನಂದುಕೊಳ್ತಾರೆ!... ಏನೇ ರೊಮಾನ್ಸ್ ಇದ್ದರೂ ಮದುವೆಯಾದ ಮೇಲೆ...''

''ಅದರಲ್ಲೇನು ತಪ್ಪು? ಸಿನಿಮಾಗಳಲ್ಲಿ ತೋರಿಸೋಲ್ವಾ?''

''ಸಿನಿಮಾದ್ದು ಬರೀ ನಟನೆ, ಕಾಸು ಸಂಪಾದನೆಗಾಗಿ ಮಾಡುವುದು... ಹಾಗೇ ನಾವೂ ಆಡಿದರೆ ಚೆನ್ನಾಗಿರುತ್ತಾ?''

''ನಿನಗೆ ಲವ್ ಅಂದರೆ ಏನೂಂತ ಗೊತ್ತೇ ಇಲ್ಲ...''

''ಹೌದು ಗೊತ್ತಿಲ್ಲ. ಅದರಿಂದ ನನಗೇನೂ ಚಿಂತೆ ಇಲ್ಲ.''

''ನಾನು ನಿನಗೆ ಎಲ್ಲಾ ಹೇಳಿಕೊಡ್ತೀನಿ. ಹೀಗೆ ದಡ್ಡನ ತರಹ ಮಾತ್ರ ಇರಬಾರದು'' ಅವಳು ಕಿಲಕಿಲನೆ ನಕ್ಕಾಗ ಅವನು ಕೆಂಪಾದ.

''ಹೌದು... ನಾನು ದಡ್ಡ, ಒಡ್ಡ...''

''ನಿಂಗೂ ಕೋಪ ಬರುತ್ತಾ ಭಾರ್ಗವ...'' ಅವನ ಕಣ್ಣಲ್ಲಿ ಕಣ್ಣಿಟ್ಟು ಕೇಳಿದಳು. ಅವನು ಅವಳಿಗೆ ಬೆನ್ನು ಮಾಡಿ ನಿಂತ.

''ಇಲ್ಲ, ಕೋಪ, ತಾಪ ಯಾವುದೇ ಭಾವನೆಗಳೇ ಇಲ್ಲದವನು ನಾನು...'' ಎನ್ನುತ್ತಾ ಅಲ್ಲಿ ನಿಲ್ಲದೇ ಹೊರಬಂದು, ಬೈಕ್ ಹತ್ತಿದ. ಮಾಲಾ ವಿಚಿತ್ರವಾಗಿ ಅವನನ್ನೇ ನೋಡುತ್ತಿದ್ದಳು. ಭಾರ್ಗವ ಹೀಗೇಕೆ ಮಾತುಗಳನ್ನಾಡಿದ ! ನಾನು ಅಂಥಾದ್ದೇನು ಹೇಳಿದೆ. ಇನ್ನು ಮುಂದೆ ಅವನಿಗೆ ನೋವಾಗುವಂತೆ ಯಾವುದೇ ಮಾತುಗಳನ್ನಾಡುವುದಿಲ್ಲ... ಸ್ಸಾರಿ ಭಾರ್ಗವ... ಎಂದು ತನ್ನಲ್ಲೇ ನೂರೆಂಟು ಸಾರಿ ಹೇಳಿಕೊಂಡಳು. ಅರ್ಧಗಂಟೆ ಕಳೆಯುವುದನ್ನೇ ಕಾದಿದ್ದು ಫೋನನ್ನೆತ್ತಿಕೊಂಡಳು.

ಭಾರ್ಗವನಿನ್ನೂ ಆಫೀಸಿಗೆ ಬಂದಿಲ್ಲವೆಂದು ತಿಳಿಯಿತು. ಎದೆ ಢವಢವ ಹೊಡೆದುಕೊಂಡಿತು. ಮೊದಲೇ ಅವನ ಮೂಡ್ ಕೆಟ್ಟಿತ್ತು. ಬೈಕ್ ಹತ್ತಿ ಹೋಗಿದಾನೆ... ದಾರಿಯಲ್ಲಿ ಏನಾಯ್ತೋ... ಅವನಿಗೆ ಏನೂ ಆಗದಿರಲಿ ದೇವರೇ ಎಂದು ಮನದಲ್ಲೇ ಬೇಡಿ, ಕೆಲವೇ ನಿಮಿಷಗಳಲ್ಲಿ ಸಿದ್ಧಳಾಗಿ ತಾನೂ ಆಫೀಸಿನ ಹಾದಿ ಹಿಡಿದಳು.

ಅವಳು ರಿಕ್ಷಾದಿಂದ ಇಳಿಯುವುದಕ್ಕೂ ಭಾರ್ಗವ ಬೈಕ್‌ನಲ್ಲಿ ಅಲ್ಲಿಗೆ ಬಂದು ಸೇರುವುದಕ್ಕೂ ಸರಿಯಾಯ್ತು. ''ಅರೇ ! ನೀನಾ.... ಯಾಕೆ ಬಂದೆ?''

''ಸ್ಸಾರಿ ಭಾರ್ಗವ, ನಾನು ನಿನಗೆ ಹರ್ಟ್ ಮಾಡಿಬಿಟ್ಟೆ, ನೀನೆಲ್ಲಿಗೆ ಹೋಗಿದ್ದೆ? ಯಾಕೆ ಇಷ್ಟು ಲೇಟು? ನಾನು ಫೋನು ಮಾಡಿದಾಗ, ನೀನಿನ್ನೂ ಬಂದಿಲ್ಲ ಅಂತ ತಿಳೀತು.

ಅದಕ್ಕೆ ನಾನೇ ಬಂದುಬಿಟ್ಟೆ... ನನಗೆ ಎಷ್ಟು ಭಯವಾಗಿತ್ತು ಗೊತ್ತಾ? ನೋಡು ಈಗಲೂ ನನ್ನ ಎದೆ ಹೇಗೆ ಢವಢವ ಎನ್ನುತ್ತಿದೆ'' ಎನ್ನುತ್ತಾ ಅವನ ಕೈಯನ್ನು ಎಳೆದು ತನ್ನ ಎದೆಯ ಮೇಲೆ ಇರಿಸಿಕೊಂಡಳು. ಭಾರ್ಗವ ತನ್ನ ಕೈಯನ್ನು ಹಿಂದಕ್ಕೆ ಎಳೆದುಕೊಂಡು ಅತ್ತಿತ್ತ ನೋಡಿದ.

''ಬಾ... ನಿನ್ನನ್ನ ಮನೆಗೆ ಬಿಟ್ಟು ಬರ್ತೀನಿ...'' ಕೆಳದನಿಯಲ್ಲಿ ನುಡಿದ.

''ಹೇಗೂ ಬಂದಿದೀನಿ. ನಮ್ಮ ಕಂಪೆನಿಗೆ ಒಂದು ವಿಸಿಟ್ ಕೊಟ್ಟೇ ಹೋಗ್ತೀನಿ.: ಹೇಗೆ ನಡೀತಿದೆ ನಿಮ್ಮ ಬಿಸಿನೆಸ್.. ಎಂ. ಡಿ. ಯವರು ಏನಂತಾರೆ? ವರ್ಕರ್ಸ್‌ಗೆ ಬೋನಸ್ ಗೀನಸ್ ಕೊಡುವುದುಂಟೋ ಹೇಗೆ ಈ ವರ್ಷ?''

ಅವಳು ನಗುನಗುತ್ತಾ ಗೇಲಿಯಾಗಿ ಮಾತನಾಡಿದರೂ, ಅವನು ಏನನ್ನೂ ಆಡದೆ ಅವಳೊಂದಿಗೆ ಹೆಜ್ಜೆ ಹಾಕಿದ. ಅವಳು ಆಫೀಸಿಗೆ ಬಂದಿರುವ ಸುದ್ದಿ ಕೆಲವೇ ನಿಮಿಷಗಳಲ್ಲಿ ಆಫೀಸಿನೊಳಗೆ ಹರಡಿತು. ಎಲ್ಲರೂ ಕುತೂಹಲದಿಂದ ಎಂ. ಡಿ. ಯ ತಂಗಿಯನ್ನು ನೋಡಲು ಆತುರಾತುರವಾಗಿ ಬಂದು ಅವಳಿಗೆ ಸುಸ್ವಾಗತ ಕೋರಿದರು. ಮಾಲಾ ಸಂತಸದಿಂದ ಉಬ್ಬಿ ಹೋದಳು.

''ನೋಡಿದ್ಯಾ ಭಾರ್ಗವ... ನಾನು ಈ ಕಂಪೆನಿಯ ಮಾಲೀಕಳು ಅಂತ ಎಷ್ಟು ಗೌರವ ತೋರುತ್ತಿದಾರೆ... ಮಧು ಎಲ್ಲಿ ಕರಿ? ನೋಡಿ ಒಂದಿಷ್ಟು ಹೊಟ್ಟೆ ಉರಿಸಿ ಕೊಳ್ಳಲಿ'' ಭಾರ್ಗವ ನಗಲಿಲ್ಲ.

''ಬಾ... ಮಧುಕರನ ಛೇಂಬರ್‌ಗೆ ಕರೆದುಕೊಂಡು ಹೋಗ್ತೀನಿ.''

''ಬೇಡ ನಾನು ನಿನ್ನ ಆಫೀಸ್ ರೂಂನಲ್ಲೇ ಕೂತ್ಕೊಂಡಿರ್ತೀನಿ.''

''ಬೇಡ ಮಾಲಾ... ಹೋಗಲಿ ಗೆಸ್ಟ್ ರೂಂನಲ್ಲಿ ಕೂತ್ಕೊಳ್ಳೋಣ ನಡೀ...'' ಸ್ವಲ್ಪ ಹೊತ್ತಿನಲ್ಲಿಯೇ ವಿಷಯ ತಿಳಿದ ಮಧುಕರ ಮಾಲಾಳಿಗೆ ತನ್ನ ಛೇಂಬರ್ರಿಗೆ ಬರುವಂತೆ ಹೇಳಿ ಕಳಿಸಿದ. ಎಷ್ಟು ಹೊತ್ತಾದರೂ ಅವಳು ಬರದೇ ಇದ್ದಾಗ ತಾನೇ ಗೆಸ್ಟ್ ರೂಂಗೆ ಬಂದ. ಅವಳೊಡನೆ ಮಾತನಾಡುತ್ತಾ ಕುಳಿತಿದ್ದ ಭಾರ್ಗವನನ್ನು ಕಂಡು ಮುಖ ಸಿಂಡರಿಸಿದ.

''ಆಫೀಸ್ಗೆ ಯಾಕೆ ಬಂದೆ?'' ಒರಟಾಗಿ ಕೇಳಿದ.

''ಅದು ನನ್ನ ಇಷ್ಟ, ಅದಕ್ಕೆ ನಿನ್ನ ಪರ್ಮಿಷನ್ ಬೇಕಿಲ್ಲ'

''ಓ... ಷಟಪ್.. ಬಾ.. ಮನೆಗೆ ಹೋಗುವಂತೆ. ಡ್ರೈವರ್‌ಗೆ ಹೇಳ್ತೀನಿ.''

''ಇಲ್ಲಿಯ ಸ್ಥಿತಿಗತಿ ಹೇಗಿದೆ ಅಂತ ನೋಡೋಕೆ ಬಂದೆ...''

''ನೀನೇನು ಬಾಸ್ ಅಲ್ಲ... ಮೀಟಿಂಗ್‌ಗೆ ಬಾ ಅಂದರೆ ಏನೋ ನೆವ ಹೇಳ್ತೀಯ... ಇಲ್ಲಿಲಲ್ಲೇ ಹೊಡೆಯೋಕೆ ಅಂತ ಬಂದೆಯಾ?''

''ಮೈಂಡ್ ಯುವರ್ ಲಾಂಗ್ವೇಜ್... ಅದರ್‌ವೈಸ್...'' ಅಷ್ಟರಲ್ಲಿ

ಗೆಸ್ಟ್‌ರೂಂನಲ್ಲಿದ್ದ ಫೋನು ರಿಂಗಾಯಿತು. ಭಾರ್ಗವ ಎತ್ತಿಕೊಂಡ. ಅವರಿಬ್ಬರೂ ಮಾತು ನಿಲ್ಲಿಸಿದರು. ದುರುದುರನೆ ಅವಳನ್ನೇ ನೋಡಿ ಮಧುಕರ ತನ್ನ ಛೇಂಬರ್‌ಗೆ ಹಿಂತಿರುಗಿದ. ಭಾರ್ಗವ ಮಾತು ಮುಗಿಸಿ ಇತ್ತ ತಿರುಗಿದಾಗ ಮಾಲಾಳೂ ಇರಲಿಲ್ಲ. ಎಲ್ಲೋ ಮಧುಕರನ ಛೇಂಬರ್‌ಗೆ ಹೋಗಿರಬಹುದೆಂದು ಭಾರ್ಗವ ತನ್ನ ಆಫೀಸಿನ ರೂಮಿಗೆ ಹೋಗಿ, ತನ್ನ ಕೆಲಸದಲ್ಲಿ ಮಗ್ನನಾದ.

ಅರ್ಧಗಂಟೆಯ ನಂತರ ಭಾರ್ಗವ ಮಧುಕರನ ಚೇಂಬರ್‌ಗೆ ಬಂದ. ಅಲ್ಲಿ ಮಾಲಾ ಇರಲಿಲ್ಲ. ಮಾಲಾ ಮನೆಗೆ ಹೋದಳಾ ಅಂತ ಕೇಳಬೇಕೆಂದುಕೊಂಡರೂ ತಡೆದುಕೊಂಡ.

''ಮಾಲಾ ಮನೆಗೆ ಹೋದ್ಲಾ?...'' ಮಧುಕರನೇ ಕೇಳಿದಾಗ ಭಾರ್ಗವ ಬೆರಗಿನಿಂದ ಕಣ್ಣುಗಳನ್ನು ಅರಳಿಸಿದ.

''ನಂಗೊತ್ತಿಲ್ಲ. ಅವಳು ಇಲ್ಲಿ ನಿನ್ನ ರೂಮಿನಲ್ಲಿರಬಹುದು ಅಂತ ಅಂದ್ಕೊಂಡಿದ್ದೆ.''

''ನಾನ್ಸೆನ್ಸ್ ಅಷ್ಟು ಜವಾಬ್ದಾರಿ ಬೇಡವಾ? ಯಾರಿಗೂ ಹೇಳದೆ ಮನೆಗೆ ಹೋದಳೇನೋ? ಅವಳನ್ನು ಯಾಕೆ ಕರೆದುಕೊಂಡು ಬಂದೆ?''

''ನನ್ನ ಜೊತೆ ಬರಲಿಲ್ಲ. ಅವಳೇ ಬಂದಳು.''

''ಸಿಲ್ಲೀ ಗರ್ಲ್... ಮದುವೆಯಾದ ಮೇಲೂ ಹೀಗೇ ಆಡಿದರೆ ಗಂಡ, ಅತ್ತೆ ಎಲ್ಲಾ ಏನಂದುಕೊಳ್ತಾರೆ? ಯಾರ ಮಾತನ್ನೂ ಕೇಳುಲ್ಲ. ಭಟ್ಟರಂತೂ ಮುದ್ದು ಮಾಡಿ ಕೆಡಿಸಿಬಿಟ್ಟಿದಾರೆ. ನಾನು ಏನಾದರೂ ಮಾತಾಡಿದರೆ ಹುಲಿ ತರಹ ಎಗರಿ ಬೀಳ್ತಾಳೆ. ಈಗ ನಿನ್ನನ್ನೇ ರಿಕ್ವೆಸ್ಟ್ ಮಾಡ್ಕೋಬೇಕು... ನಿಂಗೊತ್ತಲ್ಲ ಧ್ರುವ ಅವಳನ್ನು ಮದುವೆಯಾಗೋಕೆ ಇಷ್ಟ ಪಡ್ತಿದಾನೆ ಅಂತ.. ಈಗ ನೀನೇ ಅವಳನ್ನು ತಿದ್ದಬೇಕು. ನಿನ್ನ ಮಾತನ್ನಾದರೂ ಕೇಳ್ತಾಳಾ ಅಂತ...'' ಒಂದು ಕಲ್ಲು ಎಸೆದ.

''ಅಂದ್ರೆ... ಮದುವೆ ಫಿಕ್ಸ್ ಆಗಿಯೇ ಹೋಯ್ತಾ?...''

''ಹೂಂ. ಹಾಗೇ ಅಂದ್ಕೋ.. ಅದಕ್ಕೆ ಗಾಬರಿ ಯಾಕೆ? ಧ್ರುವನಂತಹವನು ಅವನಾಗಿಯೇ ಅವಳನ್ನು ಮೆಚ್ಚಿದಾನೆ ಅಂತಂದ್ರೆ ಅದು ಅವಳ ಸೌಭಾಗ್ಯ...''

''ಮಾಲಾಳಿಗೆ ಒಪ್ಪಿಗೇನಾ ಅಂತ ಕೇಳಿದ್ಯಾ?'' ಆತಂಕದಿಂದ ಕೇಳಿದ.

''ಒಪ್ಪದೇ ಏನು ಮಾಡ್ತಾಳೆ? ಇವನಿಗಿಂತ ಒಳ್ಳೇ ಗಂಡ ಇನ್ನೆಲ್ಲಿ ಸಿಗ್ತಾನೆ... ಅದ್ಯಾಕೆ ನಿನಗೆ ಅನುಮಾನ?''

''ಹಾಗಲ್ಲ, ಮೊದಲೇ ಒಂದು ಮಾತು ಕೇಳಬೇಕಾಗಿತ್ತು. ಹೆಣ್ಣುಮಕ್ಕಳು ತುಂಬಾ ಸೂಕ್ಷ್ಮ ಅಂತ ಅಂತಾರೆ... ಅವಳ ಮನಸ್ನಲ್ಲಿ ಏನಿದೆಯೊ?''

''ಏನಿದೆ? ಬರೀ ಜೊಳ್ಳು... ನನ್ನ ಎದುರಿಗೆ ಹಾರಾಡ್ತಾಳೆ ಅಷ್ಟೇ. ಮದುವೆ ಅಂತ ತಿಳಿದ ಕೂಡಲೇ ನಾಚಿಕೊಳ್ತಾಳೆ... ಬೇಕಾದ್ರೆ ನೋಡ್ತಿರು.''

''ಏನೇ ಆಗಲಿ, ಅವಳನ್ನು ಒಂದ್ಮಾತು ಕೇಳಿ ಮುಂದುವರೆಯುವುದು ಸರಿ ಅಂತ ಅನ್ನಿಸುತ್ತೆ. ನಿನಗಿಂತ ನಾನು ಹೆಚ್ಚು ಅವಳನ್ನು ಅರಿತಿದ್ದೇನೆ. ಅವಳಿನ್ನೂ ಮದುವೆಯ ಬಗ್ಗೆ ಚಿಂತಿಸದೇನೇ ಇದ್ದರೇ...?''

''ಆ ಚಿಂತೆ ನನಗಿರಲಿ. ನಾನು ಅವಳ ಸ್ವಂತ ಅಣ್ಣ. ಅವಳ ಒಳ್ಳೆಯದು ಕೆಟ್ಟದ್ದು ನನಗೆ ಸೇರಿದ್ದು... ನನಗಿಂತ ನೀನು ಅವಳಿಗೆ ಹೆಚ್ಚು ಕ್ಲೋಸ್... ಆದ್ದರಿಂದ ಹೇಳ್ತಿದೀನಿ... ಅವಳನ್ನು ಮೆಂಟಲೀ ಪ್ರಿಪೇರ್ ಮಾಡುವುದು ನಿನ್ನ ಕೆಲಸ.. ''

''ಅದು ನನ್ನಿಂದಾಗದ ಕೆಲಸ...'' ಭಾರ್ಗವ ಅಡ್ಡಡ್ಡ ತಲೆಯಾಡಿಸಿದ.

''ಯಾಕೆ ಅಷ್ಟು ಮಾಡಕ್ಕೆ ಆಗುಲ್ವ ನಿನಗೆ? ನನ್ನ ಡ್ಯಾಡಿಯ ಮಗಳಿಗಾಗಿ ಅಷ್ಟೂ ಮಾಡುವ ಮನಸ್ಸಿಲ್ವಾ?''

''ಹಾಗಲ್ಲ ಮಧು, ದುಡುಕಬೇಡ... ಅವಳ ಮನಸ್ನಲ್ಲಿ ಏನಿದೆ ಅಂತ ತಿಳಕೋ... ಅವಳ ಬಾಳನ್ನು ಹಾಳುಮಾಡಬೇಡ ದಯವಿಟ್ಟು...''

''ಏನಂದೆ? ಅವಳ ಅಣ್ಣನಾಗಿ ನಾನು ಅವಳ ಬಾಳನ್ನು ಹಾಳು ಮಾಡ್ತೀನಾ? ನಿಮ್ಮಂಥೋರಿಗೆ ಸಲುಗೆ ಕೊಟ್ಟಿದ್ದು ನಮ್ಮ ತಪ್ಪು... ಡ್ಯಾಡಿ ನಿನ್ನ ಮೇಲೆ ಇಟ್ಟ ವಿಶ್ವಾಸಕ್ಕೆ, ನೀನು ಅವರ ಸ್ವಂತ ಮಗನಿಗೇ ಇಂತಹ ಮಾತುಗಳನ್ನಾಡ್ತೀಯಲ್ಲ.''

''ಸಾರಿ... ಮಧುಕರ. ನನ್ನ ಮಾತಿನ ಅರ್ಥ ಅದಲ್ಲ. ಧ್ರುವನ್ನ ಅವಳು ಇಷ್ಟಪಟ್ಟರೆ ಮಾತ್ರ ಮದುವೆ ಮಾತನ್ನು ಮುಂದುವರೆಸು. ದಯವಿಟ್ಟು ಬಲವಂತ ಮಾಡಬೇಡ. ಅಪ್ಪಾಜಿ ಬದುಕಿದ್ದಿದ್ದರೆ, ಅವರು ಖಂಡಿತಾ ಮಾಲಾಳ ಮಾತಿಗೆ ಬೆಲೆ ಕೊಡುತ್ತಿದ್ದರು.''

''ನಿನ್ನ ಅಪ್ಪಾಜಿ ಏನು ಮಾಡುತ್ತಿದ್ದರು ಅಂತ ನನಗೆ ಗೊತ್ತು. ಅಂತಸ್ತು ಅಂದರೆ ಏನೂಂತ ಅವರಿಗೆ ಗೊತ್ತಿರಲೇ ಇಲ್ಲ. ಅಡಿಗೆಯವರನ್ನ, ಕೆಲಸದವರನ್ನೆಲ್ಲಾ ತಮ್ಮವರು ಅಂತ ತಿಳಿದುಕೊಂಡು, ಆಸ್ತಿಯಲ್ಲಿ ಪಾಲು ಕೊಡುವಷ್ಟು ಉದಾರಿಗಳಾಗಿ ಬಿಟ್ಟಿದ್ದರು. ಆದರೆ ನಾನು ಅಂಥೋನಲ್ಲ. ಅಂತಸ್ತು ನೋಡಿಯೇ ಮಾಲಾಳ ಮದುವೆ ಗೊತ್ತು ಮಾಡಿರುವುದು...''

''ನಿಮ್ಮ ಡ್ಯಾಡಿ ಮಾಡಿದ ತಪ್ಪನ್ನು ನಾನು ಸರಿಪಡಿಸಿದೀನಲ್ಲ. ಇನ್ನು ಮತ್ತೆ ಮತ್ತೆ ಆ ಮಾತೇಕೆ...?''

''ಅದನ್ನೆಲ್ಲಾ ಮರೆಯೋಕೆ ಆಗುತ್ತಾ ಭಾರ್ಗವ? ನಿನ್ನ ತಾಯಿಯ ಉಪಕಾರವನ್ನು ತೀರಿಸೋಕೆ ಅಂತ, ನಿನಗೂ ಆಸ್ತಿಯಲ್ಲಿ ಸಮಪಾಲು ಬರೆದಿದಾರಲ್ಲ, ಇದಕ್ಕಿಂತ ದುರಂತ ಬೇಕಾ? ಒಂದೋ ಡ್ಯಾಡಿಗೆ ತಲೆ ಸರಿ ಇರಲಿಲ್ಲ ಅಥವಾ ನೀನೇ ಏನಾದರೂ ಕೆಡಿಸಿರ ಬೇಕು.''

''ಸಾಕು ಮಧುಕರ ಸಾಕು... ನನ್ನ ಸಹನೆಗೂ ಒಂದು ಮಿತಿ ಇದೆ. ನೀನು ನಿಮ್ಮ ಡ್ಯಾಡಿಗೆ ತಕ್ಕ ಮಗನಲ್ಲ. ಅವರು ಒಂದು ದಿನವೂ ಹೀಗೆಲ್ಲಾ ಕೀಳಾಗಿ ಮಾತನಾಡಿ

ದವರಲ್ಲ. ಅವರ ಋಣಭಾರಕ್ಕೆ ತಲೆಬಾಗಿ ನಾನು ನಿನ್ನೊಂದಿಗೆ ಇದೀನಿ... ಇಲ್ಲದಿದ್ದರೆ ಎಂದೋ ಹೊರಟುಹೋಗ್ತಿದ್ದೆ.''

''ನಿನ್ನ ಅಪ್ಪಾಜಿ ಬದುಕಿಲ್ಲ... ಅವರ ಆಸ್ತಿಯಲ್ಲಿ ಪಾಲು ನಿನಗೆ ಬೇಕಿಲ್ಲ. ನನ್ನ ಜೊತೆ ನಿನಗೆ ಸರಿಹೋಗುಲ್ಲ... ಆದರೂ ನೀನು ನಮ್ಮಗಳ ಜೊತೇನೇ ಇದೀಯ... ಗಂಡಸಾದವನು ಹೇಳೋ ಮಾತಾ ಇದು.? ಯಾವ ಋಣ? ಯಾವ ಉಪಕಾರ...? ಈಗ ನಾವಿಬ್ಬರೂ ಮೆಜಾರಿಟಿಗೆ ಬಂದಿದೀವಿ. ನಮ್ಮನ್ನು ನಾವು ನೋಡಿಕೊಳ್ಳಬಲ್ಲೆವು. ಆದರೂ ನೀನು ನಮ್ಮೊಂದಿಗೇ ಇದೀಯ... ಯಾಕೆ ಅಂತ... ಇನ್ನು ಯಾವ ಋಣ ಬಾಕಿ ಇದೆ? ಯಾವ ಆಸೆ? ಹುಂ...''

''ನಾನು ನಿನಗೋಸ್ಕರವಾಗಲೀ ಅಥವಾ ನಿನ್ನ ಆಸ್ತಿಯ ಆಸೆಗಾಗಲೀ ಇಲ್ಲ. ಮಾಲಾಳಿಗೋಸ್ಕರ ಇದೀನಿ... ಅವಳಿಗೋಸ್ಕರ ಇರ್ತೀನಿ...''

''ಅವಳು ನನ್ನ ಒಡಹುಟ್ಟಿದ ತಂಗಿ. ಅವಳ ಮೇಲೆ ನಿನಗೆ ಯಾವ ಅಧಿಕಾರವೂ ಇಲ್ಲ. ಅವಳಿಗೋಸ್ಕರ ನಾನು ಅಣ್ಣ ಇದೀನಲ್ಲ... ಇನ್ನು ನಿನ್ನ ಅಗತ್ಯವಿಲ್ಲ.''

''ವ್ಹಾ... ಅಂತೂ ಕಡೆಗೂ ಈ ಮಾತುಗಳು ನಿನ್ನ ಬಾಯಿಂದ ಬಂತು. ನಿನಗೆ ನಾನು ಬೇಡವಾಗಿರಬಹುದು. ಆದರೆ ಮಾಲಾಳಿಗೆ ನಾನು ಬೇಕು... ಅವಳಿಗೆ ನನ್ನ ಅಗತ್ಯವಿದೆ...''

''ಧ್ರುವನ ಹೆಂಡತಿಯಾಗಿ ಹೋಗೋಳಿಗೆ ಯಾರ ಅಗತ್ಯವೂ ಇಲ್ಲ. ನೀನೇನು ಅವಳ ಬಾಡಿಗಾರ್ಡೋ..? ಅಥವಾ ಗುಲಾಮನೋ...?''

''ನಾನು ಅವಳಿಗೆ ಏನು ಅನ್ನೋದನ್ನ ಅವಳ ಬಾಯಿಂದಲೇ ಕೇಳಿ ತಿಳಿದುಕೋ... ನಿನ್ನಂಥೋನಿಗೆ ಅವಳೇ ಸರಿ'' ಎಂದು ಒರಟಾಗಿ ಹೇಳಿ ಭಾರ್ಗವ ಹೊರಬಂದ. ಅತ್ತಿತ್ತ ಓಡಾಡುತ್ತಿದ್ದವರು ಕುತೂಹಲದಿಂದ, ಸಂಶಯದಿಂದ ಅವರಿಬ್ಬರ ಮಾತುಗಳನ್ನು ಆಲಿಸಲು ಪ್ರಯತ್ನಿಸಿದ್ದರು. ಭಾರ್ಗವ ಯಾರ ಕಡೆಗೂ ನೋಡದೇ ಹೊರಬಂದ. ಯಾಕೋ ಏನೋ ಬೈಕ್ ಹತ್ತುವ ಮನಸ್ಸಾಗಲಿಲ್ಲ. ಮನೆಗೂ ಹೋಗುವ ಇಚ್ಛೆಯಾಗಲಿಲ್ಲ. ಆ ಮನೆಯಲ್ಲಿ ತನಗೆ ಜಾಗವಿಲ್ಲ ಎಂದು ತಿಳಿದೂ ಹೋಗುವುದು ಹೇಗೆ? ಆದರೆ ತಾನು ಸಮಯಕ್ಕೆ ಸರಿಯಾಗಿ ಮನೆಗೆ ಹೋಗದಿದ್ದರೆ ಮಾವನಿಗೆ ಆತಂಕವಾಗುತ್ತದೆ. ಮಾಲಾ ಚಡಪಡಿಸುತ್ತಾಳೆ. ಕಡೆಗೆ ಯೋಚಿಸಿ ಟೆಲಿಫೋನ್ ಬೂತಿನಿಂದ ಮನೆಗೆ ಫೋನು ಮಾಡಿದ. ಭಟ್ಟರೇ ಫೋನನ್ನೆತ್ತಿದರು. ಅವರಿಗೆ ಸಂಕ್ಷಿಪ್ತವಾಗಿ ನಡೆದ ಮಾತುಕತೆಗಳನ್ನು ತಿಳಿಸಿ, ಮಾರ್ಕೆಟ್ಟಿನ ಬಳಿಗೆ ಬಂದು ತನ್ನನ್ನು ಕಾಣಬೇಕೆಂದು ಹೇಳಿದ. ಭಟ್ಟರ ಮುಖ ಕಪ್ಪಿಟ್ಟುಹೋಯಿತು. ಸಾವರಿಸಿಕೊಂಡು, ಮುಖದ ಮೇಲಿನ ಬೆವರನ್ನು ಒರೆಸಿಕೊಳ್ಳುತ್ತಾ ಮಾರ್ಕೆಟ್ಟಿಗೆ ಹೊರಟರು.

ಬ್ಯಾಂಕಿನ ಕಟ್ಟಡದ ಬಳಿ ನಿಂತಿದ್ದ ಭಾರ್ಗವ ಭಟ್ಟರನ್ನು ಕಂಡು ಬಳಿಗೆ ಬಂದ.

ವ್ಯಥೆ ಉದ್ವೇಗಗಳಿಂದ ಭಟ್ಟರು ಅವನನ್ನು ತಬ್ಬಿಕೊಂಡು ಅತ್ತುಬಿಟ್ಟರು. ಭಾರ್ಗವನೇ ಅವರಿಗೆ ಸಮಾಧಾನ ಹೇಳಿದ.

''ಮಾವಾ, ನೀನೇನೂ ಚಿಂತೆ ಮಾಡಬೇಡ. ಆದದ್ದೆಲ್ಲಾ ಒಳ್ಳೇದೇ ಆಯ್ತು. ನನಗೂ ಇವನ ಹಂಗು ಬೇಡ ಎನ್ನಿಸಿದೆ... ಬೇರೆ ಕೆಲಸಕ್ಕೆ ಸೇರಿಕೊಂಡು ಸಂಪಾದಿಸ್ತೀನಿ... ಆದರೆ ಈಗ ನಿನ್ನಿಂದ ಸಹಾಯವಾಗಬೇಕು... ನನಗೆ ಸ್ವಲ್ಪ ಸಮಯ ಬೇಕು. ಅಲ್ಲಿಯವರೆಗೂ ನೀನು ಮಧೂನ್ನ ಏನನ್ನೂ ಕೇಳಬೇಡ. ಹಾಗೇ ಮಾಲಾ ಕಡೆ ನಿಗಾ ಇರಲಿ. ನಾನು ವಾಪಸ್ಸು ಬರೋವರೆಗೂ ನೀನು ಅವಳಿಗೆ ಯಾವುದೇ ಆಪತ್ತು ಬರದಂತೆ ನೋಡಿಕೊಳ್ಳಬೇಕು.''

''ಅಂದ್ರೆ... ನೀನು ಮನೆಗೆ ಬರುಲ್ವಾ?''

''ಹೌದು ಮಾವಾ, ಇಷ್ಟೆಲ್ಲಾ ಮಾತುಗಳನ್ನು ಕೇಳಿದ ಮೇಲೆ ಯಾಕೋ ಏನೋ ಆ ಮನೆಗೆ ಬರುವ ಮನಸ್ಸೇ ಆಗ್ತಿಲ್ಲ. ನನಗೂ ಸ್ವಾಭಿಮಾನವಿದೆ. ಅಡಿಗೆಯವಳ ಮಗ ಅಂತ ಹಂಗಿಸಿ ನುಡಿಯೋನ ಎದುರಿಗೆ ತಿರುಗಾಡೋಕೆ ಮನಸ್ಸು ಒಪ್ತಿಲ್ಲ. ಎಲ್ಲಾದ್ರೂ ಹೋಟೆಲ್ಲಿನಲ್ಲಿ ರೂಂ ಮಾಡಿಕೊಂಡಿರ್ತೀನಿ. ಕಷ್ಟಪಟ್ಟು ಪ್ರಾಮಾಣಿಕನಾಗಿ ಕೆಲಸ ಮಾಡುವವನಿಗೆ ಯಾವುದಾದರೂ ಕೆಲಸ ಸಿಕ್ಕೇ ಸಿಗುತ್ತದೆ.''

''ಎಂಥಾ ಸ್ಥಿತಿ ಬಂತಲ್ಲೋ ಭಾರ್ಗವ... ಈ ತಾಪತ್ರಯಗಳೆಲ್ಲಾ ಬೇಡವೇ ಬೇಡ. ನಮ್ಮೂರಿಗೇ ಹೊರಟು ಹೋಗೋಣ ಅಥವಾ ರಾಯರು ನಿನಗೆ ಕೊಟ್ಟಿದಾರಲ್ಲ, ಆ ಜಮೀನಿನಲ್ಲಿ ವ್ಯವಸಾಯ ಮಾಡೋಣ...''

''ಬೇಡ ಮಾವ, ಆ ಆಸ್ತಿಯಲ್ಲಿ ನನಗೆ ಯಾವ ಹಕ್ಕೂ ಇಲ್ಲ. ಅದು ಅವರಿಗೇ ಸೇರಬೇಕಾದ್ದು. ಅದು ಅಪ್ಪಾಜಿಯ ದೊಡ್ಡ ಗುಣ. ನನಗೆ ಪ್ರೀತಿಯಿಂದ ಕೊಟ್ಟಿದ್ದರು. ಆದರೆ ಅದನ್ನು ಅನುಭವಿಸುವ ಹಕ್ಕು ನನಗಿಲ್ಲ. ಅದಕ್ಕೇ ನಾನು ನನ್ನ ಪಾಲಿನ ಆಸ್ತಿಯನ್ನೆಲ್ಲಾ ಮಧುಕರನಿಗೇ ವಾಪಸ್ಸು ಬರೆದುಕೊಟ್ಟುಬಿಟ್ಟೆ...''

''ಆಂ!... ಯಾಕೋ ಹೀಗ್ಮಾಡ್ದೆ? ನನಗೆ ಒಂದ್ಮಾತೂ ಹೇಳದೇ...''

''ಮಧುಕರ ಆಡಿದ ಮಾತನ್ನೆಲ್ಲಾ ಕೇಳಿದ್ರೆ, ನೀನೇ ನನಗೆ ಈ ಸಲಹೆಯನ್ನು ಕೊಡುತ್ತಿದ್ದೆ. ಬೇಡ ಮಾವ, ನನಗೆ ಈ ಹಂಗಿನ ಅನ್ನ ಬೇಡ. ಸ್ವತಂತ್ರವೋ ಸ್ವರ್ಗ ಲೋಕವೋ.. ಅನ್ನುವಂತೆ ನನ್ನ ಅನ್ನವನ್ನು ನಾನೇ ಸಂಪಾದಿಸಿಕೊಳ್ತೀನಿ.''

''ಹೋಗಲಿ ಬಿಡು. ಒಂಥರಕ್ಕೆ ಒಳ್ಳೇದೇ ಆಯ್ತು. ನಾನೂ ನಿನ್ನ ಜೊತೆಗೇ ಬಂದುಬಿಡ್ತೀನಿ... ತಿಳಿದೂ ತಿಳಿದೂ ಅವಮಾನ ಮಾಡಿದವನ ಮನೇಲಿ ಇರೋದು ನನಗೂ ಸಮ್ಮತವಲ್ಲ.''

''ಬೇಡ ಮಾವ. ಸದ್ಯಕ್ಕೆ ನೀನು ಅಲ್ಲೇ ಇರು. ಇಲ್ಲದಿದ್ದರೆ ಮಾಲಾ ಒಂಟಿಯಾಗಿ ಬಿಡ್ತಾಳೆ... ಅವಳ ಬಾಳು ನರಕವಾಗುತ್ತದೆ.''

''ಆದರೇನು? ಅವನು ಅವನ ಹಠ ಬಿಡುಲ್ಲವಲ್ಲ. ಹೋಗಲಿ ನಮ್ಮ ಜೊತೆಯೇ ಅವಳನ್ನು ಕರೆದುಕೊಂಡು ಹೋಗೋಣ ಅಂತಂದ್ರೆ... ನಮಗೇ ಈಗ ಪರದಾಟ...''

''ಅದಕ್ಕೂ ಒಂದು ಸಮಯ ಬರುತ್ತದೆ ಮಾವ... ಮಾಲಾಳಿಗೆ ನಾನು ಕೆಲವು ದಿನಗಳ ಮಟ್ಟಿಗೆ ಟೂರ್ ಹೋಗಿದೀನಿ ಅಂತ ಹೇಳು... ಏನೇ ಆದರೂ ಅವಳು ಧ್ರುವನ್ನ ಒಪ್ಪದಿರುವಂತೆ ಹೇಳು. ಅವನನ್ನು ಮದುವೆಯಾದರೆ ಅವಳು ಖಂಡಿತಾ ಸುಖ ವಾಗಿರುವುದಿಲ್ಲ.''

''ಹೌದಪ್ಪಾ. ಅದು ನನಗೂ ಗೊತ್ತು. ಆದರೆ ನಾನು ಹಾಗೆ ಹೇಳಿಕೊಟ್ಟರೆ, ಮಧು ನನ್ನನ್ನೂ ಮನೆಯಿಂದ ಹೊರಗೆ ಹಾಕ್ತಾನೆ... ಆಗ ಆ ಹುಡುಗಿಯ ಗತಿ?''

''ಅವಳೇನೂ ಹೆದರಬೇಕಾಗಿಲ್ಲ ಮಾವ. ಹೇಗೂ ಆ ಮನೆ ಅವಳ ಹೆಸರಿನಲ್ಲಿದೆ. ಅವನನ್ನೇ ಆ ಮನೆಯಿಂದ ಹೊರ ಹಾಕಬಹುದು. ನಾನು ಮತ್ತೆ ಫೋನು ಮಾಡ್ತೀನಿ. ಈಗ ನೀನು ಹೋಗು. ಅವಳು ಒಬ್ಬಳೇ ಇರುತ್ತಾಳೆ.''

''ನೀನಿಲ್ಲದೇ ನಾನು ಹೇಗೆ ಇರಲೋ ಭಾರ್ಗವ...''

''ಒಂದು ಸ್ವಲ್ಪ ದಿನಗಳು ಅಷ್ಟೇ... ನನಗೋಸ್ಕರ, ಮಾಲಾಗೋಸ್ಕರ...''

''ಆಗಲಪ್ಪಾ... ನೀನು ಆಗಾಗ ಫೋನು ಮಾಡ್ತಿರು... ಮಧು ಏನು ಗಲಾಟೆ ಮಾಡ್ತಾನೋ...''

''ಇವತ್ತಂತೂ ಏನೂ ಮಾಡುಲ್ಲ. ಏನೂ ನಡೆಯದೆ ಇದ್ದವನಂತೆ ನಟಿಸುತ್ತಾನೆ. ಮಾಲಾ, ಧ್ರುವನ್ನ ಒಪ್ಪದೇ ಇದ್ದರೆ ಆಗ ಶುರುವಾಗುತ್ತೆ.''

''ನನಗೆ ಅದೇ ಭಯ. ಇನ್ನೊಂದೆರಡು ದಿನಗಳ ನಂತರ ಏನು ಕಾದಿದೆಯೋ ಅಂತ.''

''ಏನೂ ಭಯ ಪಡಬೇಡ ಮಾವಾ, ನಾನಿದೀನಿ. ನಾನು ಮಾಲಾಳಿಗೂ ಫೋನು ಮಾಡ್ತೀನಿ.''

''ಹುಂ, ಸರಿ. ತಗೋ ಇಟ್ಟುಕೋ ಸ್ವಲ್ಪ ದುಡ್ಡಿದೆ ನನ್ನ ಹತ್ತಿರ'' ಎನ್ನುತ್ತಾ ಕೆಲವು ನೋಟುಗಳನ್ನು ಕೊಡಲು ಹೋದರು.

''ಬೇಡ. ನಿನ್ನ ಹತ್ತಿರ ಹಣ ಇರಲಿ. ನನ್ನ ಅಕೌಂಟ್‌ನಲ್ಲಿ ದುಡ್ಡಿದೆ. ನಾನು ಹೇಗೋ ಮಾಡಿಕೊಳ್ತೀನಿ. ನಾನಿನ್ನು ಬರ್ಲಾ? ನಾನು ಹೇಳಿದ್ದನ್ನು ಮರೆಯಬೇಡ. ಮಾಲಾಳನ್ನು ಚೆನ್ನಾಗಿ ನೋಡ್ಕೋ...'' ಎಂದು ಅವನು ಒತ್ತಿ ಒತ್ತಿ ಹೇಳಿದಾಗ ಭಟ್ಟರು ಭಾರ್ಗವನ ಕೈ ಹಿಡಿದರು.

''ನಿಜ ಹೇಳು ಭಾರ್ಗವ... ಮಾಲಾಳನ್ನು ನೀನು ಪ್ರೀತಿಸ್ತಿದೀಯಾ ಅಲ್ವಾ! ಅದನ್ನು ತಪ್ಪು ಅಂತ ಹೇಳಲಾರೆ... ಆದರೆ ಮಧು ಖಂಡಿತಾ ಒಪ್ಪುವುದಿಲ್ಲ ಈ ಸಂಬಂಧಕ್ಕೆ...''

''ನನ್ನ ಮನಸ್ಸಿನಲ್ಲಿ ಈ ಆಸೆಯನ್ನು ಹೊತ್ತಿಸಿದವಳೇ ಮಾಲಾ... ನಿನಗೇ ಗೊತ್ತಲ್ಲ.. ನಾನು ಎಂದಾದ್ರೂ ಆ ರೀತಿ ವರ್ತಿಸಿದ್ನಾ?''

''ಇಲ್ಲ. ಆದರೆ ಈ ಹುಡುಗಿಗೇಕೆ ಇಂತಹ ಆಸೆ ಹುಟ್ಟಿಕೊಂಡಿತು? ಸ್ವಂತ ಅಣ್ಣನನ್ನು ಎದುರುಹಾಕಿಕೊಂಡು ನಿನ್ನೊಡನೆ ಮದುವೆಯಾಗುವ ಧೈರ್ಯ ಇದೆಯಾ ಆ ಮಗೂಗೆ...''

''ಅವಳು ನನ್ನನ್ನೇ ನಂಬಿದ್ದಾಳೆ ಮಾವ... ನನಗೂ ಅವಳ ಕೈಬಿಡಬಾರದು ಅಂತ ಆಸೆ.. ಆದರೆ ಈಗಲೇ ಮಧೂಗೆ ವಿಷಯ ಗೊತ್ತಾಗಬಾರದು. ಅವನ ಅಂತಸ್ತಿಗೆ ತಕ್ಕವನಲ್ಲ ನಾನು. ಈ ಧ್ರುವ ಒಬ್ಬ ಮಧ್ಯೆ ಬರದೇ ಇದ್ದಿದ್ದರೇ... ಆ ಮಾತೇ ಬೇರೆ ಆಗ್ತಿತ್ತು.''

''ಬೀಸೋ ದೊಣ್ಣೆ ಏಟನ್ನು ತಪ್ಪಿಸಿಕೊಂಡರೆ, ಸಹಸ್ರ ವರ್ಷ ಆಯುಸ್ಸು ಅಂತಾರೆ... ಈಗ ಈ ಗೊಂದಲದಿಂದ ಮೊದಲು ಪಾರಾಗಬೇಕು. ಸಮಯ ಬಂದಾಗ ನಾನೇ ಮಧು ಹತ್ತಿರ ಮಾತನ್ನಾಡ್ತೀನಿ.''

''ನೀನು ನನ್ನ ಪರವಾಗಿದೀಯಲ್ಲ. ನನಗೆ ಅದೇ ಧೈರ್ಯ... ಆದರೆ ಮಾಲಾಳ ಹತ್ತಿರ ಮಾತ್ರ ಏನನ್ನೂ ಹೇಳಬೇಡ'' ಎನ್ನುತ್ತಾ ಅಲ್ಲಿಂದ ಸರಿದುಹೋದ.

ಊಟದ ಸಮಯವಾದರೂ ಭಾರ್ಗವ ಮನೆಗೆ ಬರದಿದ್ದಾಗ ಮಾಲಾ ಭಟ್ಟರನ್ನು ಕೇಳಿದಳು. ''ಯಾಕೋ ಈ ಭಾರ್ಗವ ಇಷ್ಟು ಹೊತ್ತಾದ್ರೂ ಬರಲಿಲ್ಲ. ಲೇಟಾಗುತ್ತೆ ಅಂತ ಹೇಳಿದ್ನಾ?''

''ಹುಂ, ಆಫೀಸ್ನಿಂದ ಫೋನು ಮಾಡಿದ್ದ. ಯಾವುದೋ ಮೀಟಿಂಗ್‌ನ ಅಟೆಂಡ್ ಮಾಡೋಕೆ ಅಂತ ಡೆಲ್ಲಿಗೆ ಹೋಗಿ ಬರ್ತಾನಂತೆ. ಒಂದೆರಡು ದಿನಗಳಾಗಬಹುದು ಅಂತ.''

''ಡೆಲ್ಲೀಗಾ? ಅದೇನು ಇದ್ದಕ್ಕಿದ್ದ ಹಾಗೆ... ಮುಂಚೆ ಎಂದೂ ಹೋಗಿಲ್ಲ. ಮಧೂನೇ ಹೋಗ್ತಿದ್ದ.''

''ಮಧು ಹೇಗೆ ಹೋಗ್ತಾನೆ? ಅವನ ಫ್ರೆಂಡು, ಅವನ ತಾಯಿ ಬರ್ತಾ ಇದಾರಲ್ಲ... ಅದಕ್ಕೆ ಭಾರ್ಗವನ್ನ ಕಳಿಸಿರಬಹುದು.''

''ಅವನು ಹೋಗು ಅಂದ್ರೆ ಇವನು ಹೋಗಿ ಬಿಡೋದಾ? ಇವನಿಗೆ ಸ್ವಂತ ಬುದ್ಧಿಯೇ ಇಲ್ವಾ? ನನಗೆ ಇವನಿಲ್ಲದೇ ಇದ್ದರೆ ಬೇಸರವಾಗುತ್ತೆ.''

''ಗಂಡಸು ಅಂತಂದ ಮೇಲೆ ಹೊರಗೆ ಟೂರ್ ಹೋಗಲೇಬೇಕಾಗುತ್ತೆ. ಅದಕ್ಕೆಲ್ಲ ಬೇಸರ ಮಾಡಿಕೊಂಡರೆ ಹೇಗೆ...?''

''ನಾಳೆನಾದ್ರೂ ಇವನಿದ್ದಿದ್ದರೆ ಚೆನ್ನಾಗಿತ್ತು. ಈ ಮಧು ಒಬ್ಬ... ಈಗಲೇ ಕಳಿಸ ಬೇಕಾಗಿತ್ತಾ ಇವನನ್ನಾ?'' ಅವಳು ಗೊಣಗಿದಳು. ಭಟ್ಟರು ಸುಮ್ಮನೆಯೇ ಇದ್ದರು.

ಮಾಲಾ ಊಟ ಮುಗಿಸಿ ತನ್ನ ರೂಮಿಗೆ ಹೋದಳು. ನಂತರ ಸ್ವಲ್ಪ ಸಮಯದೊಳಗೆ ಮಧು ಊಟಕ್ಕೆ ಬಂದ.

''ಮಾಲಂದು ಊಟ ಆಯ್ತಾ ಭಟ್ಟರೇ...'' ಎಂದು ಪ್ರಶ್ನಿಸಿ ತಟ್ಟೆಗೆ ಕೈ ಹಾಕಿದ. ಭಾರ್ಗವ ಎಲ್ಲಿ ಎಂದು ಅವನೂ ಕೇಳಲಿಲ್ಲ. ಇವರೂ ಏನನ್ನೂ ಆಡಲಿಲ್ಲ. ಆ ರಾತ್ರಿ ಭಟ್ಟರಿಗೆ ಊಟ ಸೇರಲಿಲ್ಲ. ಮನಸ್ಸು ಕದಡಿ ಹೋಗಿತ್ತು. ರಾಯರ ಕಾಲದಲ್ಲಿ ಹೇಗಿತ್ತು? ಇವನ ಕಾಲದಲ್ಲಿ ಮರ್ಯಾದೆಯೇ ಇಲ್ಲದ ಹಾಗಾಯ್ತಲ್ಲ ಅಂತ ನೊಂದುಕೊಂಡರು.

ಮಧ್ಯರಾತ್ರಿಯ ಹೊತ್ತಿನಲ್ಲಿ ಮಾಲಾಳಿಗೆ ಎಚ್ಚರವಾಯಿತು. ಭಾರ್ಗವ ಮನೆಯಲ್ಲಿಲ್ಲ, ನಾಳೆ ಧ್ರುವ ಬರ್ತಾನಂತೆ... ಗೊತ್ತಿದ್ದೂ ಭಾರ್ಗವ ಡೆಲ್ಲಿಗೆ ಹೋಗಲು ಒಪ್ಪಬಾರದಾಗಿತ್ತು. ಮನೆಗೆ ಬರಲಿ, ಚೆನ್ನಾಗಿ ಬುದ್ಧಿ ಕಲಿಸ್ತೇನಿ ಅಂತ ಬೈದುಕೊಂಡರೂ, ಮೊಟ್ಟ ಮೊದಲಬಾರಿಗೆ ತಾನು ಒಂಟಿ ಎಂಬ ಅನುಭವ ಬಂತು. ಅಳು ಒತ್ತಿಕೊಂಡು ಬಂದಿತ್ತು. ತಡೆಯಲಾರದೇ ಬಿಕ್ಕಿ ಬಿಕ್ಕಿ ಅತ್ತಳು. ಅವಳ ಅಳು ಯಾರಿಗೂ ಕೇಳಿಸಲಿಲ್ಲ.

ಬೆಳಿಗ್ಗೆ ಮನೆಕೆಲಸದವಳು ಬಂದು ಬೆಲ್ ಮಾಡಿದಾಗ, ನಿತ್ಯದಂತೆ ಭಾರ್ಗವ ಬಾಗಿಲನ್ನು ತೆಗೆಯಲಿಲ್ಲ. ಅವಳು ಮತ್ತೆ ಮತ್ತೆ ಬೆಲ್ ಮಾಡಿದಾಗ ಮಧುಕರನೇ ಎದ್ದು ಬಂದು ಬಾಗಿಲು ತೆಗೆದ. ಹೊರಗೆ ಚೆನ್ನಾಗಿ ಬೆಳಕಾಗಿತ್ತು. ಗಂಟೆ ಆರೂವರೆಯಾಗುತ್ತಾ ಬಂದಿತು. ಅವಳು ಸಂಕೋಚದಿಂದ ಒಳಗೆ ಬಂದಳು. ಅಷ್ಟರಲ್ಲಿ ಭಟ್ಟರೂ ಬಂದಿದ್ದರು.

''ಅವಳು ಬೆಲ್ ಮಾಡ್ತಾನೇ ಇದಾಳೆ. ಯಾರಾದ್ರೂ ಬಾಗಿಲು ತೆಗೀಬಾರದಾ?'' ಅಸಹನೆಯಿಂದ ಕೇಳಿದ.

''ದಿನಾ ಅದು ಭಾರ್ಗವನ ಕೆಲಸ... ಅದಕ್ಕೇ ಮರೆತುಹೋಯಿತು.''

''ಇಷ್ಟು ಮುಂಚೇನೇ ಎದ್ದು ಅವನೆಲ್ಲಿಗೆ ಹೋದ?''

''ಅವನು ನೆನ್ನೆ ರಾತ್ರಿ ಮನೆಗೇ ಬರಲಿಲ್ಲ... ನಿನಗೇನಾದ್ರೂ ಹೇಳಿದ್ನಾ...?''

''ಏನು? ಮನೆಗೇ ಬಂದಿಲ್ವಾ!'' ಒಂದು ಗಳಿಗೆ ಭಯದಿಂದ ನಡುಗಿದ. ''ಈಗ ಹೇಳ್ತಾ ಇದೀರಲ್ಲ ಭಟ್ಟರೇ... ನಿಮಗೂ ಹೇಳದೇ, ಎಲ್ಲಿಗೆ ಹೋದ?..''

''ಈಗ ಏನು ಮಾಡೋದು ಅಂತ ನೀನೇ ಹೇಳಪ್ಪಾ...''

''ಎಲ್ಲೋ ಸೆಕೆಂಡ್ ಷೋ ಸಿನಿಮಾಕ್ಕೆ ಹೋಗಿ, ಹೊತ್ತಲ್ಲದ ಹೊತ್ನಲ್ಲಿ ಮನೆಗೇಕೆ ಬರೋದು ಅಂತ ಎಲ್ಲೋ ಸ್ನೇಹಿತರ ಮನೆಗೆ ಹೋಗಿರಬೇಕು. ಬರ್ತಾನೆ ಬಿಡಿ.'' ಹಾಗೆ ಭಟ್ಟರಿಗೆ ಹೇಳಿದರೂ, ಮನ ತವಕದಿಂದ ಬೆದರಿತ್ತು. ನೆನ್ನೆ ನಡೆದ ಮಾತುಕತೆಗಳಿಗೆ ಬೇಸರಪಟ್ಟುಕೊಂಡು, ಏನಾದರೂ ಅಪಾಯ ಮಾಡಿಕೊಂಡಿದ್ದರೇ... ಹೋಗಲಿ ಕಾಟ ಕಳೀತು ಅಂತ ಸುಮ್ಮನಾಗಬಹುದು. ಆದರೆ ಈ ಭಟ್ಟರಿಗೆ ಏನು ಉತ್ತರ ಹೇಳುವುದು? ಕಳ್ಳ ದೃಷ್ಟಿಯಿಂದ ಅವರನ್ನೇ ನೋಡಿದ. ಭಟ್ಟರಿಗೆ ಬೇಸರವಾಗಿತ್ತು.

''ಏನೂ ತಿಳಿಯದವನಂತೆ ಸುಮ್ಮನಿದಾನಲ್ಲ... ನನಗೆ ನಡೆದ ವಿಷಯವನ್ನೇಕೆ ಹೇಳುವುದಿಲ್ಲ.. ಇಷ್ಟೇನಾ ಇವನ ಕೃತಜ್ಞತೆ...?'' ಜಿಗುಪ್ಸೆಗೊಂಡರು.

''ಭಟ್ಟರೇ ನೀವು ಆತಂಕ ಪಟ್ಟುಕೋ ಬೇಡಿ. ನಾನು ಆಫೀಸಿಗೆ ಫೋನು ಮಾಡಿ, ಅವನೇದಾರೂ ಗೆಸ್ಟ್ ಹೌಸಿನಲ್ಲಿ ಉಳಿದುಕೊಂಡಿದಾನಾ ಅಂತ ವಿಚಾರಿಸ್ತೀನಿ. ನೀವು ಸ್ವಲ್ಪ ಮಾಲಾಳ ಕಡೆ ಗಮನ ಕೊಡಿ. ಇವತ್ತು ಅವರುಗಳು ಬರ್ತಾರೆ. ಅವಳಿಗೆ ಸ್ವಲ್ಪ ಮಾಡ್ರನ್೯ ಆಗಿ ಡ್ರೆಸ್ ಮಾಡಿಕೊಳ್ಳುವಂತೆ ಹೇಳಿ. ಅವರುಗಳು ಬಾಂಬೆಯವರು... ಫ್ಯಾಷನ್ ಮಾಡೋರು...''

ಹೂಂ ಎನ್ನುವಂತೆ ಭಟ್ಟರು ತಲೆಯಾಡಿಸಿದರು ಇವತ್ತು ಭಾರ್ಗವನೂ ಇಲ್ಲ ತನಗೆ ಸಹಾಯಕರು ಯಾರೂ ಇಲ್ಲ. ಕೆಲಸದವಳನ್ನೇ ಸಂಜೆ ತನಕ ಮನೇಲಿರು ಅಂತ ಹೇಳಬೇಕೆಂದುಕೊಂಡರು. ಮಧು ಯಾರೊಡನೆಯೋ ಫೋನಿನಲ್ಲಿ ಮಾತಾಡುತ್ತಿದ್ದ. ಭಾರ್ಗವ ಗೆಸ್ಟ್ ಹೌಸಿಗೆ ಹೋಗಿಲ್ಲ ಎನ್ನುವುದು ತಿಳಿದಿದ್ದರೂ, ಮಧು ಇತ್ತ ತಿರುಗುವುದನ್ನೇ ಕಾದರು. ''ಭಾರ್ಗವ ಅಲ್ಲಿ ಇಲ್ಲವಂತೆ... ಎಲ್ಲರೂ ಸಮಯದಲ್ಲಿ ಕೈ ಕೊಡುವವರೇ... ಈಗೆಲ್ಲಿ ಹುಡುಕಿಸೋದು ಇವನನ್ನ?'' ಭಟ್ಟರು ಮಾತನಾಡದೇ ಅಡಿಗೆಮನೆ ಕಡೆ ತಿರುಗಿದರು.

''ನೀವೇ ಹೇಳಿ ಭಟ್ಟರೇ... ಹೀಗೆ ಮಾಡಬಹುದಾ ಇವನು? ಅಥವಾ ಹೇಳಿಯಾದರೂ ಹೋಗಬಾರದಾಗಿತ್ತಾ? ನನ್ನನ್ನ ಕೆಟ್ಟೋನನ್ನಾಗಿ ಮಾಡ್ತಾರೆ ಎಲ್ರೂ...'

ಭಟ್ಟರು ಅತ್ತ ತಿರುಗಿ ಕಣ್ಣೀರನ್ನು ಒರೆಸಿಕೊಂಡಿದ್ದನ್ನು ಕಂಡ.

''ಈಗ ನಿಮಗೇನಾಯ್ತು? ನಾನೇನಂದೆ? ಈ ಮನೇಲಿ ನನ್ನ ಮಾತನ್ನು ತಪ್ಪಾಗಿ ತಿಳಿಯೋರೇ ಎಲ್ಲಾ.. ಧ್ರುವ ಅವನ ತಾಯಿಯೊಡನೆ ಬರುವ ಪ್ರೋಗ್ರಾಂ ಇಲ್ಲದೇ ಇದ್ದಿದ್ದರೇ, ಇವನು ಎಲ್ಲೇ ಇದ್ದರೂ ಹೋಗಿ ಎಳೆದುಕೊಂಡು ಬರ್ತಿದ್ದೆ... ಭಾರ್ಗವನ್ನ ಎಲ್ರೂ ಹೊಗಳಿದ್ದೇ ಹೊಗಳಿದ್ದು... ಹೀಗೆ ನನ್ನ ಮುಖಕ್ಕೆ ಮಸಿ ಬಳಿಯುವಂತೆ ಮಾಡ್ತಾನೆ ಅಂತ ನಾನಂತೂ ಖಂಡಿತಾ ಅಂದುಕೊಂಡಿರಲಿಲ್ಲ...''

''ಅಂಥಾದ್ದೇನು ಮಾಡಿದ ಭಾರ್ಗವ.''

''ನೆನ್ನೆ ನನಗೂ ಇವನಿಗೂ ನಾಲ್ಕಾರು ಮಾತಿನ ಚಕಮಕಿ ನಡೆಯಿತು. ಅದಕ್ಕೆ ಇವಳೇ ಕಾರಣ. ಇವಳ್ಯಾಕೆ ಆಫೀಸಿಗೆ ಬರಬೇಕಾಗಿತ್ತು? ಇವಳ ಪರವಹಿಸಿ ಮಾತನಾಡಿದ ನನಗೆ ಸರಿ ಹೋಗಲಿಲ್ಲ. ನಾನೂ ಸ್ವಲ್ಪ ಖಾರವಾಗಿಯೇ ಮಾತನಾಡಿದೆ. ನೀವೇ ಹೇಳಿ ಭಟ್ಟರೆ, ಮಾಲಾಳ ಮೇಲೆ ನನ್ನ ಹಕ್ಕು ಇದೆಯೋ ಇಲ್ಲವೋ...?''

''ನಿನಗೆ ಹಕ್ಕು ಇಲ್ಲ ಅಂತ ಅಂದ್ನಾ ಭಾರ್ಗವ?''

''ಬಲವಂತವಾಗಿ ಮದುವೆ ಮಾಡೋ ಹಕ್ಕು ನನಗಿಲ್ಲ... ಧ್ರುವನ ಜೊತೆ ಇವಳು ಹ್ಯಾಪಿಯಾಗಿರುಲ್ಲ ಅಂತಂದ... ಧ್ರುವ ಮತ್ತು ಅವನ ತಾಯಿ ಬಂದು ನೋಡಿಕೊಂಡು ಹೋದ ಮಾತ್ರಕ್ಕೆ ಮದುವೇನೇ ನಡೆದ ಹಾಗಾಯ್ತೆ? ಅವರುಗಳು ಮೊದಲು ಒಪ್ಪಿದರೆ, ಆಮೇಲೆ ಮುಂದಿನ ಮಾತು... ಅಷ್ಟೂ ಅರ್ಥವಾಗುಲ್ಲವಲ್ಲ ಯಾರಿಗೂ...''

''ಒಂದು ವೇಳೆ ಒಪ್ಪಿಕೊಂಡು ಬಿಟ್ಟರೇ...''

''ತೆಗೆದು ಹಾಕುವಂಥಾದ್ದು ಏನಿದೆ? ಧ್ರುವ ಇವಳಿಗೆ ಎಲ್ಲಾ ರೀತಿಯಿಂದಲೂ ತಕ್ಕವನು. ಎಲ್ಲಾ ರೀತಿಯಿಂದಲೂ ನಮ್ಮ ಅಂತಸ್ತಿಗೆ ತಕ್ಕವರು. ಮಾಲಾ ಬೇಡ ಅನ್ನೋಕೆ ಯಾವ ಕಾರಣವೂ ಇಲ್ಲ. ಮಾತಾಡ್ತಾನೇ ಇದ್ದರೆ ಹೊತ್ತಾಗುತ್ತೆ. ನಾನು ಏರ್‌ಪೋರ್ಟ್‌ಗೆ ಹೋಗಬೇಕು. ಬೇಗ ಕಾಫಿ ತಿಂಡಿ ಕೊಡಿ.'' ಭಟ್ಟರನ್ನು ಅವಸರಿಸಿದ. ಭಟ್ಟರು ಮನದಲ್ಲೇ ಶೋಕಿಸುತ್ತಾ ಅಡಿಗೆಮನೆ ಕಡೆ ತೆರಳಿದರು. ಮರೆಯದೇ ಕೆಲಸದವಳಿಗೆ ಮಧ್ಯಾಹ್ನದ ವರೆಗೆ ಇರುವಂತೆ ಹೇಳಿದರು.

ಮಧುಕರನ ಕಾರು ಗೇಟನ್ನು ದಾಟಿ ರಸ್ತೆಗೆ ಇಳಿಯುತ್ತಿದ್ದಂತೆಯೇ ಫೋನು ರಿಂಗಾದ ಸದ್ದು ಕೇಳಿಸಿ, ಮಾಲಾ ಬಂದು ರಿಸೀವರ್‌ನೆತ್ತಿದಳು. ಅತ್ತಲಿಂದ ಭಾರ್ಗವನ ಧ್ವನಿ ಕೇಳಿ ಸಂತಸದಿಂದ ಚೀರಿದಳು.

''ಏನಾಯ್ತು?'' ಅತ್ತಲಿಂದ ಭಾರ್ಗವ ಆತಂಕದಿಂದ ಕೇಳಿದ.

''ಏನೂ ಇಲ್ಲ... ನೀನು ಯಾವಾಗ ಬರ್ತಾ ಇದೀಯ?''

''ಗೊತ್ತಿಲ್ಲ. ನೀನು ಹೇಗಿದೀಯ ಮಾಲಾ...?''

''ಏನೇನೂ ಚೆನ್ನಾಗಿಲ್ಲ. ಬರೀ ಬೋರು...''

''ಧ್ರುವ ಅಂಡ್ ಪಾರ್ಟಿ ಬರೋ ಹೊತ್ತಾಯ್ತು ಅಲ್ವಾ? ನಿನ್ನ ಮೇಕಪ್ ಮುಗೀತಾ?''

''ನನಗ್ಯಾಕೆ ಮೇಕಪ್...? ನಾನು ಹೇಗಿದೀನೋ ಹಾಗೇ ಸರಿಯಾಗಿದೀನಿ...'' ನಕ್ಕಳು.

''ಹಾಗಲ್ಲ, ನಿನ್ನ ಶ್ರೀಮಂತ ಅಣ್ಣನ ಶ್ರೀಮಂತ ಫ್ರೆಂಡು ಬರ್ತಾ ಇದಾರೆ. ರಿಸೆಪ್ಶನ್ ಹಾಗೇ ಇರಬೇಕು ಅಲ್ವಾ?''

''ಎಲ್ಲೋ ಕೂತ್ಕೊಂಡು ನನಗೆ ಇದನ್ನೆಲ್ಲಾ ಹೇಳಬೇಡ...''

''ಹೋಗಲಿ ಬಿಡು. ನೀನು ಹೇಗಿದ್ದರೂ ನನಗೆ ಖುಷಿಯೇ... ಮಾವ ಏನೇನು ಅಡಿಗೆ, ತಿಂಡಿ ಮಾಡ್ತಿದಾರೆ?''

''ಭಟ್ಟರನ್ನೇ ಕರೀಲಾ? ಮಾತಾಡ್ತೀಯ...?''

''ಈಗ ಬೇಡ, ಮತ್ತೆ ರಾತ್ರಿ ಫೋನು ಮಾಡ್ತೀನಿ...''

''ಬೇಗ ವಾಪಸ್ಸು ಬಾ ಭಾರ್ಗವ...'' ಅವಳಿಗೆ ಏನು ಉತ್ತರಿಸಬೇಕೆಂದು ತಿಳಿಯದೇ ಅವನು ಲೈನ್ ಕಟ್ ಮಾಡಿದ. ''ಹಲೋ ಹಲೋ...'' ಎಂದು ಇತ್ತಲಿಂದ ಅರಚಿ ಅರಚಿ ಸಾಕಾಗಿ ಮಾಲಾ ರಿಸೀವರ್‌ನ ಕುಕ್ಕಿ ಭಟ್ಟರನ್ನು ಕಾಣಲೆಂದು ಒಳಗೆ ಬಂದಳು. ಭಟ್ಟರು ಒಳಬಾಗಿಲಲ್ಲಿ ನಿಂತು ಕಣ್ಣೀರನ್ನು ಸುರಿಸುತ್ತಿರುವುದನ್ನು ಕಂಡು ಹುಬ್ಬೇರಿಸಿದಳು.

"ಏನಾಯ್ತು ನಿಮಗೆ? ಯಾಕೆ ಅಳ್ತಿದೀರಾ?"

"ಏನೂ ಇಲ್ಲ, ಭಾರ್ಗವನನ್ನೇ ನೆನೆಪಿಸಿಕೊಳ್ತಿದ್ದೆ. ಅವನೂ ಜೊತೆಗೆ ಇದ್ದಿದ್ದರೆ ಎಷ್ಟೋ ಕೆಲಸಗಳು ಕಮ್ಮಿಯಾಗುತ್ತಿದ್ದವು."

"ನಾನು ನಿಮಗೆ ಹೆಲ್ಪ್ ಮಾಡ್ಲಾ ಭಟ್ಟರೇ..."

"ನೀನು?... ನಿನಗೆ ಯಾವ ಕೆಲಸ ಬರುತ್ತಮ್ಮ?" ಮುಗುಳ್ನಕ್ಕರು.

"ಹೌದಲ್ವಾ? ನಾನು ಯಾವ ಕೆಲಸವನ್ನೂ ಕಲಿತಿಲ್ಲ. ನೀವಿಬ್ಬರೂ ಯಾವ ಕೆಲಸವನ್ನೂ ಕಲಿಸಿಕೊಡಲಿಲ್ಲ." ದೂಷಿಸಿದಳು.

"ನೀನು ರಾಜಕುಮಾರಿ. ನಿನಗ್ಯಾಕಮ್ಮ ಈ ಕೆಲಸವೆಲ್ಲಾ?"

"ಈ ರಾಜಕುಮಾರಿಗೆ ತುಂಬಾ ಬೇಸರವಾಗ್ತಿದೆ. ಹೋಗಲಿ ಹೇಳಿ... ಏನು ಅಡಿಗೆ ಮಾಡ್ತಾ ಇದೀರಿ... ಅಂದ್ಹಾಗೇ ಭಾರ್ಗವ ಫೋನು ಮಾಡಿದ್ದ... ನಿಮಗೆ ಹೇಳಲೇ ಇಲ್ಲ ನಾನು... ಅವನೂ ಇದನ್ನೇ ಕೇಳಿದ."

"ಎಲ್ಲೋ ಕೂತು ಅವನೂ ನನ್ನನ್ನೇ ನೆನೆಪಿಸಿಕೊಳ್ತಾ ಇದಾನೇನೋ. ಹುಂ." ನಿಟ್ಟುಸಿರು ಬಿಟ್ಟರು.

"ಭಟ್ಟರೇ, ಸುಮ್ನೇ ತಿಳಿಸಾರು, ಅನ್ನ ಮಾಡಿ ಬಡಿಸಿ ಸಾಕು. ಅವರುಗಳೇನೂ ದೇವಲೋಕದಿಂದ ಇಳಿದು ಬರುಲ್ಲ... ತಿಳೀತಾ?"

"ಹಾಗೆಲ್ಲಾ ಅತಿಥಿ ಸತ್ಕಾರದಲ್ಲಿ ಕಡಿಮೆ ಮಾಡಬಾರದು. ದೇವರು ಶಕ್ತಿ ಕೊಟ್ಟಿರುವಾಗ, ನಮ್ಮ ಸಣ್ಣತನ ತೋರಿಸಬಾರದು."

"ಅದನ್ನೇ ಹೊಟ್ಟೆ ತುಂಬಾ ಬಡಿಸಿದರಾಯ್ತು ಬಗೆ ಬಗೆ ಯಾಕೆ?"

"ಹುಚ್ಚು ಹುಡುಗಿ... ನಿನಗೆ ಅರ್ಥವಾಗುಲ್ಲ, ಬಹಳ ಮುಗ್ಧೆ... ನಿನ್ನ ಮನೆಗೆ ನಾನು ಊಟಕ್ಕೆ ಬಂದರೆ, ನನಗೂ ಬರೀ ಅನ್ನ ಸಾರು ಅಷ್ಟೇ ಮಾಡಿ ಬಡಿಸ್ತೀಯ...?"

"ನಾನೇಕೆ ಮಾಡಿ ಬಡಿಸಲಿ? ನೀವೇ ಇರ್ತೀರಲ್ಲ... ಇದೇ ಮನೇಲಿ." ಭಟ್ಟರು ಅವಳನ್ನೇ ಪಿಳಿ ಪಿಳಿ ನೋಡಿದರು. ಅವಳು ತನ್ನ ಜಾಣತನದ ಮಾತುಗಳಿಗೆ ನಕ್ಕಾಗ ಅವರೂ ನಕ್ಕಂತೆ ಮಾಡಿದರು.

"ಇಷ್ಟು ಚೆನ್ನಾಗಿದೆ ನಿನ್ನ ತಲೆಗೂದಲು, ನೀಟಾಗಿ ಬಾಚಿಕೊಂಡು ಜಡೆ ಹೆಣೆದು ಕೊಂಡು, ತಲೆ ತುಂಬಾ ಹೂ ಮುಡಿದುಕೊಳ್ಳಬಾರದಾ?... ಈ ಡ್ರೆಸ್ಸು ನಿನಗೆ ಒಂದು ಚೂರೂ ಒಪ್ಪುಲ್ಲ, ಇದನ್ನು ಬಿಚ್ಚಿ, ಅದೇ ನೀಲಿ ಬಣ್ಣದ ಸೀರೆ ಇದೆಯಲ್ಲ ಅದನ್ನು ಉಟ್ಟುಕೋ... ಅದು ನಿನಗೆ ಒಪ್ಪುತ್ತೆ."

"ಏನು ಭಟ್ಟರೇ... ನನ್ನನ್ನೇನು ಫೂಲ್ ಅಂತ ಅಂದ್ಕೊಂಡ್ರಾ... ಆ ತಾಯಿ ಮಗ ಬರೋ ಹೊತ್ತಾಯ್ತು. ಸಿಂಗಾರ ಮಾಡ್ಕೊಂಡು ಬಾ ಅಂತ ಸೂಚ್ಯವಾಗಿ ಹೇಳ್ತಿದೀರಲ್ಲ,

ಓ..ಕೇ. ನಾನು ಇವತ್ತು ನಿಮ್ಮ ಮಾತನ್ನು ಮೀರುಲ್ಲ. ನೀವು ಹೇಳಿದಂತೆಯೇ ಡ್ರೆಸ್ಸು ಮಾಡಿಕೊಳ್ತೀನಿ. ಅದು ನನಗೆ ಒಪ್ಪಲಿ ಅಥವಾ ಒಪ್ಪದಿರಲಿ ನಾನು ಕೇರ್ ಮಾಡುವುದಿಲ್ಲ'' ಅಂತ ಹೇಳಿ ಸ್ನಾನದ ಮನೆಗೆ ನಡೆದಳು.

ಸ್ನಾನ ಮುಗಿಸಿ ಅಲಂಕಾರ ಮಾಡಿಕೊಂಡು ಭಟ್ಟರ ಎದುರಿಗೆ ಬಂದು ನಿಂತಳು. ಒಂದು ಘಳಿಗೆ ಅವರಿಗೇ ಅವಳ ಗುರುತು ಸಿಗಲಿಲ್ಲ. ಮಿಕಿಮಿಕಿ ನೋಡಿದಳು, ಇವಳು ಕಿಲಕಿಲನೆ ನಕ್ಕಳು.

''ನೋಡಿದ್ರಾ ಭಟ್ಟರೇ... ಹೇಗಿದೀನಿ ಅಂತ.. ಪಟ್ಟಣಕ್ಕೆ ಬಂದ ಪುಟ್ಟಕ್ಕನ ತರಹ ಕಾಣ್ತೀನಿ ಅಲ್ವಾ?''

ಭಟ್ಟರು ಎರಡು ಮೂರು ಬಾರಿ ಮೇಲಿನಿಂದ ಕೆಳಕ್ಕೆ ಅವಳನ್ನೇ ನೋಡಿದರು. ''ದಿವಿನಾಗಿದೀಯಮ್ಮ.. ನಿನ್ನ ತಾಯಿಯನ್ನು ಪಟದಲ್ಲಿ ನೋಡಿದ್ದೆ. ಅದೇ ರೀತಿ ಕಾಣ್ತಿದೀಯ... ನನಗೆ ನಿನ್ನ ಗುರುತೇ ಸಿಗಲಿಲ್ಲ... ಒಳ್ಳೆ ಮದುವಣಗಿತ್ತಿಯ ತರಹ ಅಲಂಕಾರ ಮಾಡಿಕೊಂಡಿದೀಯ ಭೇಷ್...''

''ಸುಳ್ಳು ಸುಳ್ಳೇ ಹೊಗಳಬೇಡಿ ಭಟ್ಟರೇ. ಈ ಅಲಂಕಾರ, ಈ ಸೀರೆ, ಈ ಒಡವೆ ಒಂದೂ ನನಗೆ ಒಪ್ಪುವುದಿಲ್ಲ. ನಾನು ಬೇಕೂಂತಲೇ ಹೀಗೆ ಡ್ರೆಸ್ ಮಾಡಿಕೊಂಡಿದೀನಿ... ಇದರಿಂದ ಮಧುಗೆ ಕೋಪ ಬರುತ್ತೆ... ನನಗೆ ಖುಷಿಯಾಗುತ್ತೆ.''

''ಹಾಗಾದ್ರೆ ಬೇಡಮ್ಮ... ಮಧೂಗೆ ಇಷ್ಟವಾಗುವಂತಹ ಅಲಂಕಾರಾನೇ ಮಾಡ್ಕೋ... ನಾನು ನನಗೆ ಅನ್ನಿಸಿದ್ದನ್ನು ಹೇಳಿದೆ...''

''ಇರಲಿ ಬಿಡಿ ಭಟ್ಟರೇ... ನಾನೇನು ಧ್ರುವನ್ನಾಗಲೀ ಅವರಮ್ಮನ್ನಾಗಲೀ ಮೆಚ್ಚಿಸಬೇಕಾಗಿಲ್ಲ. ಈ ಸೀರೆ, ಈ ಜಡೆ, ಆಹಾಹಾ ಈ ಹೂವೋ... ನಾನು ಫ್ಯಾನ್ಸಿಡ್ರೆಸ್ ಕಾಂಪಿಟೇಷನ್‌ಗೆ ಹೋಗಿ ಬಂದಿರಬೇಕು ಅಂತ ಅಂದ್ಕೋತಾರೆ ಅಷ್ಟೇ...''

''ಹಾಗೇನೂ ವಿಚಿತ್ರವಾಗಿಲ್ಲ. ಈಗ ಭಾರ್ಗವ ಮನೇಲೇ ಇದ್ದಿದ್ದರೆ ನಿನ್ನ ಅಲಂಕಾರಾನ ಖಂಡಿತಾ ಮೆಚ್ಚಿಕೊಳ್ಳುತ್ತಿದ್ದ...''

''ಅವನಿಗೆ ನಾನು ಹೇಗೇ ಇದ್ದರೂ, ನನ್ನನ್ನ ಮೆಚ್ತಾನೆ...'' ಅಷ್ಟಕ್ಕೆ ಮಾತನ್ನು ತುಂಡರಿಸಿ ನಾಲಿಗೆಯನ್ನು ಕಚ್ಚಿಕೊಂಡಳು. ಭಟ್ಟರಿಗೆ ಖೇದವಾಯಿತು. ಈ ಹುಡುಗಿಯ ಹಣೆಯಲ್ಲಿ ಏನು ಬರೆದಿದೆಯೋ ? ಆ ಭಗವಂತನೇ ಬಲ್ಲ... ತನ್ನಲೇ ನುಡಿದು ಕೊಂಡರು.

* * * *

ಕಾಂಪೌಂಡ್ ಒಳಗೆ ಕಾರು ನಿಂತ ಸದ್ದು ಕೇಳಿದಾಗ ಮಾಲಾ ಯಾವ ಉತ್ಸಾಹವನ್ನೂ ತೋರಲಿಲ್ಲ. ಸಿಟ್ಟಿಂಗ್ ರೂಂನಲ್ಲಿ ಕುಳಿತು ಮ್ಯಾಗ್ಜೈನ್ ಓದುತ್ತಿದ್ದವಳು

ಅಲುಗಾಡಲಿಲ್ಲ. ಮೊದಲು ಮಧು ಒಳಗೆ ಬಂದ. ಬಹಳ ಸಡಗರದಲ್ಲಿದ್ದ. ಮಾಲಾ ಓರೆಗಣ್ಣಲ್ಲಿ ಅವನನ್ನು ನೋಡಿ ಸುಮ್ಮನಾಗಿದ್ದಳು. ಮಧುಗೆ ಅವಳು ತಂಗಿಯೆಂದು ಗೊತ್ತಾಗಲಿಲ್ಲ. ಯಾರೋ ಮಾಲಾಳ ಸ್ನೇಹಿತೆಯಿರಬಹುದೆಂದೇ ಭಾವಿಸಿದ. ''ಮಾಲಾ... ಮಾಲಾ...'' ಎಂದು ಕರೆಯುತ್ತಾ ಅವಳ ರೂಮಿನ ಕಡೆ ನಡೆದ. ಅವನ ಧ್ವನಿ ಕೇಳಿ ಭಟ್ಟರು ಹೊರಬಂದರು.

''ಭಟ್ಟರೇ, ಮಾಲಾಳನ್ನು ಕರೀರಿ... ಅವರುಗಳು ಬಂದಿದಾರೆ...'' ಭಟ್ಟರು ಕಿರುನಗೆ ನಕ್ಕರು. ಅಲ್ಲೇ ಕೂತಿದ್ದಾಳಲ್ಲ ಎನ್ನುವಂತೆ ಮಾಲಾಳ ಕಡೆ ಬೊಟ್ಟು ತೋರಿದರು. ಮಧು ಅವಳನ್ನೇ ಕೆಕ್ಕರಿಸಿ ನೋಡಿದ.

''ಇದೇನು ನಿನ್ನ ಅವಾಂತರ... ಮೊದಲು ಹೋಗಿ ಬೇರೆ ಡ್ರೆಸ್ ಹಾಕ್ಕೋ'' ಕೆಳದನಿಯಲ್ಲಿ ರೇಗಿದ.

''ಇದೇ ಚೆನ್ನಾಗಿದೆ... ನಾನು ಚೇಂಜ್ ಮಾಡೋಲ್ಲ...''

''ಅಂತೂ ನಿಂದೇ ಮೊಂಡುತನ...'' ಅಷ್ಟರಲ್ಲಿ ಧ್ರುವ, ಪ್ರತಾಪ ಒಬ್ಬ ಧಡೂತಿ ಹೆಂಗಸಿನೊಂದಿಗೆ ಒಳ ಬಂದರು. ಮಧು ಚುರುಕಾದ.

''ಬನ್ನಿ ಬನ್ನಿ...'' ಎಂದು ಹಲ್ಲು ಕಿರಿದು, ಮಾಲಾಳ ಮೊಣಕೈ ತಿವಿದ. ಮಾಲಾ ಎದ್ದು ನಿಂತಳು. ಅವರುಗಳೆಲ್ಲ ಅಲ್ಲಿದ್ದ ಸೋಫಾಗಳಲ್ಲಿ ಕುಳಿತ ಮೇಲೆ ಅವನು ಮಾಲಾಳಿಗೆ ಅವರುಗಳ ಪರಿಚಯ ಮಾಡಿಸಿದ.

''ಇವರು ಧ್ರುವನ ತಾಯಿ ಸುಮಿತ್ರಾದೇವಿ... ಇವಳು ನನ್ನ ತಂಗಿ ವನಮಾಲಾ...'' ಮಾಲಾ ಯಾಂತ್ರಿಕವಾಗಿ ಕೈ ಮುಗಿದು ನಮಸ್ಕಾರ ಮಾಡಿದಳು. ಧ್ರುವ, ಪ್ರತಾಪ ತಾವೇ ''ಹಲೋ, ಹಲೋ'' ಎಂದು ನುಡಿದು ಹಲ್ಲು ಕಿರಿದರು. ಅವರಿಬ್ಬರ ಮುಖದ ಮೇಲಿನ ಗಲಿಬಿಲಿಯನ್ನು ಕಂಡು ಮಾಲಾ ಒಳಒಳಗೇ ಖುಷಿ ಪಟ್ಟಳು. ಸುಮಿತ್ರಾದೇವಿ ಅವಳನ್ನು ತನ್ನ ಪಕ್ಕದಲ್ಲಿ ಬಂದು ಕುಳಿತುಕೊಳ್ಳುವಂತೆ ಕರೆದರು. ವಿಧಿ ಇಲ್ಲದೇ ಉಗುಳು ನುಂಗಿ ಅವರ ಪಕ್ಕದಲ್ಲಿ ಕುಳಿತಳು. ಆಕೆ ತಮ್ಮ ಕೈಯೊಳಗೆ ಅವಳ ಕೈಯನ್ನು ತೆಗೆದುಕೊಂಡು ವಿಶ್ವಾಸ ತೋರಿದಾಗ, ಇವಳು ಮುಜುಗರದಿಂದ ಚಡಪಡಿಸಿದಳು.

''ಧ್ರುವ ನಿನ್ನ ಬಗ್ಗೆ ಹೇಳ್ತಾನೇ ಇರ್ತಾನೆ... ನಿನ್ನನ್ನು ನೋಡಿ ಮಾತನಾಡಿಸೋಣ ಅಂತಲೇ ಬಂದೆ... ಈಗ ಏನು ಮಾಡ್ತಿದೀಯ...?''

''ಡಿಗ್ರಿ ಎಕ್ಸಾಂ ಮುಗಿಯಿತು... ಮುಂದೆ ಪಿ. ಜಿ. ಕೋರ್ಸ್‌ಗೆ ಸೇರೋಣ ಅಂತ ಇದೀನಿ'' ಉಲಿದಳು.

''ಸಂಗೀತ, ಐ ಮೀನ್ ದೇವರನಾಮ ಏನಾದ್ರೂ ಹಾಡೋಕೆ ಬರುತ್ತಾ? ನಿನ್ನ ಹಾಬೀಸ್ ಏನು?''

ಆಗ ಇವಳಿಗೆ ಇವರು ವಧುಪರೀಕ್ಷೆಗೆ ಬಂದಿರಬಹುದೇ ಎಂಬ ಅನುಮಾನ ಬಂತು. ಉರಿಗಣ್ಣಿನಿಂದ ಮಧು ಕಡೆ ನೋಡಿದಳು.

"ಸಂಗೀತ ಕಲಿಸಬೇಕು ಅನ್ನೋ ಐಡಿಯಾನೇ ಇರಲಿಲ್ಲ ನಮಗೆ... ನಮ್ಮ ತಾಯಿ ಬದುಕಿದ್ದಿದ್ದರೆ... ಖಂಡಿತಾ ಕಲಿಸಿರುತ್ತಿದ್ದರು..." ಮಧು ನುಡಿದ.

ಅಷ್ಟರಲ್ಲಿ ಭಟ್ಟರು ಎಲ್ಲರಿಗೂ ತಣ್ಣನೆಯ ಪಾನೀಯವನ್ನು ತಂದಿಟ್ಟರು.

"ತಗೊಳ್ಳಿ" ಮಧು ಉಪಚರಿಸಿದ.

"ಅಡಿಗೆ ಕಲಿತಿದ್ದೀಯಾ?" ಆಕೆ ಕೇಳಿದಾಗ ಇವಳ ಅನುಮಾನ ಖಚಿತವಾಗಿತ್ತು. "ಓ ಇದು ವಧು ಪರೀಕ್ಷೆನೇ... ಮಧು ತನಗೆ ತಿಳಿಯದಂತೆ ಅರೇಂಜ್ ಮಾಡಿದಾನೆ" ಎಂಬ ಕೋಪ ಅವಳಲ್ಲಿ ಮೂಡಿತು.

"ಇಲ್ಲ, ನಂಗೇನೂ ಬರಲ್ಲ" ಧ್ವನಿ ಒರಟಾಗಿತ್ತು. ಆದರೂ ಆಕೆ ಮುಗುಳ್ನಕ್ಕು ಅವಳ ಕೈ ಅದುಮಿದರು.

"ಸುಮ್ಮನೇ ಜನರಲ್ ಆಗಿ ಕೇಳಿದೆ... ಬೇಸರ ಮಾಡ್ಕೋಬೇಡ" ಮಾಲಾ ಉತ್ತರಿಸಲಿಲ್ಲ, ಅವಳಿಗೆ ನಿಜಕ್ಕೂ ಬೇಸರವಾಗಿತ್ತು. ಒಂದೊಂದಾಗಿ ಏನೇನೋ ವಿಚಾರಗಳು ತಲೆಯಲ್ಲಿ ಕೆಲಸ ಮಾಡಲು ಪ್ರಾರಂಭಿಸಿದವು. ಇದರಲ್ಲಿ ಭಟ್ಟರೂ ಶಾಮೀಲಾಗಿದ್ದಾರೆಂದು ಅನ್ನಿಸಿತು. ಇರಲಿ ಇವರುಗಳು ಹೋಗಲಿ, ಎಲ್ಲರನ್ನೂ ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತೇನೆಂದು ತನ್ನಲ್ಲೇ ನಿರ್ಧರಿಸಿದಳು.

ಸುಮಿತ್ರಾ ದೇವಿ ಧಡೂತಿ ಹೆಂಗಸಾದುದರಿಂದ, ಕುಳಿತಲ್ಲೇ ಮನೆಯ ಉದ್ದ ಅಗಲವನ್ನು ಅಳೆದಳು. ಅಂದ ಚೆಂದವನ್ನು ವೀಕ್ಷಿಸಿದಳು. ಎದ್ದು ಹೋಗಿ ನೋಡುವ ಕುತೂಹಲವನ್ನು ತೋರಲಿಲ್ಲ. ಮಾಲಾ ಕುಳಿತಲ್ಲೇ ಚಡಪಡಿಸಿದಳು. ಇವರುಗಳು ಯಾವಾಗ ಹೋಗ್ತಾರೋ, ತಾನು ಯಾವಾಗ ಚೆನ್ನಾಗಿ ಮಧುವನ್ನು ಬೈಯಬಹುದೋ ಎಂದು ಕಾದಳು.

ಊಟದ ಸಮಯದಲ್ಲಿ ಸುಮಿತ್ರಾದೇವಿ ವನಮಾಲಾ ತನ್ನ ಪಕ್ಕದಲ್ಲೇ ಕೂತುಕೊಳ್ಳಬೇಕೆಂದು ಬಯಸಿದಳು. "ನಾನು ಆಮೇಲೆ ಊಟ ಮಾಡ್ತೀನಿ. ನಿಮ್ಮದೆಲ್ಲಾ ಆಗಲಿ" ನಯವಾಗಿ ಜಾರಿಕೊಳ್ಳಲು ನೋಡಿದಳು.

ಆದರೆ ಮಧು ಕಣ್ಣಿನಲ್ಲೇ ಗದರಿದ... ಅವಳ ಪಕ್ಕಕ್ಕೆ ಬಂದು ನಿಂತು ಮೆಲುದನಿಯಲ್ಲಿ ನುಡಿದ. "ಸುಮ್ಮನೇ ಸೀನ್ ಮಾಡಬೇಡ. ಎಲ್ಲರ ಜೊತೆ ಊಟಕ್ಕೆ ಕೂತ್ಕೋ..." ಪ್ರತಾಪ ಅವಳನ್ನೇ ನೋಡುತ್ತಿರುವ ಅನುಭವ ಅವಳಿಗಾಯಿತು. ವಿಧಿ ಇಲ್ಲದೆ ಕೂತಳು. ಮುಖ ಮಾತ್ರ ಧುಮುಗುಟ್ಟುತ್ತಿತ್ತು. ಭಟ್ಟರು ಎಲ್ಲರಿಗೂ ನಿಧಾನವಾಗಿ ಬಡಿಸಿದರು. ಅನ್ನ, ಹುಳಿ, ಪಲ್ಯ, ಮೊಸರು ಬಜ್ಜಿ ಸಂಡಿಗೆ, ಹಪ್ಪಳ, ಮೈಸೂರು ಪಾಕು... ಎಲ್ಲಾ ಚೆನ್ನಾಗಿತ್ತು. ಸುಮಿತ್ರಾದೇವಿ ಬಾಯಿತುಂಬಾ ಅಡಿಗೆಯನ್ನು ಮೆಚ್ಚಿ ಹೊಗಳಿದಳು.

"ಮೈಸೂರು ಪಾಕಂತೂ ತುಂಬಾ ಚೆನ್ನಾಗಿದೆ. ನೀವೇ ಮಾಡಿದ್ರಾ?"

"ಇಲ್ಲ ಮೇಡಂ, ಎಂ.ಟಿ.ಆರ್.ನಿಂದ ತರಿಸಿದ್ದು..."

''ಯಾಕೆ ಭಟ್ಟರೇ... ನಿಮಗೇ ಚೆನ್ನಾಗಿ ಮಾಡೋಕೆ ಬರುತ್ತಿಲ್ಲ'' ಮಧು ಅಸಹನೆ ಯಿಂದ ಕೇಳಿದ.

''ಭಾರ್ಗವನೂ ಇರಲಿಲ್ಲ, ನಾನೊಬ್ಬನೇ ಆಗಿಬಿಟ್ಟೆ.. ಮಾಡೋಕೆ ಸಮಯವೇ ಆಗಲಿಲ್ಲ'' ಮಧು ತೆಪ್ಪಗಾದ.

''ಯಾರು ಭಾರ್ಗವ ? ನಿಮ್ಮ ಮಗನಾ?''

''ಅಲ್ಲ ನನ್ನ ತಂಗಿಯ ಮಗ... ಟೂರ್ ಹೋಗಿದಾನೆ'' ಮಧು ಹಾಗೂ ಧ್ರುವ ಮುಖ ಮುಖ ನೋಡಿಕೊಂಡದ್ದನ್ನು ಮಾಲಾ ಗಮನಿಸಿದಳು.

ಅವಳಿಗೆ ಊಟ ಸೇರದಾಯಿತು. ''ಎಕ್ಸ್‌ಕ್ಯೂಸ್ ಮೀ...'' ಎಂದು ಹೇಳಿ ಎದ್ದೇ ಬಿಟ್ಟಳು. ಮಧು ತಡೆಯಲು ನೋಡಿದ. ಆದರೆ ಅವಳು ಕೈತೊಳೆದು ತನ್ನ ರೂಮಿಗೆ ಹೊರಟೇ ಹೋದಳು. ಮಧೂಗೆ ಪೆಚ್ಚಾಗಿತ್ತು.

ಊಟ ಮುಗಿಸಿ ಎದ್ದು, ಸುಮಿತ್ರಾ ಕೈ ತೊಳೆದು, ಮನೆಯನ್ನು ನೋಡುವ ನೆಪದಲ್ಲಿ ಮಾಲಾಳ ರೂಮಿಗೆ ಬಂದಳು. ಅಳುತ್ತಾ ಮಲಗಿದ್ದ ಮಾಲಾ ಗಾಬರಿಯಿಂದ ಎದ್ದು ಕುಳಿತು ಕಣ್ಣುಗಳನ್ನು ಒರೆಸಿಕೊಂಡಳು.

''ಯಾಕಮ್ಮಾ ವನಮಾಲಾ, ಏನಾಯ್ತು? ನಿನ್ನ ತಾಯಿಯ ನೆನಪಾಯ್ತಾ'' ಆಕೆ ಆತ್ಮೀಯವಾಗಿ ಕೇಳುತ್ತಾ ಅವಳ ಭುಜಗಳ ಮೇಲೆ ಕೈಯನ್ನು ಇಟ್ಟು ವಿಶ್ವಾಸ ತೋರಿದಳು. ಮಾಲಾ ಸಂಕೋಚದಿಂದ ಎದ್ದು ನಿಂತಳು. ಸುಮಿತ್ರಾ ದೇವಿ ಮಂಚದ ಮೇಲೆ ಕುಳಿತು ಸುತ್ತಲೂ ಕಣ್ಣಾಡಿಸಿದಳು.

''ನಿಮ್ಮ ತಾಯೀದು ಯಾವುದೂ ಫೋಟೋ ಇಲ್ವಾ!...''

'ಇಲ್ಲ' ಎನ್ನುವಂತೆ ತಲೆಯಾಡಿಸಿದಳು. ''ಹೋಗಲಿ ಬಿಡು. ಇನ್ನು ಮುಂದೆ ನನ್ನನ್ನೇ ನಿನ್ನ ತಾಯಿ ಅಂತ ತಿಳಿದುಕೋ...'' ಮಾಲಾ ವಿಚಿತ್ರವಾಗಿ ಆಕೆಯನ್ನೇ ನೋಡಿದಳು. ಮತ್ತೆ ಆಕೆ ಇನ್ನೇನೇನು ಕೇಳಿಬಿಡುವಳೋ ಎಂಬಂತೆ ''ಆಂಟೀ ಸ್ವಲ್ಪ ಹೊತ್ತು ರಿಲಾಕ್ಸ್ ಮಾಡ್ತೀರಾ?'' ಕೇಳಿದಳು.

''ಇಲ್ಲಮ್ಮಾ ಮಧ್ಯಾಹ್ನದ ಹೊತ್ತು ನಾನು ಮಲಗುಲ್ಲ... ಮೊದಲೇ ಈ ಮೈ... ಏನಾದ್ರೂ ಸೋಷಿಯಲ್ ವರ್ಕ್‌ಗೆ ಸಂಬಂಧಿಸಿದ ಕೆಲಸ ಇದ್ದೇ ಇರುತ್ತೆ. ಬಿಜಿ ಯಾಗಿರ್ತೀನಿ...'' ಅಷ್ಟರಲ್ಲಿ ಮಧುಕರ ಅಲ್ಲಿಗೆ ಬಂದಾಗ ಮಾಲಾ ಅಲ್ಲಿಂದ ಮೆಲ್ಲಗೆ ಹೊರಕ್ಕೆ ನುಸುಳಿದಳು. ಮಧು ಆಕೆಯನ್ನು ಮಾತನಾಡಿಸುತ್ತಾ ಅಲ್ಲೇ ನಿಂತ.

ಹೊರಗೆ ಸರಸರನೆ ಬಂದ ಮಾಲಾಳಿಗೆ ಧ್ರುವ ಎದುರಾದ. ಇನ್ನೇನು ಡಿಕ್ಕಿ ಹೊಡೆಯುವುದರಲ್ಲಿದ್ದ ಸಾವರಿಸಿಕೊಂಡು ಪಕ್ಕಕ್ಕೆ ಸರಿದು ಜಾಗಬಿಟ್ಟು ''ಮಮ್ಮಿ ಇಲ್ಲಿದಾರಾ?'' ಕೇಳಿದ. ಮಾಲಾ ಉತ್ತರಿಸದ ತನ್ನ ಪಾಡಿಗೆ ತಾನು ಕೇಳಿಸದವಳಂತೆ ನಡೆದಳು. ''ಬಲು ಸೊಕ್ಕಿನ ಹೆಣ್ಣು'' ಎಂದು ತನ್ನಲ್ಲೇ ಹೇಳಿಕೊಂಡ.

ಅಡಿಗೆಮನೆಯನ್ನು ಸೇರಿಕೊಂಡ ಮಾಲಾ ಅವರುಗಳು ಹೊರಡುವವರೆಗೂ ಹೊರಗೆ ಬರಲಿಲ್ಲ. ಭಟ್ಟರೇ ಅವಳನ್ನು ಬಲವಂತ ಮಾಡಿ ಅವಳನ್ನು ಹೊರಕ್ಕೆ ಕರೆದುಕೊಂಡು ಬಂದರು. ಅತ್ತೂ ಅತ್ತೂ ಅವಳ ಕಣ್ಣುಗಳು ಊದಿಕೊಂಡಿದ್ದವು. ಸುಮಿತ್ರಾಳ ಗಮನಕ್ಕೆ ಅದು ಬಂದರೂ ಆಕೆ ಅರ್ಥೈಸಿದ್ದೇ ಬೇರೆ. ಹತ್ತಿರ ಬಂದು ಅವಳ ತಲೆ ಸವರಿದರು. ''ಹೋಗಿ ಬರ್ತೀನಮ್ಮ... ನಾವು ಗೆಸ್ಟ್ ಹೌಸಿನಲ್ಲಿ ಇರುತ್ತೇವೆ. ಸಾಯಂಕಾಲ ಆಧರೆ ಬಾ... ನಾನು ಮತ್ತೆ ಫೋನು ಮಾಡ್ತೀನಿ'' ಎಂದು ಹೇಳಿದರು. ಮಾಲಾ ಮಾತಾಡಲಿಲ್ಲ.

ಅವರುಗಳು ಅತ್ತ ಹೊರಟುಹೋದ ಕೂಡಲೇ ಮಾಲಾ ಭಟ್ಟರ ಕಡೆ ತಿರುಗಿದಳು. 'ಅವರುಗಳು ಯಾತಕ್ಕೆ ಬಂದಿದ್ರೂ ಅಂತ ನಿಮಗೆ ಗೊತ್ತಾಯ್ತಾ?''

''ಇಲ್ಲಮ್ಮ ನನಗೆ ಹೇಗೆ ಗೊತ್ತಾಗಬೇಕು?''

''ಸುಳ್ಳು ಹೇಳಬೇಡಿ ಭಟ್ಟರೇ... ವಧೂಪರೀಕ್ಷೆ ಮಾಡೋಕ್ಕೆ ಬಂದಿದ್ರು. ವಧೂ ಪರೀಕ್ಷೆ ಮಾಡೋಕೆ... ಅಲ್ಲ ನೀವೂ ಮಧು ಜೊತೆ ಶಾಮೀಲಾಗಿ ಬಿಟ್ರಾ?''

''ಇಲ್ಲಮ್ಮ ನಂಗೇನೂ ಗೊತ್ತಿಲ್ಲ. ಭಾರ್ಗವ ಬೇರೆ ಮನೇಲಿಲ್ಲ. ನನ್ನ ತಲೆಯೇ ಸರಿಯಾಗಿ ಓಡುತ್ತಿಲ್ಲ... ನಿಂಗ್ಯಾಕೆ ಹಾಗೆ ಅನ್ನಿಸ್ತು?''

''ಆಕೆ ಏನೇನೋ ಪ್ರಶ್ನೆಗಳನ್ನು ಕೇಳಿದಳು... ನಂಗೆ ಹಾಗೆನ್ನಿಸ್ತು. ಹೋಗಲಿ ಬಿಡಿ... ಅವರು ಯಾತಕ್ಕೆ ಬಂದಿದ್ರೆ ನನಗೇನು! ನನಗೇನೂ ಸಂಬಂಧಿಸಿದ ವಿಷಯವಲ್ಲ... ಆದರೆ ಮಧು ಏನಾದ್ರೂ ಕಿತಾಪತಿ ಮಾಡಿದ್ರೆ ನಾನು ಖಂಡಿತಾ ಸುಮ್ಮನಿರೋಲ್ಲ... ಭಾರ್ಗವ ಬರಲಿ, ಅವನಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ.''

ಈಗಾಗಲೇ ಮಧು ಭಾಗರ್ವನಿಗೆ ಸರಿಯಾಗಿ ಬುದ್ಧಿ ಕಲಿಸಿದಾನೆ ಎಂದು ಹೇಳುವ ಮನಸ್ಸಾದರೂ ತಡೆದುಕೊಂಡರು. ಅಷ್ಟರಲ್ಲಿ ಫೋನು ರಿಂಗಾಯಿತು. ಭಟ್ಟರೇ ತೆಗೆದುಕೊಂಡು 'ಹಲೋ' ಎಂದರು. ಅತ್ತಲಿಂದ ಭಾರ್ಗವ ಮಾತಾಡಿದ್ದ.

''ಭಾರ್ಗವನೇನೋ... ಎಲ್ಲಿಂದ ಮಾತಾಡ್ತಿದೀಯಾ...''

''ಭಾರ್ಗವನಾ? ನಂಗೆ ಕೊಡಿ ನಂಗೆ...'' ಎನ್ನುತ್ತಾ ಚಿಗರೆಯಂತೆ ಓಡಿ ಬಂದು ರಿಸೀವರ್‌ನ್ನು ಕಿತ್ತುಕೊಂಡಳು.

''ಹಲೋ ಭಾರ್ಗವ ಯಾವಾಗ ಬರ್ತಿದೀಯಾ?...'' ಧ್ವನಿ ಕಟ್ಟಿತ್ತು.

''ಯಾಕೆ ಏನ ಯ್ತು? ಏನಾಯ್ತು ಮಾಲಾ? ಯಾರಾದ್ರೂ ಏನಾದ್ರೂ ಅಂದ್ರಾ?''

''ಯಾರೂ ಏನೂ ಅನ್ನಲಿಲ್ಲ. ಆದರೆ ನನ್ನ ಮೂಡೇ ಕೆಟ್ಟುಹೋಯಿತು'' ಎನ್ನುತ್ತಾ ನಡೆದುದನ್ನೆಲ್ಲಾ ಹೇಳಿ, ''ನಂಗ್ಯಾಕೋ ಅನುಮಾನ ಬರ್ತಿದೆ... ನೀನು ಆದಷ್ಟು ಬೇಗ ಬಾ... ನಾನು ಒಂಟಿಯಾಗಿಬಿಟ್ಟದ್ದೀನಿ'' ಎನ್ನುತ್ತಾ ಅತ್ತಳು.

''ಸಮಾಧಾನ ಮಾಡ್ಕೋ ಮಾಲಾ... ಎರಡು ದಿನ ಅಷ್ಟೇ... ಆಮೇಲೆ ನಾನು

ಬಂದು ಮಧು ಹತ್ತಿರ ಮಾತ್ನಾಡಿ, ನಮ್ಮ ಮದುವೆ ಬಗ್ಗೆ ಕೇಳ್ತೀನಿ... ನಾನು ಬರೋ ವರೆಗೂ ನೀನು ಯಾವುದೇ ಮಾತನಾಡಬೇಡ..."

"ಆಕೆ ಏನಾದ್ರೂ ಕೇಳಿದ್ರೆ ಏನು ಹೇಳಲಿ?"

"ನನಗೆ ಧ್ರುವ ಒಪ್ಪಿಗೆಯಾಗಲಿಲ್ಲ ಅಂತ ಹೇಳು. ಯಾರೂ ಬಲವಂತ ಮಾಡುವ ಹಾಗಿಲ್ಲ."

"ಆದರೂ ನನಗ್ಯಾಕೋ ಭಯ ಆಗ್ತಿದೆ."

"ಭಯ ಯಾಕೆ? ನೀನು ಝಾನ್ಸಿ ರಾಣಿಯ ತರಹ ಯಾವುದಕ್ಕೂ ಹೆದರ ಬಾರದು. ನಿನ್ನ ಮನಸ್ಸಿಗೆ ಏನನ್ನಿಸುತ್ತೋ ಅದನ್ನೇ ಹೇಳಬೇಕು, ಅದನ್ನೇ ಮಾಡಬೇಕು..."

"ಓ..ಕೇ. ವಾಪಸ್ಸು ಬರುವಾಗ ನನಗೆ ಏನು ತರ್ತಿದೀಯ..."

"ಏನು ತರಲಿ ನೀನೇ ಹೇಳು..."

"ಅಲ್ಲಿ ಏನು ಸಿಗುತ್ತೆ ಅಂತ ನನಗೆ ಐಡಿಯಾನೇ ಇಲ್ಲವಲ್ಲ..."

"ನಿನಗೇನು ಬೇಕೋ ಅದು ನನಗೂ ಗೊತ್ತಿಲ್ಲ..."

"ಹೋಗಲಿ ಬಿಡು... ಈ ಸಾರಿ ನೀನು ಬೇಗ ಬಾ. ನನಗೆ ಅದೇ ಸಾಕು. ಮುಂದಿನ ಸಾರಿ ನಾವಿಬ್ಬರೂ ಒಟ್ಟಿಗೇ ಹೋಗೋಣ... ರೈಟ್?"

"ರೈಟ್..." ಅಷ್ಟರಲ್ಲಿ ಲೈನು ಕಟ್ಟಾಗಿತ್ತು. ಕೆಟ್ಟ ಮುಖ ಮಾಡಿದ ಮಾಲಾ ರಿಸೀವರ್‌ನ್ನಿಟ್ಟು ಭಟ್ಟರ ಕಡೆ ನೋಡಿದಳು. ಭಟ್ಟರು ಸಪ್ಪಗೆ ನಿಂತಿದ್ದರು. "ನನಗಿಂತ ಹೆಚ್ಚಾಗಿ ನೀವೇ ಭಾರ್ಗವನ್ನ ಮಿಸ್ ಮಾಡ್ತಿದೀರಿ ಅಲ್ವಾ ಭಟ್ಟರೇ... ಸಾರಿ... ನೀವು ಮಾತಾಡುಕ್ಕೆ ಅವಕಾಶ ಕೊಡಲೇ ಇಲ್ಲ ನಾನು..."

"ಪರವಾಗಿಲ್ಲ ಬಿಡಮ್ಮ. ಅವನ ಹತ್ತಿರ ಮಾತಾಡಿ ನಿನ್ನ ಹೃದಯ ಹಗುರವಾಯ್ತು ಅಲ್ವಾ? ಬೆಳಗ್ಗಿಂದ ನಿನ್ನ ಮುಖ ನೋಡೋಕೇ ಆಗ್ತಿರಲಿಲ್ಲ."

"ಆಹಾಹಾ... ಬೆಳಿಗ್ಗೆ ನೋಡಿದ್ರೆ ದಿವಿನಾಗಿದೀಯ, ಹಾಗಿದೀಯ ಹೀಗಿದೀಯ ಅಂತ ಹೇಳಿದ್ರಿ... ಹಾಗಾದ್ರೆ ಅದು ಸುಳ್ಳಾ..."

"ದಿವಿನಾಗಿರೋಕೂ ಸಪ್ಪಗಿರೋಕೂ ವ್ಯತ್ಯಾಸವಿದೆ. ನಾನು ಆಗ ಹೇಳಿದ್ದು ನಿಜ. ನಾನು ಈಗ ಹೇಳ್ತಾ ಇರೋದೂ ನಿಜ."

"ಭಟ್ಟರೇ ನಾನು ನನ್ನ ಸ್ನೇಹಿತೆ ಮನೆಗೆ ಹೋಗಿ ಬರ್ತೀನಿ. ಯಾರಾದ್ರೂ ಫೋನು ಮಾಡಿದ್ರೆ ಹೊರಗೆಲ್ಲೋ ಹೋಗಿದಾಳೆ ಅಂತ ಹೇಳಿ..."

"ರಾತ್ರಿ ಮನೆಗೆ ಬರ್ತೀಯಾ ತಾನೇ..."

"ಬರ್ತೀನಿ... ಬರೋ ಮನಸ್ಸಿಲ್ಲದಿದ್ದರೆ ಫೋನು ಮಾಡಿ ತಿಳಿಸ್ತೀನಿ."

''ಮಧು ಕೇಳಿದ್ರೆ ಏನ್ಹೇಳಲಿ?''

''ಏನೋ ಒಂದು ಹೇಳಿ'' ಎನ್ನುತ್ತಾ ಚಪ್ಪಲಿ ಮೆಟ್ಟಿ ಹೊರಟೇಬಿಟ್ಟಳು. ಆ ರಾತ್ರಿ ಅವಳು ಅಲ್ಲಿಯೇ ಉಳಿದುಕೊಳ್ಳುವುದಾಗಿ ತಿಳಿಸಿದಾಗ ಭಟ್ಟರಿಗೆ ಅರ್ಧ ನೆಮ್ಮದಿ, ಅರ್ಧ ಚಡಪಡಿಕೆ. ಗೆಸ್ಟ್‌ಹೌಸ್‌ನಿಂದ ಸುಮಿತ್ರಾ ದೇವಿ ಫೋನು ಮಾಡಿದ್ದಳು. ಕೆಲವೇ ಸಮಯದಲ್ಲಿ ಮಧು ಮನೆಗೆ ಬಂದ. ಭಟ್ಟರ ಮೇಲೆ ಹಾರಾಡಿದ.

''ಅವಳನ್ನೇಕೆ ಮನೆಯಿಂದ ಹೊರಗೆ ಹೋಗಲು ಬಿಟ್ರಿ?... ಆ ಸ್ನೇಹಿತೆ ಯಾಗು? ಅವಳ ಫೋನು ನಂಬರ್ರು ಕೊಡಿ... ಅಥವಾ ಅವಳ ಮನೆ ಎಲ್ಲಿದೆ ಅಂತ ಹೇಳಿ...''

''ನಂಗೊತ್ತಿಲ್ಲ''

''ಅವಳಿಗಂತೂ ಜವಾಬ್ದಾರಿ ಇಲ್ಲ ಅಂತಂದ್ರೆ, ನಿಮಗೂ ಇಲ್ವಾ?... ಸುಮಿತ್ರಾ ದೇವಿ ಏನಂದುಕೊಳ್ತಾರೆ? ಅವರು ಬಂದಿರೋದೇ ಅವಳಿಗಾಗಿ...'' ಎನ್ನುತ್ತಾ ಅವಳ ಡೈರಿ, ಪುಸ್ತಕಗಳನ್ನು ಗೂರಾಡಿ, ನಾಲ್ಕಾರು ಫೋನು ನಂಬರ್ರುಗಳನ್ನು ಪತ್ತೆ ಹಚ್ಚಿ ಫೋನು ಮಾಡಿದ. ಅವಳು ಅಲ್ಲೆಲ್ಲೂ ಬಂದಿಲ್ಲವೆಂದು ತಿಳಿದಾಗ ಗಾಬರಿಯೂ ಆಯಿತು... ಪೋಲಿಸ್ ಕಂಪ್ಲೆಂಟ್ ಕೊಡಲೇ ಅಂತ ಕೂಡಾ ಯೋಚಿಸಿದವನು, ಮೊದಲು ಅವರುಗಳು ವಾಪಸ್ಸು ಹೋಗಲಿ, ಅವಳು ನಾಳೆಯೂ ಬರದಿದ್ದರೆ ಮುಂದಿನ ಕೆಲಸ ಅದೇ ಎಂದು ತನ್ನಲ್ಲೇ ತೀರ್ಮಾನಿಸಿಕೊಂಡ. ಅಷ್ಟರಲ್ಲಿ ಅವಳೇ, ಅವಳ ಸ್ನೇಹಿತೆಯೊಡನೆ ವಾಪಸ್ಸಾಗಿದ್ದಳು. ಮಧು ಹಲ್ಲು ಕಚ್ಚಿ ಕೋಪವನ್ನು ತಡೆದುಕೊಂಡ... ''ಸ್ವಲ್ಪ ಒಳಗೆ ಬಾ...'' ಅಂತ ಕರೆದು, ''ಆ ಫ್ರೆಂಡ್‌ನ್ಯಾಕೆ ಕರೆದುಕೊಂಡು ಬಂದೆ?... ಗೆಸ್ಟ್‌ಹೌಸ್‌ಗೆ ಬರುಲ್ವಾ?'' ಅಂತ ಕೇಳಿದ.

''ನಂಗೆ ಇಷ್ಟವಿಲ್ಲ.... ನೀನು ನನ್ನ ಫ್ರೆಂಡ್ ಎದುರಿಗೆ ಸೀನ್ ಮಾಡಬೇಡ''

''ಹಾಗಾದ್ರೆ ಆಕೆಗೇ ಬರುವಂತೆ ಫೋನು ಮಾಡ್ತೀನಿ''

''ಬೇಡ... ಮತ್ತೇನು ಬಾಕಿ ಉಳಿದಿದೆ?''

''ಆಕೆ ನಿನ್ನ ಹತ್ತಿರ ಮಾತನಾಡಬೇಕಂತೆ...''

''ಅಬ್ಬಾ! ಏನು ಮಾತೋ? ಯಾರಿಗೆ ಬೇಕಾಗಿದೆ?'' ಎಂದು ಗೊಣಗಿ, ''ಓ.ಕೇ ನಾವಿಬ್ರೂ ಬರ್ತೀವಿ, ನೀನು ಹೋಗು'' ಎಂದಳು.

''ಅವಳ್ಯಾರೋ ಯಾಕೆ?...''

''ಅವಳು ನನ್ನ ಜೊತೆ ಇರುಕ್ಕೆ ಅಂತ ಬಂದಿದಾಳೆ. ಅವಳನ್ನು ಇಲ್ಲಿ ಮನೇಲಿ ಬಿಟ್ಟು ಹೋಗುಕ್ಕಾಗುಲ್ಲ. ಬರೋದಾದ್ರೇ ನಾವಿಬ್ರೂ ಬರ್ತೀವಿ... ಅಷ್ಟೇ.''

''ಸರಿ... ನಿನ್ನ ಹಠವೇ ಹಠ... ನಾನೇ ಕರೆದುಕೊಂಡು ಹೋಗ್ತೀನಿ. ಹೊರಡಿ'' ಎಂದು ಅವಸರಿಸಿದ.

''ಈಗಿನ್ನು ಮನೆಗೆ ಬಂದಿದೀವಿ. ಅರ್ಜೆಂಟೇನು? ನನ್ನ ಫ್ರೆಂಡ್‌ಗೆ ಕಾಫಿ ತಿಂಡಿ ಕೊಡಬೇಡ್ವಾ?''

''ಅಲ್ಲೇ ಎಲ್ಲಾ ಆಗುತ್ತೆ ನಡಿ... ಅವರುಗಳು ಕಾಯ್ತಾ ಇರ್ತಾರೆ...''

''ನಿನಗ್ಯಾಕಿಷ್ಟು ಹಠ?... ತಡೀ ಬಂದೆ'' ಎನ್ನುತ್ತಾ ಒಳಗಿನಿಂದ ಎರಡು ಬಟ್ಟಲುಗಳಲ್ಲಿ ಕಾಫಿ ತಂದಳು. ಸ್ನೇಹಿತೆಗೊಂದು ಕಪ್‌ನ್ನು ಕೊಟ್ಟು ತಾನೊಂದನ್ನು ಹಿಡಿದಳು. ಅಲ್ಲಿಯೇ ಇದ್ದ ಮಧುಗೆ, ನಿನಗೆ ಬೇಕಾ ಅಂತ ಸಹ ಕೇಳಲಿಲ್ಲ. ಅದನ್ನು ಅವನು ಗಮನಿಸಿ, ತಾನೇ ಒಳಗೆ ಹೋಗಿ ತನಗೆಂದು ಒಂದು ಕಪ್ ತಂದು, ಅವರಿಬ್ಬರ ಜೊತೆ ಕುಳಿತ. ತಾನೇ ತನ್ನ ಪರಿಚಯವನ್ನು ಹೇಳಿಕೊಂಡು ಅವಳ ಸ್ನೇಹಿತೆಯೊಡನೆ ಮಾತನಾಡಿದ.

* * * *

ಗೆಸ್ಟ್‌ಹೌಸಿನಿಂದ ಎಲ್ಲರೂ ಮತ್ತೆ ರಾತ್ರಿಯ ಊಟಕ್ಕೆ ಮನೆಗೇ ಬಂದರು. ಭಟ್ಟರು ಬಿಸಿಬಿಸಿ ಅಡಿಗೆ ಮಾಡಿದ್ದರು. ಮಾಲಾ ಅವಳ ಸ್ನೇಹಿತೆಯೊಡನೆಯೇ ಊಟಕ್ಕೆ ಕುಳಿತುಕೊಳ್ಳುವುದಾಗಿ ಹೇಳಿದಾಗ, ಸುಮಿತ್ರಾದೇವಿ ಬಲವಂತ ಮಾಡಲಿಲ್ಲ. ಮಾಲಾ ಬೇಕೆಂತಲೇ ಹೀಗೆ ಮಾಡುತ್ತಿದ್ದಾಳೆಂದು ಮಧು ಅರಿತ. ಏರುತ್ತಿದ್ದ ಕೋಪವನ್ನು ತಡೆದುಕೊಳ್ಳುತ್ತಿದ್ದ.

ಊಟ ಮುಗಿಸಿ ಅವರುಗಳ ಗೆಸ್ಟ್‌ಹೌಸಿಗೆ ವಾಪಸ್ಸಾಗಿದ್ದರು. ಮಾಲಾ ತನ್ನ ಸ್ನೇಹಿತೆಯೊಡನೆ ತನ್ನ ರೂಮಿನಲ್ಲಿದ್ದಳು. ಮಧು ತನ್ನ ಕೋಪವನ್ನು ಹೊರಗೆಡವಲಾಗದೇ ಚಡಪಡಿಸಿದ. ಎರಡು ದಿನಗಳು ಕಳೆದರೂ ಆ ಸ್ನೇಹಿತೆ ಅಲ್ಲಿಯೇ ಇರುವುದನ್ನು ಕಂಡು ಮಧು ಅಸಹನೆಯಿಂದ ತಂಗಿಯನ್ನು ಕೇಳಿದ.

''ಅವಳ್ಯಾಕೆ ಇಲ್ಲೇ ಇದಾಳೆ?''

''ನಾನೇ ನನ್ನ ಜೊತೆಗೆ ಇರು ಅಂತ ಇಟ್ಟುಕೊಂಡಿದೀನಿ...''

''ಯಾವಾಗ ಹೋಗ್ತಾಳೆ?...''

''ನಿನಗೇನು ತೊಂದರೆ ?''

''ನಾನು ನಿನ್ನ ಹತ್ತಿರ ಸ್ವಲ್ಪ ಪರ್ಸನಲ್ ವಿಷಯ ಮಾತನಾಡಬೇಕು.''

''ಇನ್ನೊಂದೆರಡು ದಿನ ಬಿಟ್ಟು ಹೋಗ್ತಾಳೆ. ಆಮೇಲೆ ಆಡೂವಂತೆ...''

''ನೀನು ನನ್ನನ್ನ ಅವಾಯ್ಡ್ ಮಾಡೋಕೆ ಹೀಗೆ ಮಾತಿದೀಯಾಂತ ಗೊತ್ತು''

''ಹಾಗೇ ತಿಳ್ಕೋ... ನನಗೆ ನಿನ್ನ ಹತ್ತಿರ ಯಾವ ಮಾತೂ ಬೇಕಿಲ್ಲ...''

''ನನಗೆ ಬೇಕಾಗಿದೆ... ನಿನಗಂತೂ ತಿಳುವಳಿಕೆ ಸಾಲದು ಅಂತಂದ್ರೆ, ನಾನು ಜವಾಬ್ದಾರಿಯುಳ್ಳವನು...''

''ಸರಿ. ಸಂತೋಷ... ಕೀಪಿಟ್ ಅಪ್'' ಎಂದು ನಗುತ್ತಾ ಹೇಳಿ ತನ್ನ ಸ್ನೇಹಿತೆ ಇದ್ದೆಡೆಗೆ ಬಂದುಬಿಟ್ಟಳು. ಮಧು ಕೈಕೈ ಕುಟ್ಟಿಕೊಂಡ. ಅವಳನ್ನು ಹಿಡಿದು ಚೆನ್ನಾಗಿ ಚಚ್ಚಿಹಾಕಬೇಕೆನಿಸಿತ್ತು.

ಮೂರು ನಾಲ್ಕು ದಿನಗಳು ಕಳೆದರೂ ಭಾರ್ಗವ ವಾಪಸ್ಸಾಗಿರಲಿಲ್ಲ. ಮಾಲಾ ಅದೇ ಕೊರಗಿನಿಂದ ಭಟ್ಟರನ್ನು ಕೇಳಿದಾಗ, ಅವರೂ ಪೆಚ್ಚು ಮುಖ ಮಾಡಿದರೇ ಹೊರತು ಏನೂ ಹೇಳಲಿಲ್ಲ. ಸ್ನೇಹಿತೆಯೂ ತನ್ನ ಮನೆಗೆ ಹೊರಟುಹೋಗಿದ್ದಳು. ಮಧು ತಿಂಡಿಗೆ ಬಂದು ಕುಳಿತಾಗ ಮಾಲಾ ಪ್ರಶ್ನಿಸಿದಳು.

''ಭಾರ್ಗವನ್ನ ಯಾವ ಊರಿಗೆ ಕಳಿಸಿದೀಯ? ಯಾವಾಗ ವಾಪಸ್ಸು ಬರ್ತಾನೆ.''

''ನಂಗೇನು ಗೊತ್ತು? ಹೋಗಿರೋನು ಅವನು, ಬೇಸರವಾದಾಗ ಅಲ್ಲಿಂದ ವಾಪಸ್ಸು ಬರ್ತಾನೆ...''

''ವಾಟ್ ಡೂ ಯೂ ಮೀನ್... ನೀನೇ ತಾನೇ ಟೂರ್‌ಗೆ ಕಳಿಸಿರೋನು? ಅವನ ಬಗ್ಗೆ ಹೀಗೆಲ್ಲಾ ಚೀಪಾಗಿ ಮಾತನಾಡಬೇಡ...'' ಭಟ್ಟರೂ ಸುಮ್ಮನಿರುವುದನ್ನು ಗಮನಿಸಿದ. ಅವನು ಟೂರ್‌ಗೆ ಹೋಗಿದಾನೆ ಅಂತ ಇವರಿಬ್ಬರೂ ತಿಳಿದಿರುವಾಗ ತಾನೂ ಅದಕ್ಕೆ ತಕ್ಕಂತೆ ಮಾತನಾಡಬೇಕೆಂದು ಆಲೋಚಿಸಿದ.

''ಭಟ್ಟರೇ, ಭಾರ್ಗವ ಫೋನು ಮಾಡಿರಲಿಲ್ವಾ?''

''ಎರಡು ದಿನಗಳ ಕೆಳಗೆ ಮಾಡಿದ್ದ...''

''ಏನಂದ? ಯಾವಾಗ ಬರ್ತಾನಂತೆ?''

''ಏನೋ, ಸರಿಯಾಗಿ ಹೇಳಲಿಲ್ಲ...''

''ಬರ್ತಾನೆ ಬಿಡಿ, ಅವನೇನು ಚಿಕ್ಕ ಮಗುವೆ? ಪ್ರತಿ ಬಾರಿ ನಾನೇ ಹೋಗ್ತಿದ್ದೆ. ಈ ಬಾರಿ ಅವನು ಹೋಗಿದಾನೆ. ಅದೂ ಮೊದಲ ಸಲ. ಸುತ್ತಮುತ್ತಲಿನ ಊರನ್ನೊ ನೋಡಿಕೊಂಡು ಬರಲಿ.'' ಭಟ್ಟರು ತಲೆ ಎತ್ತಿರಲಿಲ್ಲ.

ಇದ್ದಕ್ಕಿದ್ದಂತೆ, ಕೆಲಸಕ್ಕೂ ಬರದೇ ನಾಪತ್ತೆಯಾಗಿದಾನೆ. ಬಹುಶಃ ತನ್ನೂರಿಗೆ ಹೋಗಿರಬೇಕು. ಹೋಗಲಿ ನನಗೇನಂತೆ. ಒಳ್ಳೆಯದೇ ಆಯ್ತು. ಆದರೆ ಭಟ್ಟರೊಡನೆಯೂ ನಿಜವನ್ನು ಮುಚ್ಚಿಟ್ಟು ಏನು ಪ್ಲಾನ್ ಮಾಡುತ್ತಿರಬಹುದು? ಅವನು ಮತ್ತೆ ಬರೋದರೊಳಗೆ ಇವಳ ಮದುವೆ ಫಿಕ್ಸ್ ಮಾಡಿಬಿಡಬೇಕು. ತಾನು ಆದಷ್ಟು ಬೇಗ ಮಾಲಾಳೊಡನೆ ಮಾತನಾಡಿ ಅವಳನ್ನು ಒಪ್ಪಿಸಬೇಕು. ಊರಿಗೆ ವಾಪಸ್ಸಾದ ಸುಮಿತ್ರಾ ದೇವಿ ಆಗಲೇ ಎರಡು ಸಾರಿ ಫೋನು ಮಾಡಿ, ಯಾವಾಗ ಮದುವೆಯ ಮಾತನ್ನಾಡೋಣ ಅಂತ ಕೇಳಿದಾರೆ... ಆದರೆ ಈ ಭಾರ್ಗವ ಎಲ್ಲಿಗೆ ಹೋಗಿರಬಹುದು? ಮರೆಯಲ್ಲಿ ಕುಳಿತು ಏನು ಸ್ಕೀಂ ಮಾಡುತ್ತಿರಬಹುದು? ಅವನ ತಲೆಯನ್ನು ಕೊರೆಯತೊಡಗಿತು.

ಮೊದಲು ಮಾಲಾಳ ಸ್ನೇಹಿತೆಯ ಮನೆಯನ್ನು ಪತ್ತೆ ಹಚ್ಚಿ ಒಂದು ದಿನ ಅವಳ ಮನೆಗೆ ಬಂದ. ಅವಳ ಹೆಸರು ವಸುಧಾ. ಒಂದೆರಡು ದಿನ ಇವರ ಮನೆಯಲ್ಲಿ ಇದ್ದವಳು. ಹಾಗಾಗಿ ಮಧುಕರನೊಡನೆ ಅತಿಸಂಕೋಚ ತೋರದೇ ಸಲುಗೆಯಿಂದ ಮಾತನಾಡಿದಳು.

''ನಾನು ಅವಳ ಅಣ್ಣನೇ ಆದರೂ, ನಾನು ಮನೆಯಿಂದ ಹೊರಗೇ ಇದ್ದುದರಿಂದ, ನಮ್ಮಿಬ್ಬರಲ್ಲಿ ಸಲುಗೆ ಇಲ್ಲ. ನೀವಾದರೆ ಆಪ್ತಸ್ನೇಹಿತೆ, ಅವಳ ಅಂತರಂಗದಲ್ಲಿ ಏನಿದೆ ಅಂತ ತಿಳಿದಿರುತ್ತೆ...'' ಮಾತಿಗೆ ಪೀಠಿಕೆ ಇತ್ತ.

''ಯಾವ ವಿಷಯವನ್ನು ಕೇಳ್ತಿದೀರೋ ತಿಳೀಲಿಲ್ಲ...''

''ನನ್ನ ಫ್ರೆಂಡ್ ಧ್ರುವ ಅವಳನ್ನು ಮದುವೆಯಾಗಲು ಒಪ್ಪಿಕೊಂಡಿದಾನೆ. ಆದರೆ ಮಾಲಾ ಒಪ್ಪಿದಾಳೋ ಇಲ್ಲವೋ ತಿಳಿಯದು...''

''ಇಲ್ಲ, ಅವಳಿಗೆ ಧ್ರುವ ಒಪ್ಪಿಗೆ ಇಲ್ಲ...'' ತಕ್ಷಣವೇ ನುಡಿದಳು.

''ಹಾಗಂತ ನಿಮ್ಮ ಹತ್ತಿರ ಹೇಳಿದಾಳಾ?...''

''ಹೂಂ... ಎಲ್ಲಾ ಹೇಳಿದಾಳೆ. ಅವಳು ಬೇರೆ ಯಾರನ್ನೋ ಪ್ರೀತಿಸ್ತಿದಾಳಂತೆ... ಹಾಗಂತಾನೂ ಹೇಳಿದಾಳೆ...''

''ಹೌದಾ? ಯಾರಂತೆ?'' ಕಾತುರದಿಂದ ಕೇಳಿದ.

''ಯಾರೂಂತ ಎಷ್ಟು ಕೇಳಿದ್ರೂ ಹೇಳಲಿಲ್ಲ. ಈಗಲೇ ಹೇಳುಲ್ಲ. ಸಮಯ ಬಂದಾಗ ಹೇಳ್ತೀನಿ... ಬಲವಂತವಾಗಿ ಧ್ರುವನ ಮನೆಯವರು ಎಲ್ಲಿ ಒಪ್ಪಿಸಿಬಿಡ್ತಾರೋ ಅಂತ ಭಯ... ಅಂತ ಹೇಳಿ, ನನ್ನನ್ನು ಕರೆದುಕೊಂಡು ಬಂದಿದ್ದಳು.''

ಮಧುಕರನ ಮೆದುಳು ಚುರುಕಾಗಿ ಕೆಲಸ ಮಾಡಿತು. ಮಾಲಾಳಿಗೆ ಬೇರೆ ಯಾರೂ ಬಾಯ್‌ಫ್ರೆಂಡ್ಸ್ ಇದ್ದಂತಿಲ್ಲ. ಭಾರ್ಗವನೇ ಅವಳ ಪ್ರಿಯಕರ. ಅದಕ್ಕೇ ಭಾರ್ಗವ ಭಾರ್ಗವ ಅಂತ ಒದ್ದಾಡ್ತಾಳೆ ಎಂದು ಅರಿತ.

''ಯಾವುದೇ ಕಾರಣಕ್ಕೂ ಅವಳಿಗೆ ಬಲವಂತ ಮಾಡಬೇಡಿ. ಅವಳು ಯಾರನ್ನು ಪ್ರೀತಿಸ್ತಿದಾಳೋ ಅಂತ ತಿಳಿದುಕೊಂಡು, ಅವನೊಂದಿಗೇ ಮದುವೆ ಮಾಡಿ... ಇದು ನಾನು ನನ್ನ ಗೆಳತಿಗಾಗಿ ನೀಡುತ್ತಿರುವ ಸಲಹೆ...''

''ನಿಮ್ಮ ಸಲಹೆಗೆ ಥ್ಯಾಂಕ್ಸ್... ಆದರೆ ನಾನು ಬಂದು ನಿಮ್ಮ ಹತ್ತಿರ ಮಾತನಾಡಿದ್ದನ್ನು ದಯವಿಟ್ಟು ತಿಳಿಸಬೇಡಿ... ಇದೇ ನೆವ ಮಾಡಿಕೊಂಡು ನನ್ನ ಹತ್ತಿರ ಜಗಳವಾಡಿ, ತಾನೂ ಮನಸ್ಸನ್ನು ಕೆಡಿಸಿಕೊಂಡು, ನನ್ನ ಮನಸ್ಸನ್ನೂ ಕೆಡಿಸ್ತಾಳೆ...''

''ಆಗಲಿ, ನಾನು ಅವಳಿಗೆ ಹೇಳುಲ್ಲ'' ವಸುಧಾ ಮಾತು ಕೊಟ್ಟಳು.

ಅದೇ ದಿನ ಧ್ರುವನೊಡನೆ ಮಾತನಾಡಿ, ಹೇಗಾದರೂ ಭಾರ್ಗವ ಮತ್ತೆ ಮನೆಗೆ ಬರದಂತೆ ಮಾಡಬೇಕು ಎಂದು ಚರ್ಚಿಸಿದ. ಪ್ರತಾಪನ ಸಲಹೆಯಂತೆ ಒಬ್ಬ ಡಿಟೆಕ್ಟಿವ್ ಏಜೆಂಟ್‌ನನ್ನು ಗೊತ್ತು ಮಾಡಿ, ಮೊದಲು ಭಾರ್ಗವ ಇರುವ ಸ್ಥಳವನ್ನು ಪತ್ತೆ ಹಚ್ಚಿದ. ನಂತರ ಕೆಲವು ಸುಳ್ಳು ಆಪಾದನೆಗಳನ್ನು ಸೃಷ್ಟಿಸಿ, ಭಾರ್ಗವನ ಮೇಲೆ ಪೋಲಿಸ್ ಕಂಪ್ಲೆಂಟ್ ಕೊಟ್ಟು ಅವನನ್ನು ಅರೆಸ್ಟ್ ಮಾಡಿಸಿದ. ಭಾರ್ಗವ ಪೋಲಿಸ್ ಕಸ್ಟಡಿಯಲ್ಲಿ ಇರುವುದನ್ನು ಖಚಿತ ಮಾಡಿಕೊಂಡು ಸೀದಾ ಮನೆಗೆ ಬಂದ.

''ಭಟ್ಟರೇ, ಭಾರ್ಗವನಿಂದ ಫೋನು ಬಂದಿತ್ತಾ?'' ಭಟ್ಟರು ಮಾಲಾಳ ಕಡೆ ನೋಡಿದರು. ಇಲ್ಲ ಎನ್ನುವಂತೆ ತಲೆಯಾಡಿಸಿದರು.

''ಭಾರ್ಗವ ಫೋನು ಮಾಡಿದ್ದ. ಭಟ್ಟರಿಗೆ ಗೊತ್ತಿಲ್ಲ. ನಾನೇ ಮಾತಾಡಿದ್ದು'' ಮಾಲಾ ನುಡಿದಳು.

''ಏನಂದ? ಎಲ್ಲಿದಾನಂತೆ?''

''ಇನ್ನೆರಡು ದಿನಗಳಲ್ಲಿ ವಾಪಸ್ಸು ಬರ್ತಾನಂತೆ. ರಿಸರ್ವೇಶನ್ ಸಿಕ್ಕಿರಲಿಲ್ಲವಂತ... ಅಲ್ಲಿಯ ಚಳಿಗೆ ಸ್ವಲ್ಪ ಹುಶಾರಿರಲಿಲ್ಲವಂತೆ...''

''ಬರೀ ಸುಳ್ಳು... ಅವನೊಬ್ಬ ಫ್ರಾಡ್...''

''ಅವನು ಫ್ರಾಡಾ? ನಿನಗೆಲ್ಲೋ ತಲೆ ಕೆಟ್ಟಿದೆ...'' ನಕ್ಕಳು.

''ತಲೆ ಕೆಟ್ಟಿರೋದು ನನಗಲ್ಲ, ನಿನಗೆ. ನೀನು ತಿಳಿದುಕೊಂಡಿರುವಷ್ಟು ಸಾಚಾ ಅಲ್ಲ ನೀಚ... ನನಗೇ ಮೋಸ ಮಾಡುಕ್ಕೆ ಹೊರಟಿದ್ದ... ಎಲ್ಲಾ ಬಯಲಿಗೆ ಬಂತು... ಈಗ ಪೋಲಿಸ್ ಕಸ್ಟಡೀಲಿದಾನೆ...''

''ಏನಪ್ಪಾ... ಏನು ಹೇಳ್ತಿದೀಯ ನೀನು... ನಮ್ಮ ಭಾರ್ಗವ ಅಂಥೋನಲ್ಲ... ನಿನಗೆ ಯಾರೋ ಸುಳ್ಳು ಹೇಳಿದಾರೆ...''

''ಸುಳ್ಳೋ ನಿಜವೋ ಅದನ್ನು ಕೋರ್ಟು ತೀರ್ಮಾನಿಸುತ್ತೆ... ನಾನೇನು ಮಾಡಲಿ? ಅವನು ಯಾಕೆ ಹೀಗೆ ಮಾಡಿರಬಹುದು ಅಂತ ನಿಮಗೇನಾದರೂ ಗೊತ್ತಾ?''

''ಇಲ್ಲಪ್ಪಾ ಅವನು ಹೀಗೆಲ್ಲಾ ಮಾಡಿರೋಕೆ ಸಾಧ್ಯವೇ ಇಲ್ಲ. ಈ ಮನೆಗೆ ಹಿರಿಮಗನಂತೆ ಬೆಳೆದವನು. ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಈ ಮನೆಯ ಒಳಿತಿಗಾಗಿ ದುಡಿದವನು. ಅವನ ಮೇಲೆ ಸುಳ್ಳು ಆಪಾದನೆಯನ್ನು ಯಾರೋ ಹೊರಿಸಿದಾರೆ. ನೀನು ನಂಬಬೇಡ. ''

''ನನಗೂ ಮೊದಲು ನಂಬಿಕೆ ಬರಲಿಲ್ಲ ಭಟ್ಟರೇ... ನನ್ನ ಹಿತೈಷಿಗಳು ಕೆಲವರಿದ್ದಾರೆ. ಅವರುಗಳು ಸುಳ್ಳು ಹೇಳ್ತಾರಾ?''

''ಹಿತೈಷಿಗಳು ಅಂತ ಅಂದುಕೊಂಡವರೇ ಕೈ ಕೊಡ್ತಾರೆ. ಅವರುಗಳಿಗೆ ಭಾರ್ಗವನ ಮೇಲೆ ಏನೋ ಅಸೂಯೆ. ಅದಕ್ಕೇ ಹೀಗೆ ಮಾಡಿದಾರೆ... ನೀನು ಭಾರ್ಗವನನ್ನು ಮೊದಲಿನಿಂದ ಬಲ್ಲವನು... ಅಂಥೋನು ಅಂತ ನಿನಗೆ ಅನ್ನಿಸುತ್ತಾ?...''

''ನಾನು ಈಗ ಇಕ್ಕಟ್ಟಿಗೆ ಸಿಕ್ಕಿಬಿದ್ದಿದೀನಿ ಭಟ್ಟರೇ... ಎವಿಡೆನ್ಸ್‌ಗಳು ಸಿಕ್ಕಿವೆಯಲ್ಲ...''

''ನನ್ನನ್ನ ಅವನ ಬಳಿಗೆ ಕರೆದುಕೊಂಡು ಹೋಗು... ನಾನು ಅವನ ಹತ್ತಿರ ಮಾತನಾಡಬೇಕು...''

''ಕಂಪೆನಿಗೇ ಮೋಸ ಮಾಡುವಂತಹ ಕೆಲಸ ಮಾಡಿದಾನೆ. ಲಾಯರ್‍ರುಗಳ ಪರ್ಮಿಶನ್ ಇಲ್ಲದೇ ಅವನನ್ನು ನೋಡೋಕೆ ಆಗುಲ್ಲ...''

''ನಾನು ಅವನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿಸ್ತೀನಿ. ನಾನು ಲಾಯರ್ರ ಹತ್ತಿರ ಮಾತಾಡ್ತೀನಿ. ನೀವೇನೂ ಚಿಂತಿಸಬೇಡಿ ಭಟ್ಟರೇ...'' ಮಾಲಾ ಭಟ್ಟರಿಗೆ ಧೈರ್ಯ ಹೇಳಿದಳು.

''ನಮ್ಮ ಭಾರ್ಗವ ಅಂಥೋನಲ್ಲ.. ಮಾಲಾ ನೀನಾದ್ರೂ ಹೇಳಮ್ಮ'' ಭಟ್ಟರು ಕಣ್ಣೀರು ಹಾಕಿದಾಗ, ಮಧುಕರನ ಮನಸ್ಸು ಕಲಕಿತು. ಆದರೆ ಅದನ್ನು ತೋರಗೊಡಲಿಲ್ಲ.

''ಲಾಯರ್ರ ಹತ್ತಿರ ಏನು ಮಾತಾಡ್ತೀಯ...? ಜಾಮೀನಿನ ಮೇಲೆ ಬಿಡುಗಡೆ ಮಾಡಬೇಕಾದ್ರೆ ಬಾಂಡ್ ಬರೆದುಕೊಡಬೇಕಾಗುತ್ತದೆ. ದಂಡ ಕಟ್ಟಬೇಕಾಗುತ್ತದೆ...''

''ಕೊಟ್ಟರಾಯ್ತು. ನಮಗೆ ಹಣಕ್ಕೆ ಏನು ಕೊರತೆ?''

''ಹಣದ್ದೇ ನಮಗೆ ಕೊರತೆ... ಕಂಪೆನಿಯ ಅಕೌಂಟ್‌ನಲ್ಲಿರುವ ಹಣವನ್ನೆಲ್ಲಾ ಲಪಟಾಯಿಸಿದಾನೆ... ಇನ್ನೂ ಒಂದು ಮೋಸ ಮಾಡಿದಾನೆ. ಹೇಳಿದ್ರೆ ನೀನು ನಂಬ್ತೀಯೋ ಇಲ್ಲವೋ... ಡ್ಯಾಡಿ ನಿನ್ನ ಹೆಸರಿಗೆ ಬರೆದಿರುವ ಈ ಮನೆಯನ ನೂ ತನ್ನ ಹೆಸರಿಗೆ ವರ್ಗಾಯಿಸಿಕೊಂಡಿದಾನೆ...''

''ಸುಳ್ಳು...'' ಭಟ್ಟರು ನಿಂತಂತೇ ಕುಸಿದುಬಿದ್ದರು. ಇಬ್ಬರೂ ಅವರ ಬಳಿಗೆ ಬಂದರು. ಭಟ್ಟರಿಗೆ ಜ್ಞಾನ ಹೋಗಿತ್ತು. ತಾನು ಆಡಿದ ನಾಟಕ ಜಾಸ್ತಿಯಾಯಿತೆಂದು ಮಧುಕರನಿಗೆ ಅನ್ನಿಸಿತ್ತು. ತಕ್ಷಣವೇ ಡಾಕ್ಟರಿಗೆ ಫೋನು ಮಾಡಿದ... ಮಾಲಾ ಅಳಲು ಪ್ರಾರಂಭಿಸಿದಳು.

''ಈಗ ಅತ್ತರೇನು ಪ್ರಯೋಜನ? ಅವನಿಂದಲೇ ಹೀಗಾದದ್ದು'' ಮತ್ತೆ ಅವನನ್ನೇ ದೂಷಿಸಿದ.

ಡಾಕ್ಟರು ಬಂದು ಪರೀಕ್ಷಿಸಿ ನರ್ಸಿಂಗ್ ಹೋಂಗೆ ಸೇರಿಸುವುದು ಒಳ್ಳೆಯದು ಎಂದು ಸಲಹೆಯನ್ನಿತ್ತರು. ಬಹುಶಃ ಮೈಲ್ಡ್ ಆಗಿ ಸ್ಟ್ರೋಕ್ ಆಗಿರಬಹುದೆಂದು ಅಭಿಪ್ರಾಯ ಪಟ್ಟರು. ತಕ್ಷಣವೇ ಅವರನ್ನು ಸಮೀಪದ ನರ್ಸಿಂಗ್ ಹೋಂಗೆ ಸೇರಿಸಿದರು. ಮಾಲಾ ಅಲ್ಲೇ ಅವರ ಬಳಿ ಕುಳಿತಳು... ಮಧು ತಕ್ಷಣವೇ ಧ್ರುವನಿಗೆ ಫೋನು ಮಾಡಿದ. ಹಾಗೇ ವಸುಧಾಳಿಗೂ ಫೋನು ಮಾಡಿದ.

ಮಾರನೇ ದಿನದ ಬೆಳಗಿನ ಫ್ಲೈಟ್‌ನಲ್ಲಿ ಧ್ರುವ ಹಾಗೂ ಪ್ರತಾಪ ಬಂದಿಳಿದರು. ಅತ್ತೂ ಅತ್ತೂ ಸೊರಗಿದ್ದ ಮಾಲಾಳನ್ನು ಕಂಡು ಅವರಿಬ್ಬರಿಗೂ ವ್ಯಥೆಯಾಗಿತ್ತು. ಮಧುಗೆ ಸಹಾಯ ಮಾಡಲು ಹೋಗಿ ಏನೇನೋ ಆಯ್ತಲ್ಲ ಎಂದು ಮರುಗಿದ್ದರು. ಅಷ್ಟರಲ್ಲಿ

ಲಾಯರ್ರೂ ಬಂದಿದ್ದರು. ಎಲ್ಲರೂ ಮಾತನಾಡಿ ಒಂದು ಇತ್ಯರ್ಥಕ್ಕೆ ಬಂದಿದ್ದರು. ಧ್ರುವ ಭಾರ್ಗವನಿಗೆ ಜಾಮೀನು ಕೊಡಲು ಒಪ್ಪಿಕೊಂಡ. ಇದರಿಂದ ಮಾಲಾಳಿಗೇನೂ ಸಮಾಧಾನವಾಗಿರಲಿಲ್ಲ. ಇವರೆಲ್ಲರೂ ಸೇರಿ ಭಾರ್ಗವನಿಗೆ ದ್ರೋಹ ಮಾಡುತ್ತಿದ್ದಾರೆಂದೇ ಅನಿಸಿತ್ತು. ಆದರೆ ಅವಳು ಯಾವ ಮಾತನ್ನೂ ಆಡುವ ಸ್ಥಿತಿಯಲ್ಲಿರಲಿಲ್ಲ. ಆದಷ್ಟು ಬೇಗ ಭಾರ್ಗವ ಹೊರಗೆ ಬಂದರೆ ಸಾಕು, ಭಟ್ಟರಿಗೆ ಪ್ರಾಣಕ್ಕೆ ಏನೂ ಅಪಾಯವಾಗದಿದ್ದರೆ ಸಾಕು ಎಂದಷ್ಟೇ ಚಿಂತಿಸಿದ್ದಳು.

ವಸುಧಾಳಿಗೆ ಫೋನು ಮಾಡಿ ಭಟ್ಟರಿಗೆ ಹುಷಾರಿಲ್ಲವೆಂದು ತಿಳಿಸಿದ್ದರಿಂದ ಅವಳೂ ಬಂದು ಇಲ್ಲಿಯೇ ಇದ್ದಳು. ಅವಳೇ ಎಲ್ಲರಿಗೂ ಕಾಫಿಯನ್ನು ಮಾಡಿ ತಂದು ಕೊಟ್ಟಳು. ಕೆಲಸದವಳ ಕೈಯಲ್ಲಿ ತಿಂಡಿಯನ್ನು ತರಿಸಿದರು.

''ಥ್ಯಾಂಕ್ಸ್ ವಸುಧಾ... ನೀವು ಮಾಲಾಳ ಜೊತೆಯಲ್ಲಿ ಇರೋದ್ರಿಂದ ನನಗೂ ನಿರಾತಂಕ. ನಾವುಗಳು ಈಗಲೇ ಪೋಲಿಸ್ ಸ್ಟೇಷನ್‌ಗೆ ಹೋಗಿ, ಆದಷ್ಟು ಬೇಗ ಭಾರ್ಗವನನ್ನು ಬಿಡಿಸಿಕೊಂಡು ಬರ್ತೀವಿ... ಹಾಗೇ ನರ್ಸಿಂಗ್ ಹೋಂಗೆ ಹೋಗಿ ಬರ್ತೀವಿ. ಎಷ್ಟು ಹೊತ್ತಾಗುತ್ತೋ... ಹೇಳುಕ್ಕಾಗುಲ್ಲ''

''ಪರವಾಗಿಲ್ಲ. ನೀವುಗಳು ಹೋಗಿ ಬನ್ನಿ. ನಾನು ಮಾಲಾಳ ಜೊತೆಯಲ್ಲಿ ಇರ್ತೀವಿ ನಮ್ಮ ಮನೆಯಿಂದ ಯಾರಾದ್ರೂ ಊಟ ಕೂಡಾ ತಂದುಕೊಡ್ತಾರೆ. ನೀವುಗಳು ಆತಂಕ ಪಟ್ಟುಕೊಳ್ಳಬೇಡಿ'' ಅವಳು ಆಶ್ವಾಸನೆಯನ್ನು ಕೊಟ್ಟಳು.

* * * *

ಜಾಮೀನಿನ ಮೇಲೆ ಬಿಡುಗಡೆಯಾಗಿ ಹೊರಬಂದ ಭಾರ್ಗವನಿಗೆ ಅಲ್ಲಿ ಲಾಯರ್ರೊಡನೆ ನಿಂತಿದ್ದ ಅವರುಗಳನ್ನು ಕಂಡು ಕೋಪ ಉಕ್ಕಿತು. ರೋಷದಿಂದ ಮಧು ಬಳಿಗೆ ಬಂದ.

''ಇದೆಲ್ಲಾ ಏನು? ಯಾಕೆ ಹೀಗೆ ಮಾಡಿದೆ?'' ಅವನ ಮೇಲೆ ಎಗರಿದ.

''ಅದೆಲ್ಲಾ ಆಮೇಲೆ ನಿಧಾನವಾಗಿ ಮಾತನಾಡೋಣ. ಭಟ್ಟರನ್ನು ನರ್ಸಿಂಗ್ ಹೋಂಗೆ ಸೇರಿಸಿದೀನಿ... ಮೊದಲು ಅಲ್ಲಿಗೆ ಹೋಗೋಣ... ನಡೀ...''

''ನಾನು ನಿನ್ನ ಜೊತೆ ಬರುಲ್ಲ. ನೀನು ಸುಳ್ಳು ಹೇಳ್ತಿದೀಯ...''

''ಇಲ್ಲ, ಇವರು ಹೇಳುತ್ತಿರುವುದು ನಿಜ. ಬೇಕಾದ್ರೆ ಮನೆಗೆ ಫೋನು ಮಾಡಿ...'' ಲಾಯರ್ರು ಹೇಳಿದಾಗ ಹೊರಬಂದು ಪಬ್ಲಿಕ್ ಫೋನಿನಿಂದ ಮನೆಗೆ ಡಯಲ್ ಮಾಡಿದ. ವಸುಧಾ ಮಾತನಾಡಿದಳು. ಅವಳಿಂದಲೇ ಯಾವ ನರ್ಸಿಂಗ್ ಹೋಂ ಎಂದು ತಿಳಿದುಕೊಂಡು ಸೀದಾ ಒಂದು ರಿಕ್ಷಾ ಮಾಡಿಕೊಂಡು ಅಲ್ಲಿಗೆ ಬಂದ. ಭಟ್ಟರಿದ್ದ ವಾರ್ಡಿಗೆ ಓಡಿದ. ಅವರಿಗೆ ಇನ್ನೂ ಜ್ಞಾನ ಬಂದಿರಲಿಲ್ಲ. ಅವರನ್ನು ತಬ್ಬಿಕೊಂಡು ಗೋಳಾಡಿದ.

''ಮಾವಾ... ಕಣ್ಣು ಬಿಡು ಮಾವಾ... ನನ್ನಿಂದಲೇ ಹೀಗಾದದ್ದು... ನನ್ನನ್ನು ಕ್ಷಮಿಸು...'' ನರ್ಸು ಬಂದು ಗಲಾಟೆ ಮಾಡಬಾರದೆಂದು ಎಚ್ಚರಿಸಿದಳು. ಅತ್ತು ಸಮಾಧಾನ ಮಾಡಿಕೊಂಡ. ಮನಸ್ಸು ತಿಳಿಯಾದಾಗ ಒಂದೊಂದೇ ವಿಷಯಗಳು ಅರ್ಥ ವಾಗುತ್ತಾ ಹೋಯಿತು. ಇದೆಲ್ಲಾ ಮಧು ಮಾಡಿರುವ ಚಿತಾವಣೆ. ಧ್ರುವನೊಡನೆ ಸೇರಿಕೊಂಡಿದ್ದಾನೆ. ಮಾಲಾ ಇದನ್ನೆಲ್ಲ ನಂಬಿರಬಹುದೇ... ಈಗ ಅವಳನ್ನು ಎದುರಿಸುವುದು ಹೇಗೆ? ನನ್ನದೇನೂ ತಪ್ಪಿಲ್ಲದಿದ್ದರೂ ತಪ್ಪಿತಸ್ಥನಾಗಿದ್ದೇನೆ. ನಾನು ಅಪರಾಧಿಯಲ್ಲ ಎಂದು ಸಾಬೀತು ಮಾಡುವವರೆಗೂ ನಾನು ಮಾಲಾಳಿಂದ ದೂರವಿರಬೇಕು. ಇದನ್ನೇ ಮಧು ಅಪೇಕ್ಷೆ ಪಡುವುದು. ನಾನು ಹೇಗಾದರೂ ಸರಿ, ಈ ಮನೆಯಿಂದ, ಮಾಲಾಳಿಂದ ದೂರವಿರಲಿ ಅಂತಲೇ ಈ ಆಪಾದನೆ ಹೊರಿಸಿರುವುದು. ಇದನ್ನೆಲ್ಲಾ ಮಾಲಾಳಿಗೆ ಹೇಳಲೇ ಬೇಕು. ಆದರೆ ಏನಂತ ಹೇಳುವುದು. ಅವಳ ಸ್ವಂತ ಅಣ್ಣ ಇಂತಹ ಕೀಳುಮಟ್ಟಕ್ಕೆ ಇಳಿದಿದ್ದಾನೆ ಅಂತ ಹೇಳುವುದಾದರೂ ಹೇಗೆ? ಈಗ ಮಾವನೂ ಮಲಗಿಬಿಟ್ಟಿದ್ದಾನೆ. ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯಿತು. ಪಕ್ಕದಲ್ಲಿ ಯಾರೋ ಬಂದು ನಿಂತಂತಾಯಿತು. ತಿರುಗಿದ. ಮಾಲಾ... ಎದ್ದು ನಿಂತ. ಅವಳು ಅದು ಆಸ್ಪತ್ರೆಯೆನ್ನುವುದನ್ನೂ ಮರೆತು ಅವನನ್ನು ತಬ್ಬಿಕೊಂಡಳು. ಅವಳೊಡನೆ ವಸುಧಾಳೂ ಬಂದಿದ್ದಳು. ಮೆಲ್ಲನೆ ಅವಳನ್ನು ಸರಿಸಿದ. ಅವಳ ಕಣ್ಣೀರನ್ನು ಒರೆಸಿದ.

''ಇದೆಲ್ಲಾ ಏನು ಮಾಲಾ? ಮಾವನಿಗೆ ಏನಾಯ್ತು?''

''ಅದೆಲ್ಲಾ ಒಂದು ದೊಡ್ಡ ಕತೆ. ಮನೆಗೆ ಹೋಗೋಣ ಬಾ...''

''ಇಲ್ಲ, ಮಾವನ್ನ ಬಿಟ್ಟು ನಾನೆಲ್ಲಿಗೂ ಬರುಲ್ಲ...'' ಅತ್ತ ತಿರುಗಿದ.

''ಇಲ್ಲಿ ಡಾಕ್ಟ್ರು, ನರ್ಸು ಎಲ್ಲಾ ಇದಾರೆ. ಅಲ್ಲಿ ನನಗೆ ಯಾರೂ ಇಲ್ಲ, ನೀನು ಬರದಿದ್ದರೆ ನಾನೂ ಇಲ್ಲೇ ಇದ್ದುಬಿಡ್ತೀನಿ.''

''ಹಠ ಮಾಡಬೇಡ ಮಾಲಾ...'' ಎನ್ನುತ್ತ ಸ್ನೇಹಿತೆಯ ಕಡೆ ತಿರುಗಿ ಕೈಮುಗಿದ. ''ದಯವಿಟ್ಟು ಇವಳನ್ನು ಇಲ್ಲಿಂದ ಕರೆದುಕೊಂಡು ಹೋಗಿ... ಇನ್ನು ಮಾವನ ಜವಾಬ್ದಾರಿ ನನ್ನದು... ಅಲ್ಲದೇ ಕೆಲವು ಮುಖ್ಯವಾದ ವಿಷಯಗಳನ್ನು ಇತ್ಯರ್ಥ ಮಾಡಬೇಕಾಗಿದೆ. ಅದನ್ನೆಲ್ಲ ಮುಗಿಸದೇ ನಾನು ಮನೆಗೆ ಬರೋಲ್ಲ... ಅಲ್ಲದೇ ಆ ಮನೆಯಲ್ಲಿ ನನಗೆ ಯಾವ ಹಕ್ಕೂ ಇಲ್ಲ...''

''ಹಕ್ಕು ಇದೆಯೋ ಇಲ್ಲವೋ ಅದನ್ನು ಕೋರ್ಟು ತೀರ್ಮಾನ ಮಾಡುತ್ತೆ. ಹಾಗಂತೆ ಮನೆಗೆ ಬರದೇ ಎಲ್ಲಿ ಇರ್ತೀಯಾ?''

''ಮನೆಗೆ ಬಂದು, ಮತ್ತೂ ಅವಮಾನ ಮಾಡಿಸ್ಕೋ ಅಂತೀಯಾ? ಈಗ ಆಗಿರುವ ಅವಮಾನವೇ ಸಾಕಾಗಿದೆ. ದಯವಿಟ್ಟು ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು.''

''ನಿನಗೆ ಅವಮಾನ ಮಾಡಿರೋರಿಗೆ ನಾನು ಬುದ್ಧಿಕಲಿಸ್ತೀನಿ... ನನ್ನನ್ನು ನಂಬು.''

"ನಿನ್ನ ಮೇಲೆ ನನಗೆ ನಂಬಿಕೆ ಇದೆ ಮಾಲಾ... ಆದರೆ ನನ್ನ ಮೇಲೆ ನನಗೆ ಜಿಗುಪ್ಸೆ ಬಂದುಬಿಟ್ಟಿದೆ. ಮಾವನಿಗೆ ಹುಷಾರಾಗುವವರೆಗೂ ನಾನು ಎಲ್ಲಿಗೂ ಬರುಲ್ಲ. ದಯವಿಟ್ಟು ಕ್ಷಮಿಸು..." ಕೈ ಮುಗಿದ. ಅವಳು ಅವನ ಕೈಗಳನ್ನು ಹಿಡಿದು ತನ್ನ ತುಟಿಗಳಿಗೆ ಒತ್ತಿಕೊಂಡಳು. ವಸುಧಾ ಅವಳನ್ನು ಹಿಂದಕ್ಕೆ ಎಳೆದಳು. ಅವರಿಬ್ಬರೂ ಆಸ್ಪತ್ರೆಯ ಕಾರಿಡಾರಿನಲ್ಲಿ ಕಾಣುವವರೆಗೂ ನಿಂತಿದ್ದು ಒಳಬಂದು ಮಾವನ ಬಳಿ ಕುಳಿತ.

* * * *

ಮನೆಗೆ ಬಂದವಳೇ ಮಾಲಾ ಸುಸ್ತಾದವಳಂತೆ ರೂಮಿಗೆ ಹೋಗಿ ಮಲಗಿಬಿಟ್ಟಳು. ವಸುಧಾಳ ತಮ್ಮ ಕ್ಯಾರಿಯರ್‌ನಲ್ಲಿ ಮೂರು ನಾಲ್ಕು ಜನಕ್ಕೆ ಆಗುವಷ್ಟು ಊಟವನ್ನು ತಂದಿಟ್ಟಿದ್ದ.

"ನಡೀರಿ... ಎಲ್ಲಾ ಹೋಟೆಲ್‌ಗೆ ಹೋಗಿ ಊಟ ಮಾಡಿಕೊಂಡು ಬರೋಣ" ಮಧು ಎಲ್ಲರನ್ನೂ ಎಬ್ಬಿಸಿದ.

"ನನ್ನ ತಮ್ಮ ಮನೆಯಿಂದ ಕ್ಯಾರಿಯರ್ ತಂದಿದಾನೆ. ಸಾಕಾಗಬಹುದು... ನಿಮ್ಮ ಫ್ರೆಂಡ್ಸೂ ಬರ್ತಾರಾ?"

"ಬನ್ನಿ ಅಂತ ಕರೆದ್ರೆ ಬರ್ತಾರೆ. ಎಲ್ರಿಗೂ ಸಾಕಾಗುವಷ್ಟು ಇದೆಯಾ ಅಂತ ನೋಡ್ತೀನಿ..." ಅಂತ ಒಳಗೆ ಹೋದವಳನ್ನು ಮಧು ಹಿಂಬಾಲಿಸಿದ.

"ನಿಮಗೆ ಹೇಗೆ ಥ್ಯಾಂಕ್ಸ್ ಹೇಳಬೇಕೋ ತಿಳೀತಿಲ್ಲ. ನನಗೆ ಮಾಲಾಂದೇ ಚಿಂತೆಯಾಗಿ ಬಿಟ್ಟಿದೆ."

"ಭಟ್ಟರು ಹುಶಾರಾಗಿ ಮನೆಗೆ ಬಂದರೆ ಸರಿ ಹೋಗ್ತಾಳೆ. ಅಲ್ಲೀವರೆಗೂ ನಾನು ಅವಳ ಕೇರ್ ತಗೊಳ್ಳುತ್ತೀನಿ... ಭಟ್ಟರಿಗೆ ಯಾಕೆ ಇನ್ನೂ ಜ್ಞಾನಾನೇ ಬಂದಿಲ್ಲ?"

"ಅರೆ ಜ್ಞಾನದಲ್ಲಿದ್ದಾರೆ. ಡ್ರಿಪ್ಸ್, ಔಷಧಿಯ ಪರಿಣಾಮವೂ ಇರಬಹುದು. ಭಾರ್ಗವ ಬಂದಿದಾನಲ್ಲ, ಹಗಲೂ ರಾತ್ರಿ ಅವರ ಸೇವೆ ಮಾಡ್ತಾನೆ ಬಿಡಿ. ಅವರು ಬೇಗ ರಿಕವರ್ ಆಗ್ತಾರೆ." ನಕ್ಕ. ವಸುಧಾ ನಗಲಿಲ್ಲ.

"ನಾಲ್ಕು ಜನಕ್ಕೆ ಅಡ್ಜಸ್ಟ್ ಆಗುವಷ್ಟು ಇದೆ. ನಾನು ಸ್ವಲ್ಪ ಅನ್ನ ಮಾಡಿಬಿಡ್ತೀನಿ." ವಸುಧಾ ಹೇಳಿದಳು.

"ಬೇಡ ಬಿಡಿ... ನಾನು ಹೋಟೆಲ್ನಿಂದ ಚಪಾತಿ ಕಟ್ಟಿಸ್ಕೊಂಡು ಬರ್ತೀನಿ" ಮಧು ಅತ್ತ ಹೋದ ಕೂಡಲೇ ಸ್ನೇಹಿತೆಯನ್ನು ಕೇಳಿದಳು.

"ನೀನು ಊಟ ಮಾಡೋದಾದ್ರೆ ಮಾಡಿಬಿಡು... ನಾನು ಬೇಕಾದ್ರೆ ಅವರುಗಳಿಗೆ ಬಡಿಸ್ತೀನಿ..."

"ನೀನ್ಯಾಕೆ ಬಡಿಸಬೇಕು? ಎಲ್ಲರೂ ಒಟ್ಟಿಗೇ ಊಟ ಮಾಡಿದ್ರಾಯ್ತು ವಸು... ನನಗೆ ನೀನು ಒಂದು ಹೆಲ್ಪ್ ಮಾಡ್ತೀಯಾ?"

"ಒಂದಲ್ಲ ಹತ್ತು ಹೆಲ್ಪ್ ಮಾಡ್ತೀನಿ ಹೇಳು." ಮಾಲಾ ತನ್ನ ಮನದಲ್ಲಿರುವ ಸಂಶಯಗಳನ್ನು ಹೊರಗೆಡಹಿದಳು. "ನಾನು ಮಧೂಗೆ ಬುದ್ಧಿ ಕಲಿಸಲೇಬೇಕು. ಅದಕ್ಕೇ ನಾನೊಂದು ತೀರ್ಮಾನಕ್ಕೆ ಬಂದಿದೀನಿ" ಎನ್ನುತ್ತಾ ತನ್ನ ನಿರ್ಧಾರವನ್ನು ತಿಳಿಸಿದಳು.

"ಬೇಡ ಮಾಲಾ... ಇದು ಸರಿಯಲ್ಲ. ಮುಂದೆ ಸಫರ್ ಮಾಡೋಳು ನೀನೇ..."

"ನಾನು ಸಫರ್ ಮಾಡಿದರೂ ಪರವಾಗಿಲ್ಲ, ಭಾರ್ಗವ ನಿರಪರಾಧಿ, ಅವನಿಗೆ ನ್ಯಾಯ ಸಿಗಬೇಕು... ಅವನಿಗೋಸ್ಕರ ನಾನು ಏನು ಬೇಕಾದ್ರೂ ಮಾಡ್ತೀನಿ." ಮಾಲಾ ಸ್ನೇಹಿತಳ ಭುಜದ ಮೇಲೆ ತಲೆಯಿಟ್ಟು ಅತ್ತಳು.

ಮಧು ಚಪಾತಿಯನ್ನು, ಪೂರಿಯನ್ನು ಕಟ್ಟಿಸಿಕೊಂಡು, ಹಾಗೇ ಧ್ರುವ, ಪ್ರತಾಪ ಇಬ್ಬರನ್ನೂ ಕರೆದುಕೊಂಡು ಬಂದ. ಎಲ್ಲರೂ ಒಟ್ಟಿಗೇ ಊಟಕ್ಕೆ ಕುಳಿತರು. ವಸುಧಾ ಬಡಿಸಲು ಅನುವಾದಳು. ಮಾಲಾ ತಡೆದಳು.

"ಸೆಲ್ಫ್ ಸರ್ವೀಸ್... ನೀನೂ ಕೂತ್ಕೋ..." ಎಂದಳು. ಅವಳು ಯಾವ ತಕರಾರೂ ಮಾಡದೇ ಊಟಕ್ಕೆ ಬಂದಿದ್ದೇ ಮಧೂಗೆ ಅಚ್ಚರಿ. ಈಗ ಅವಳು ಹಾಗೆ ಹೇಳಿದ ಮೇಲೆ ತಾನೂ ನುಡಿದ.

"ಹೌದು ವಸುಧಾ... ನೀವೂ ಗೆಸ್ಟ್... ನಾವು ನಾವೇ ಬಡಿಸಿಕೊಳ್ಳೋಣ" ಎನ್ನುತ್ತಾ ಪಾತ್ರೆಗೆ ಕೈ ಹಾಕಿದ.

"ನೀವೇನೂ ಮೈಂಡ್ ಮಾಡ್ಕೊಳಲ್ಲ ತಾನೇ... ಬೇಕಾದ್ರೆ ನಾನು ಬಡಿಸ್ತೀನಿ. ನಾನು ಹೋಸ್ಟ್..." ಮಾಲಾ ನೇರವಾಗಿ ಧ್ರುವನಿಗೆ ಹೇಳಿದಾಗ, ಧ್ರುವ ತಬ್ಬಿಬ್ಬು ಗೊಂಡ.

"ನೋ... ನೋ... ಥ್ಯಾಂಕ್ಸ್... ನಾನೇ ಬಡಿಸಿಕೊಳ್ತೀನಿ..." ತಡವರಿಸುತ್ತಾ ನುಡಿದ. ಮಾಲಾ ಮಾದಕವಾಗಿ ನಕ್ಕಳು.

"ನಾನು ನಿಮಗೆ ಥ್ಯಾಂಕ್ಸ್ ಹೇಳಬೇಕು... ನೀವು ಭಾರ್ಗವಂಗೆ ಜಾಮೀನು ಕೊಟ್ಟಿದೀರಿ... ಥ್ಯಾಂಕ್ಯೂ ವೆರಿಮಚ್..." ಮಧು ವಿಚಿತ್ರವಾಗಿ ಅವಳನ್ನೇ ನೋಡಿದ. ಧ್ರುವ "ಹೆ...ಹೆ...ಹೆ" ಅಂತ ನಕ್ಕ.

"ನೀವು ಇನ್ನೂ ಒಂದು ಫೇವರ್ ಮಾಡಬೇಕು."

"ಓ... ಷ್ಯೂರ್ ಏನೂಂತ ಹೇಳಿ..." ಅವನು ಉಲ್ಲಾಸಗೊಂಡಿದ್ದ.

"ಮೊದಲು ಊಟ ಆಗಲಿ. ಆಮೇಲೆ ನಿಧಾನವಾಗಿ ಹೇಳ್ತೀನಿ" ಅಂತ ಹೇಳಿದಾಗ ಮಧು ಬೆವತು ಹೋದ. ಬಹಳ ಸ್ಮಾರ್ಟ್ ಆಗಿ ಬಿಹೇವ್ ಮಾಡ್ತಿದಾಳೆ. ಏನು ಹೇಳಿ ಬಿಡುವಳೋ... ಎಂಬ ಆತಂಕ ಅವನಲ್ಲಿ ಮೂಡಿತು. ಎಲ್ಲರೂ ನಿಧಾನವಾಗಿ ಊಟ ಮಾಡಿ ಎದ್ದರು. ವಸುಧಾ ಟೇಬಲ್‌ಗಳ ಮೇಲಿದ್ದ ಪಾತ್ರೆಗಳನ್ನು ತೆಗೆದಿಟ್ಟಳು. ಮಾಲಾ ಅವಳಿಗೆ ಸಹಾಯ ಮಾಡಿದಳು.

"ಸಾರಿ ಕಣೇ... ನಮ್ಮ ಮನೇಲೆ ಕೆಲಸ ಮಾಡೋ ಸ್ಥಿತಿ ಬಂತಲ್ಲ ನಿನಗೆ. ನಮ್ಮ ಮಧು ಒಳ್ಳೆಯವನಾಗಿದ್ದಿದ್ದರೆ, ನಾನೇ ಅವನನ್ನು ಪ್ರಪೋಸ್ ಮಾಡ್ತಿದ್ದೆ. ನೀನು ನನ್ನ ಫೇವರೆಟ್ ಅತ್ತಿಗೆಯಾಗಿ ಈ ಮನೆಗೆ ಬರ್ತಿದ್ದೆ..."

"ನೀನು ಭಾರ್ಗವನ್ನ ಯಾಕೆ ಪ್ರಪೋಸ್ ಮಾಡಬಾರದು?" ಕೆಣಕಿದಳು.

"ಭಾರ್ಗವ ನನ್ನವನು... ಅವನನ್ನು ನಿನಗೆ ಹೇಗೆ ಬಿಟ್ಟುಕೊಡಲಿ? ಅವನೂ ಅವರ ಮಾವನಂತೆ, ಬ್ರಹ್ಮಚಾರಿಯಾಗಿಯೇ ಇದ್ದರೂ ಪರವಾಗಿಲ್ಲ... ಆದರೆ ಅವನನ್ನು ನನ್ನ ಹೊರತು ಬೇರೆ ಯಾರೂ ಮದುವೆಯಾಗುವಂತಿಲ್ಲ"

"ಷ್... ಮೆಲ್ಲಗೆ, ನಿಮ್ಮಣ್ಣನಿಗೆ ಕೇಳಿಸೀತು..."

"ಕೇಳಿಸಿದರೆ ಕೇಳಿಸಲಿ ಬಿಡು... ಅವನು ಈಗಂತೂ ಜಗಳವಾಡುಲ್ಲ, ಆ ಜಯ-ವಿಜಯರು ಇದಾರಲ್ಲ ಆಕಡೆ ಈಕಡೆ..." ನಕ್ಕಳು.

"ಹೆಚ್ಚಿಗೆ ನಗಬೇಡ ದೃಷ್ಟಿಯಾದೀತು" ಸ್ನೇಹಿತೆ ಎಚ್ಚರಿಸಿದಳು.

* * * *

"ನಾನು ಧ್ರುವನ ಹತ್ತಿರ ಪರ್ಸನಲ್ ಆಗಿ ಮಾತನಾಡಬೇಕು... ಮಧು, ನಾವಿಬ್ಬರೂ ನಿನ್ನ ರೂಮಿನಲ್ಲಿ ಕುಳಿತು ಮಾತನಾಡ್ತೀವಿ" ಅವನ ಉತ್ತರಕ್ಕೆ ಕಾಯದೇ, ಮಾಲಾ ಧ್ರುವನನ್ನು ರೂಮಿಗೆ ಬರುವಂತೆ ಕರೆದಳು. ಪ್ರತಾಪನೂ ಎದ್ದು ನಿಂತಾಗ ಮಾಲಾ ತಡೆದಳು.

"ಪ್ಲೀಸ್ ಪ್ರತಾಪ್... ಇಲ್ಲಿ ನೀವು ಬೇಕಾದ್ರೆ ನನ್ನ ಸ್ನೇಹಿತೆಯೊಡನೆ ಮಾತಾಡಬಹುದು. ಎ ಫ್ಯೂ ಮಿನಿಟ್ಸ್ ಅಷ್ಟೇ... ನಿಮ್ಮ ಸ್ನೇಹಿತನ್ನ ಅಷ್ಟು ಹೊತ್ತೂ ಬಿಟ್ಟಿರುಕ್ಕೆ ಆಗಲ್ವಾ?" ಪ್ರತಾಪ ಕೆಂಪಾದ, ಧ್ರುವನಿಗೂ ಮುಜುಗರವಾಗಿತ್ತು. ಮಾಲಾ ಅದನ್ನು ಗಮನಿಸದವಳಂತೆ ರೂಮಿನೊಳಕ್ಕೆ ನಡೆದಳು. ಧ್ರುವ ಅಂಜುತ್ತಾ ರೂಮಿನೊಳಕ್ಕೆ ಅಡಿ ಇಟ್ಟ.

"ಕೂತ್ಕೊಳ್ಳಿ" ಎಂದೊಡನೆ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತು, ಹಣೆಯ ಮೇಲಿನ ಬೆವರನ್ನು ಒರೆಸಿಕೊಂಡ. "ಯಾಕೆ ಸೆಖೆಯಾಗ್ತಿದೆಯಾ, ಫ್ಯಾನು ಹಾಕ್ಲಾ?" ಎನ್ನುತ್ತಾ ಫ್ಯಾನಿನ ಸ್ವಿಚ್ಚನ್ನು ಅದುಮಿದಳು.

"ನೀವು ಭಾರ್ಗವಂಗೆ ಜಾಮೀನು ಕೊಡಲು ಯಾಕೆ ಒಪ್ಪಿಕೊಂಡ್ರಿ?"

ದಿಢೀರನೇ ಅವಳು ಕೇಳಿದಾಗ ಉತ್ತರಕ್ಕಾಗಿ ಪರದಾಡಿದ.

"ಹೆದರಬೇಡಿ ಹೇಳಿ... ಭಾರ್ಗವ, ಮಧುಗೆ ಅಣ್ಣನ ಸಮಾನ ಅಂತ ಹಾಗೆ ಮಾಡಿದ್ರಾ?..."

''ಹುಂ. ಹೌದು, ಹೌದು...''

''ಭಾರ್ಗವ ಒಳ್ಳೆಯವನಲ್ಲ; ಕಂಪೆನಿಗೆ, ನನ್ನ ಅಣ್ಣನಿಗೆ ಮೋಸ ಮಾಡಿದ ಅಂತ ತಿಳಿದೂ ನೀವು ಜಾಮೀನು ಕೊಡಲು ಒಪ್ಪಿಕೊಂಡ್ರಾ?...''

''ಅದು ಹಾಗಲ್ಲ...''

''ಮತ್ತೆ ಹೇಗೆ?...''

''ನಿಮಗೆ ಬೇಸರವಾಗದಿರಲಿ ಅಂತ...''

''ನನಗೆ ಬೇಸರವಾದರೆ ನಿಮಗೆ ಏನು ನಷ್ಟ?''

''ಐ ಲವ್ ಯೂ ವನಮಾಲಾ... ನಾನು ನಿಮ್ಮನ್ನು ಮದುವೆಯಾಗಬೇಕು ಅಂತ ಅಂದುಕೊಂಡಿದೀನಿ.... ನಿಮ್ಮ ಖುಷಿಗೋಸ್ಕರ ಹೀಗೆ ಮಾಡಿದೆ...''

''ಭಾರ್ಗವನ್ನ ಬಿಡುಗಡೆ ಮಾಡಿಸಿದರೆ ನನಗೆ ಖುಷಿಯಾಗುತ್ತೆ ಅಂತ ನಿಮಗೆ ಹೇಗೆ ಗೊತ್ತಾಯ್ತು?''

''ಮಧೂನೇ ಹೇಳ್ದ...''

''ಓ... ಮಾಲಂಗೋಸ್ಕರ ಜಾಮೀನು ಕೊಡು ಅಂತ ಕೇಳಿದ್ನಾ?''

''ಹೌದು. ಫೋನು ಮಾಡಿ ಕರೆಸಿಕೊಂಡ... ನಾನು ನಿಜವನ್ನೇ ಹೇಳ್ತಿದೀನಿ.''

''ನಾನು ನಿಮ್ಮನ್ನ ನಂಬ್ತೀನಿ. ನೀವು ನನ್ನ ಖುಷಿಗೋಸ್ಕರ ಒಂದು ಒಳ್ಳೆಯ ಕೆಲಸವನ್ನು ಮಾಡಿದೀರಿ. ಇದರ ಬದಲಿಗೆ ನೀವು ಮಧುವಿನಿಂದ ಏನು ಎಕ್ಸ್ಪೆಕ್ಟ್ ಮಾಡ್ತೀರಿ?''

''ಅವನು ನನ್ನ ಸ್ನೇಹಿತ... ಬಿಸಿನೆಸ್ ಪಾರ್ಟನರ್... ನೀವು ಒಪ್ಪಿದರೆ, ನಾನು ಅವನ ಭಾವನಾಗ್ತೀನಿ...''

''ನನ್ನ ಒಪ್ಪಿಗೆಯನ್ನೇ ಕೇಳಲಿಲ್ಲ ನೀವು...'' ನಕ್ಕಳು.

''ಈಗ ಕೇಳ್ತೀನಿ... ನೀವು ನನ್ನನ್ನ ಒಪ್ಪಿದೀರಾ?''

''ಇದನ್ನು ಅವತ್ತೇ ಕೇಳಬಹುದಾಗಿತ್ತಲ್ಲ... ನನ್ನನ್ನೇ ನೇರವಾಗಿ ಕೇಳಿದ್ದರೂ, ನಾನು ಇಲ್ಲ ಎನ್ನುತ್ತಿರಲಿಲ್ಲ. ಎಲ್ಲಾ ಸೇರಿ ಹೀಗೇಕೆ ಡ್ರಾಮಾ ಮಾಡಿದಿರಿ?''

''ಡ್ರಾಮಾ! ಯಾರು ಮಾಡಿದ್ದು?''

''ಹೋಗಲಿಬಿಡಿ. ಆ ವಿಷಯವನ್ನು ಮರೆತುಬಿಡಿ. ಈಗ ನಾನು ನಿಮಗೆ ಒಪ್ಪಿಗೆ ಕೊಟ್ಟಿದ್ದೇನೆ. ನಾನು ನಿಮ್ಮ ಹೆಂಡತಿಯಾಗುವವಳು. ಆದ್ದರಿಂದ ಈಗ ನಾವಿಬ್ಬರೂ ಆಡಿದ ಮಾತು ನಮ್ಮಿಬ್ಬರಲ್ಲೇ ಇರಬೇಕು. ಪ್ರತಾಪನಿಗಾಗಲೀ, ಮಧುಗಾಗಲೀ ತಿಳಿಯಬಾರದು. ಇದು ನನ್ನ ಕಂಡೀಷನ್... ಕೇಳಿದ್ರೆ ಮದುವೆಗೆ ಒಪ್ಪಿಕೊಂಡಿದಾಳೆ ಅಂತ ಅಷ್ಟು ಹೇಳಿ ಸಾಕು...''

"ಮಾಲಾ ನಿಜವಾಗಿಯೂ ಮದುವೆಗೆ ಒಪ್ಪಿಕೊಂಡಿದೀರಾ?"

"ನಾನು ತುಂಬಾ ಸ್ಟ್ರೈಟ್ ಫಾರ್ವರ್ಡ್ ಧ್ರುವ. ನನಗೆ ಸರಿ ಎನಿಸಿದ್ದನ್ನು ನೇರವಾಗಿ ಹೇಳುವವಳು. ನಿಮ್ಮ ಪತ್ನಿಯಾಗುವವಳ ಮಾತಿನ ಮೇಲೆ ನಿಮಗೆ ನಂಬಿಕೆ ಇಲ್ಲವಾ?"

"ಹಾಗಲ್ಲ, ನಾನು ಅಂದುಕೊಂಡಿದ್ದೇ ಬೇರೆ..."

"ನೀವು ಏನು ಅಂದುಕೊಂಡಿದ್ದರೋ ಅದು ನನಗೆ ಬೇಕಿಲ್ಲ. ನನ್ನ ವಿಷಯ ನಾನು ಹೇಳಿದ್ದೀನಿ. ಆದಷ್ಟು ಬೇಗ ನಾವಿಬ್ಬರೂ ಮದುವೆಯಾಗೋಣ. ನನ್ನದೊಂದು ಕಂಡೀಷನ್ ಇದೆ."

"ಏನದು?" ಮುಖದಲ್ಲಿ ಗಾಬರಿ ಕಂಡಿತ್ತು.

"ಏನಿಲ್ಲ ಮದುವೆಯಾದ ಮೇಲೂ ನಾನು ಈ ಮನೇಲೇ ಇರೋಕೆ ಇಷ್ಟಪಡ್ತೀನಿ. ನಮ್ಮ ಡ್ಯಾಡಿ ನನಗೆ ಅಂತ ಪ್ರೀತಿಯಿಂದ ಕೊಟ್ಟಿರುವ ಮನೆಯಲ್ಲೇ ವಾಸ ಮಾಡ ಬೇಕೂಂತ ಆಸೆ..."

"ಓ... ಅಷ್ಟೇ ತಾನೇ..." ಸರಾಗವಾಗಿ ಉಸಿರನ್ನು ಬಿಟ್ಟ. "ಇದರಲ್ಲಿ ನನಗೆ ಯಾವ ಅಬ್ಜೆಕ್ಷನ್ ಇಲ್ಲ. ನಿಮಗೆ ಎಲ್ಲಿ ಇಷ್ಟವೋ ಅಲ್ಲೇ ಇರಬಹುದು. ನಾನು ಕ್ವೆಶ್ಚನ್ ಮಾಡಲ್ಲ."

"ಥ್ಯಾಂಕ್ಯೂ ಧ್ರುವ..." ಎನ್ನುತ್ತಾ ಅವನ ಕೈ ಕುಲುಕಿದಳು. ಅವನಿಗೆ ಉಸಿರು ನಿಂತಂತಾಗಿತ್ತು. ಅವಳನ್ನೇ ನೇರವಾಗಿ ನೋಡಬೇಕೆಂದುಕೊಂಡರೂ ಆಗಿರಲಿಲ್ಲ. ಅವಳು ರೂಮಿನಿಂದ ಹೊರಗೆ ಬಂದಳು. ಅವನು ಮುಖದ ಮೇಲಿನ ಬೆವರನ್ನು ಒರೆಸಿ ಕೊಳ್ಳುತ್ತಾ ಅವಳ ಹಿಂದೆ ಬಂದ. ಎಲ್ಲರ ಕಣ್ಣುಗಳೂ ಅತ್ತ ತಿರುಗಿದವು. ಮಾಲಾ, ವಸುಧಾಳ ಕಡೆ ನೋಡಿ ಕಣ್ಣು ಮಿಟುಕಿಸಿ, ತನ್ನ ರೂಮಿಗೆ ನಡೆದಳು. ವಸುಧಾ ಅವಳ ಹಿಂದೆಯೇ ನಡೆದಳು.

ಪ್ರತಾಪನಿಗೆ ಮುಖಭಂಗವಾದಂತಾಗಿತ್ತು. ಮುಖವನ್ನು ಊದಿಸಿಕೊಂಡೇ ಇದ್ದ. ಮಾಲಾ ಏನು ಮಾತಾಡಿದಳೆಂದು ಕೇಳುವ ಧೈರ್ಯ ಇಬ್ಬರಿಗೂ ಇರಲಿಲ್ಲ.

ಮಧು ಫೋನು ಮಾಡಿ, ಸಮೀಪದ ಹೋಟೆಲ್ಲಿನಿಂದ ಎಲ್ಲರಿಗೂ ಕಾಫಿ ತರಿಸಿದ. ಕಾಫಿಯ ಸೇವನೆಯ ನಂತರ ಧ್ರುವ, ಮಾಲಾ ಮದುವೆಗೆ ಒಪ್ಪಿಕೊಂಡಿರುವ ವಿಷಯ ವನ್ನು ತಿಳಿಸಿದ. ಮಧು ಮೂರ್ಛೆ ಹೋಗುವುದೊಂದು ಬಾಕಿ.

"ಏನು ಹೇಳ್ತಿದೀಯ ನೀನು?... ಇದ್ದಕ್ಕಿದ್ದ ಹಾಗೆ ಏನಾಯ್ತು ಅವಳಿಗೆ?"

"ನಿನ್ನ ತಂಗಿ ಬಗ್ಗೆ ನಿನಗೆ ಏನೂ ಗೊತ್ತಿಲ್ಲ ಮಧು. ಅವಳು ಮೊದಲಿನಿಂದಲೂ ಒಪ್ಪಿಯೇ ಇದ್ದಳು."

"ಹಾಗಂದ್ರಾ? ಬರೀ ಸುಳ್ಳು... ಈಗ ಮನಸ್ಸು ಬದಲಾಗಿರಬಹುದು. ಭಾರ್ಗವನ ಮೇಲಿನ ವಿಶ್ವಾಸ ಕಡಿಮೆ ಆಗಿರಬಹುದು."

''ಹೋಗಲಿ ಬಿಡು. ನಮ್ಮ ಪ್ಲಾನ್ ಸಕ್ಸಸ್ ಆಯ್ತಲ್ಲ. ಭಾರ್ಗವನ ಮೇಲೆ ಹಾಕಿರುವ ಕೇಸನ್ನು ವಾಪಸ್ಸು ತೆಗೆದುಕೊಂಡು ಬಿಡು. ಸುಮ್ಮನೇ ಅವನಿಗೇಕೆ ತೊಂದರೆ ಕೊಡಬೇಕು?''

''ಅವನಿಗೆ ತೊಂದರೆ ಕೊಟ್ಟಿದ್ದಕ್ಕೆ ನನಗೇನೂ ವ್ಯಥೆಯಿಲ್ಲ. ಆದರೆ ಭಟ್ಟರಿಗೋಸ್ಕರ ವಾದರೂ ಭಾರ್ಗವನ್ನ ಫ್ರೀ ಮಾಡಬೇಕು. ಇಲ್ಲದಿದ್ದರೆ ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ.''

ಪ್ರತಾಪ ಮುನಿಸನ್ನು ಮರೆತು ಸ್ನೇಹಿತನ ಹೆಗಲ ಮೇಲೆ ಕೈ ಇಟ್ಟು ಕಂಗ್ರಾಟ್ಸ್ ಕಣಯ್ಯ ಎಂದ. ಮಧು ಸಹ ವಿಷ್ ಮಾಡಿ ಕೈಕುಲುಕಿದ.

''ಮೊದಲು ಮದುವೆ ಕಾರ್ಯ ನಡೆದು ಹೋಗಲಿ. ನನಗೆ ನನ್ನ ತಂಗಿಯ ಮೇಲೆ ನಂಬಿಕೆ ಇಲ್ಲ. ಭಾರ್ಗವನಿಗಾಗಿ ಈ ಮದುವೆಗೆ ಒಪ್ಪಿಕೊಂಡಿದಾಳೆ ಅಂತಲೇ ಅನ್ನಿಸುತ್ತೆ. ಸದ್ಯಕ್ಕೆ ಕೇಸಿನ ವಿಷಯ ಹಾಗೇ ಇರಲಿ. ಮೊದಲು ಮದುವೆಯ ಮಾತು. ನೀನು ಇವತ್ತೇ ನಿಮ್ಮ ತಾಯಿಗೆ ಫೋನು ಮಾಡು. ದೇವಸ್ಥಾನದಲ್ಲಿ ತಾಳಿ ಕಟ್ಟಿಸಿ, ರಿಜಿಸ್ಟರ್ ಮಾಡಿಸಿಬಿಟ್ಟರೆ ಆಮೇಲೆ ರಿಸೆಪ್ಶನ್‌ನ್ನು ಭಾರಿಯಾಗಿ ಇಟ್ಟುಕೊಂಡರಾಯ್ತು. ಏನಂತೀಯ?''

''ಹೌದು ಧ್ರುವ... ಹುಡುಗಿಯರ ಮನಸ್ಸು ಚಂಚಲ. ಮಾಲಾ ಮತ್ತೆ ಮನಸ್ಸು ಬದಲಾಯಿಸುವುದರೊಳಗೆ ಅವಳು ನಿನ್ನ ಮಡದಿಯಾಗಿರಬೇಕು...''

''ಇಲ್ಲ, ಮನಸ್ಸು ಬದಲಾಯಿಸುವವಳಂತೆ ಅನ್ನಿಸುವುದಿಲ್ಲ''

''ಈಗಲೇ ಅವಳ ಸೈಡ್ ವಹಿಸ್ತೀಯಾ? ಓ.ಕೆ. ಓ..ಕೇ ಎಂಜಾಯ್ ಯುವರ್‌ಸೆಲ್ಫ್'' ಪ್ರತಾಪ ಬೆನ್ನು ಸವರಿದ.

''ವಸುಧಾಳನ್ನು ನೀನು ಒಪ್ಪೊದಾದ್ರೆ ಹೇಳು, ನಾನು ಮಾಲಾಳ ಹತ್ತಿರ ಮಾತಾಡ್ತೀನಿ'' ಪ್ರತಾಪನಿಗೆ ಹೇಳಿದ.

''ಬೇಡಪ್ಪಾ ನಾನು ಹೀಗೇ ಇರ್ತೀನಿ. ನನಗೆ ಮದುವೆಯ ಬಗ್ಗೆ ಯಾವ ಆಸಕ್ತಿಯೂ ಇಲ್ಲ'' ಪ್ರತಾಪ ಹಾಗೆ ನುಡಿದಾಗ, ಮಧು ವಸುಧಾಳ ಬಗ್ಗೆ ಚಿಂತಿಸಿದ.

''ಒಂದ್ನಿಮಿಷ ಈಗ ಬಂದೆ'' ಎಂದು ಹೇಳಿ ತಂಗಿಯ ರೂಮಿಗೆ ಬಂದ. ಇಬ್ಬರೂ ಕಾಫಿಯನ್ನು ಕುಡಿಯುತ್ತಾ ಏನೋ ಹರಟುತ್ತಿದ್ದರು. ಅವನನ್ನು ಕಂಡ ಕೂಡಲೇ ಇಬ್ಬರೂ ಮಾತನ್ನು ನಿಲ್ಲಿಸಿದರು. ಅವನು ಒಳಗೆ ಬಂದ. ಎದ್ದು ಹೊರಡಲಿದ್ದ ವಸುಧಾಳನ್ನು ತಡೆದ. ''ಕೂತ್ಕೊಳ್ಳಿ ನಿಮ್ಮ ಹತ್ತಿರ ಮಾತನಾಡಬೇಕೂ'' ಅಂತಂದ. ಅವಳು ಸಂಕೋಚದಿಂದ ಕುಳಿತಳು.

''ಭಟ್ಟರು, ಈ ಮನೆಗೆ ಹಿರಿಯರಿಗಾದ್ದರು. ಅವರ ಸಲಹೆಯಂತೆ ಎಲ್ಲಾ ಕಾರ್ಯ ಗಳನ್ನು ನೆರವೇರಿಸುತ್ತಿದ್ದೆವು. ಈಗ ಭಟ್ಟರು ಅನಾರೋಗ್ಯದಿಂದ ನರ್ಸಿಂಗ್ ಹೋಂ ನಲ್ಲಿದಾರೆ ಅನ್ನೋ ವಿಷ್ಯ ಗೊತ್ತೇ ಇದೆ. ಅವರನ್ನು ಬಿಟ್ಟು ಭಾರ್ಗವನೂ ಬರಲ್ಲ. ಈಗ

ನೀವು ಮಾಲಾಳ ಆಪ್ತ ಗೆಳತಿ. ನಿಮ್ಮ ಮನೆಯವರಿಂದ ಕೆಲವು ಸಹಾಯಗಳಾಗ ಬೇಕಾಗಿದೆ'' ಎಂದ.

''ನನ್ನ ಮದುವೆ ಮಾತು ತಾನೇ... ನಾನು ಸಿಂಪಲ್ ಆಗಿ ಮನೇಲೇ ಮದುವೆ ಮಾಡಿಕೊಳ್ತೀನಿ. ಯಾವುದಾದರೂ ದೇವಸ್ಥಾನದ ಅರ್ಚಕರು ಸಾಕು... ಅವರನ್ನು ಕೇಳಿದರೆ ಮುಹೂರ್ತವನ್ನು ಅವರೇ ಇಟ್ಟುಕೊಡ್ತಾರೆ'' ಮಾಲಾ ಎಂದಳು.

''ನಿನಗೇನೂ ಗೊತ್ತಾಗಲ್ಲ ಸುಮ್ಮನಿರು''

''ಇದು ನನ್ನ ಮದುವೆಯ ವಿಷಯ. ಅದೆಲ್ಲಾ ನನ್ನ ಇಷ್ಟ. ಯಾರನ್ನೂ ಕರೆಯಬೇಕಾಗಿಲ್ಲ. ಯಾರೂ ಬರಬೇಕಾಗಿಲ್ಲ. ಇದಕ್ಕೆ ನಾನು ಧ್ರುವನ ತಾಯಿಯನ್ನು ಒಪ್ಪಿಸ್ತೀನಿ.''

''ಹಾಗಲ್ಲ ಮಾಲಾ...''

''ನಾನು ಈ ಮದುವೆಗೆ ಒಪ್ಪಿರುವುದೇ ನಿನ್ನ ಅದೃಷ್ಟ ಅಂತ ಅಂದ್ಕೋ. ಹೀಗೇ ಚರ್ಚೆ ಮಾಡಿದರೆ ನಾನು ಮದುವೆಯಾಗುವುದೇ ಇಲ್ಲ''

''ಅದ್ಯಾಕೆ ಹೀಗೆ ಹಠ ಮಾಡ್ತೀಯ?''

''ಮತ್ತಿನ್ನೇನು? ತಂದೆಯ ಸಮಾನರಾಗಿರೋ ಭಟ್ಟರು ಜ್ಞಾನವಿಲ್ಲದೇ ನರ್ಸಿಂಗ್ ಹೋಂನ ಬೆಡ್ ಮೇಲೆ ಮಲಗಿದಾರೆ. ಈ ಮನೆಗೆ ಹಿರಯ ಮಗನಂತಿದ್ದ ಭಾರ್ಗವ ಅವಮಾನದಿಂದ ನರಳ್ತಾ ಇದಾನೆ. ನಾನು ಯಾವ ಖುಷಿಯಿಂದ ಮದುವೆಯಾಗಲಿ ನೀನೇ ಹೇಳು...''

''ಇಷ್ಟಕ್ಕೆಲ್ಲಾ ಆ ಭಾರ್ಗವನೇ ಕಾರಣ''

''ಅಲ್ಲ ಅವನಲ್ಲ ಕಾರಣ... ನಾನು ನಾನು ಕಾರಣ... ನಾನೇ ಇಲ್ಲದೇ ಇದ್ದಿದ್ದರೆ ಈ ಹಗರಣ ನಡೆಯುತ್ತಲೇ ಇರಲಿಲ್ಲ.''

''ಹಾಗಾದರೆ ಈಗ ಎಂಗೇಜ್‌ಮೆಂಟ್ ಮಾಡಿರೋಣ. ಭಟ್ಟರು ವಾಸಿಯಾಗಿ ಬಂದ ಮೇಲೆ ಮದುವೆಯ ದಿನವನ್ನು ಗೊತ್ತು ಮಾಡಿದ್ರಾಯ್ತು...''

''ಏನೂ ಬೇಡ... ಭಟ್ಟರಿಗೆ ವಾಸಿಯಾದರೂ ಅವರು ಇನ್ನು ಮುಂದೆ ಈ ಮನೆಗೆ ಖಂಡಿತಾ ಬರುವುದಿಲ್ಲ... ನಾನು ಅವರನ್ನು ಕಳೆದುಕೊಂಡುಬಿಟ್ಟೆ'' ಅವಳು ಅಳಲು ಪ್ರಾರಂಭಿಸಿದಾಗ ಅವನಿಗೂ ಸಂಕಟವಾಗಿತ್ತು. ತಾನು ದುಡುಕಿದೆನೇನೋ ಅಂತನ್ನಿಸಿತ್ತು. ಆದರೆ ಎಲ್ಲಾ ಕೈ ಮೀರಿ ಹೋಗಿತ್ತು. ಈಗ ಕಾಲಿಗೆ ಬಿದ್ದು ಬೇಡಿಕೊಂಡರೂ ಭಟ್ಟರು ಈ ಮನೆಗೆ ವಾಪಸ್ಸು ಬರುವುದಿಲ್ಲ. ಅವರು ಒಪ್ಪಿದರೂ ಭಾರ್ಗವ ಬಿಡುವುದಿಲ್ಲ. ತಾನು ಭಾರ್ಗವನ ಹತ್ತಿರ ಇಷ್ಟು ಕೆಟ್ಟದಾಗಿ ನಡೆದುಕೊಳ್ಳಬಾರದಾಗಿತ್ತೆನಿಸಿತ್ತು. ತಾನು ಈಗಲಾದರೂ ಅವನ ಕ್ಷಮೆ ಕೇಳಿದರೆ ಅವನು ಬರಬಹುದೇನೋ. ಅವನು ಬಂದರೆ ತನಗೂ ಸುಲಭವಾಗುತ್ತದೆಯೆಂದೆನಿಸಿತ್ತು.

''ಮಾಲಾ ಭಾರ್ಗವ ನಿನಗೋಸ್ಕರ ನಿನ್ನ ಮದುವೆಗೆ ಬಂದೇ ಬರ್ತಾನೆ. ನಾನು ಅವನನ್ನು ಕ್ಷಮೆ ಕೇಳಿ ಕರೆದುಕೊಂಡು ಬರ್ತೀನಿ.''

''ಕೂಡದು. ಅವನು ನಿನ್ನ ಮುಖವನ್ನು ನೋಡೋಕೆ ಇಷ್ಟಪಡಲ್ಲ. ಅಲ್ಲದೇ ನೀನೇಕೆ ಅವನ ಕ್ಷಮೆ ಕೇಳಬೇಕು? ನೀನೇನು ಅವನಿಗೆ ದ್ರೋಹ ಮಾಡಿಲ್ಲವಲ್ಲ...'' ವ್ಯಂಗ್ಯವಾದ ಮಾತಿನಿಂದ ಇರಿದಳು.

''ಹಾಗಲ್ಲ... ಅವನು ಈ ಮನೆಯಲ್ಲಿ ಬೆಳೆದವನು. ಏನೋ ತಪ್ಪು ನಡೆದು ಹೋಯಿತು. ಹಾಗಂತ ಬಾಂಧವ್ಯ ಹೊರಟುಹೋಗುತ್ತಾ?''

''ಈ ವಿಶ್ವಾಸ ನಿನಗೆ ಯಾವತ್ನಿಂದ? ಅವನು ಸರಿಯಾಗಿದ್ದಾಗಲೇ ನಿನಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಈಗ ತಪ್ಪು ಮಾಡಿದವನನ್ನು ಕ್ಷಮೆ ಕೇಳಿ ಮನೆಗೆ ಕರೆತರುವ ಅವಶ್ಯಕತೆ ಇಲ್ಲ. ನಾನು ಧ್ರುವನ ಹತ್ತಿರ ಮಾತಾಡ್ತೀನಿ. ಅವನು ಅವರ ಅಮ್ಮನನ್ನು ಒಪ್ಪಿಸಲಿ... ಇದಕ್ಕೆ ಎಲ್ಲರೂ ಒಪ್ಪಿದರೆ ಸರಿ, ಇಲ್ಲದಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೀನಿ. ನೀವೆಲ್ಲಾ ಜೈಲಿನ ಕಂಬಿ ಎಣಿಸಬೇಕಾಗುತ್ತದೆ.''

ಮಧು ವಸುಧಾಳ ಕಡೆ ನೋಡಿದ. ಅವಳು ತಲೆತಗ್ಗಿಸಿದ್ದಳು. ಇವಳೊಂದು ತರಹ ಹಠಮಾರಿ. ಭಾರ್ಗವನನ್ನು ಪ್ರೀತಿಸುತ್ತಿದ್ದವಳು ಈಗ ಅವನನ್ನು ದ್ವೇಷಿಸುತ್ತಿದ್ದಾಳೆ. ಮೊದಲೇ ಮನಸ್ಸು ಕೆಟ್ಟು ಹೋಗಿದೆ. ಸೂಯಿಸೈಡ್ ಮಾಡಿಕೊಂಡರೆ, ನನಗೆ ಜೈಲೇ ಗತಿ ಎಂದು ಹೆದರಿದ. ಮೆಲ್ಲಗೆ ಅಲ್ಲಿಂದ ಎದ್ದ.

*   *   *   *

ಬರುವ ಭಾನುವಾರವೇ ಧ್ರುವ-ವನಮಾಲಾಳ ಮದುವೆ ಎಂದು ನಿಶ್ಚಯವಾಗಿತ್ತು. ಧ್ರುವ ತಾಯಿಯನ್ನು ಒಪ್ಪಿಸಿದ್ದ. ಅವಳ ಮನಸ್ಥಿತಿ ಸರಿಯಿಲ್ಲ ಎಂದು ನಡೆದ ವಿಷಯಗಳನ್ನೆಲ್ಲಾ ತಿಳಿಸಿದ. ಸುಮಿತ್ರಾದೇವಿಗೆ ಈ ದಿಢೀರ ಮದುವೆ ಇಷ್ಟವಿರಲಿಲ್ಲವಾದರೂ ವಿಧಿ ಇಲ್ಲದೆ ಒಪ್ಪಿಕೊಂಡಳು.

''ಒಡವೆ, ಜವುಳಿ ಯಾವುದನ್ನು ತರೋಕೂ ಸಮಯವೇ ಇಲ್ಲ. ಮಾಲಾಳ ತಾಯಿಯ ಒಡವೆಗಳು ಇರಬಹುದು ಅಲ್ವಾ? ಇವಳಿಗಲ್ಲದೆ ಇನ್ಯಾರಿಗೆ ಕೊಡ್ತಾನೆ? ಅಲ್ಲಿ ನಿಂತು ಮಾಡುವ ಹೆಂಗಸರೂ ಯಾರೂ ಇಲ್ಲ'' ಆಕೆ ಗೊಣಗಿದಳು.

''ಮೊದಲು ಮದುವೆ ನಡೆಯಲಿ. ಆಮೇಲೆ ಭಾರಿ ರಿಸೆಪ್ಶನ್ ಪಾರ್ಟಿ ಅರೇಂಜ್ ಮಾಡ್ತೀನಿ ಅಂತ ಹೇಳಿದಾನೆ ಮಧು. ಆಗ ನಮ್ಮ ಕಡೆಯವರನ್ನೆಲ್ಲಾ ಇನ್ವೈಟ್ ಮಾಡೋಣ. ಈಗ ನಾವು ಅವರು ಹೇಳಿದ ಹಾಗೆ ಕೇಳೋಣ'' ಪ್ರತಾಪನೇ ಹಾಗೆ ನುಡಿದಾಗ ಆಕೆ ಸುಮ್ಮನಾದಳು.

*   *   *   *

ಭಟ್ಟರನ್ನು ನೋಡಲೆಂದು ಮಾಲಾ ವಸುಧಾಳೊಡನೆ ನರ್ಸಿಂಗ್ ಹೋಂಗೆ ಬಂದಳು. ಭಟ್ಟರು ಕೋಮಾದಿಂದ ಹೊರಬಂದಿರಲಿಲ್ಲ. ಬರುವ ಸಾಧ್ಯತೆಯೂ ಕಡಿಮೆ ಎಂದು ಡಾಕ್ಟರುಗಳು ಹೇಳಿಬಿಟ್ಟಿದ್ದರಿಂದ ಭಾರ್ಗವ ಹತಾಶನಾಗಿದ್ದ.

''ಮಾವನೂ ಇಲ್ಲದಿದ್ದರೆ ನಾನು ಹೇಗೆ ಬದುಕಲಿ?'' ಎಂದು ಅತ್ತ.

ಮಾಲಾಳಿಗೆ ತಾನು ಮದುವೆಗೆ ಒಪ್ಪಿಗೆಯನ್ನು ಕೊಟ್ಟಿರುವ ಸುದ್ದಿಯನ್ನು ಅವನಿಗೆ ಹೇಳಲು ಕಷ್ಟವೆನಿಸಿತು. ತನ್ನಿಂದಲೇ ಅವನಿಗೆ ಅವಮಾನವಾದದ್ದು. ಆದರೆ ಅವನು ಅಪರಾಧಿ ಎನ್ನುವುದನ್ನು ತಪ್ಪಿಸಿದೆ ಎನ್ನುವುದಷ್ಟೇ ಅವಳಿಗೆ ಸಮಾಧಾನ. ಆದರೆ ನಿಜವಾದ ಪ್ರೇಮಿಗಳು ಒಟ್ಟಿಗೇ ಬದುಕಬೇಕು ಅಥವಾ ಸಾಯಬೇಕು. ಆದರೆ ಭಾರ್ಗವನನ್ನು ಸಾಯಿಸಲು ನನಗೆ ಯಾವ ಹಕ್ಕೂ ಇಲ್ಲ. ಅವನು ಮರ್ಯಾದೆಯಾಗಿ ಬದುಕಿದರೆ ನನಗೆ ಅಷ್ಟೇ ಸಾಕು. ಆದರೆ ಇದನ್ನು ಭಾರ್ಗವನಿಗೆ ಹೇಳಿದರೆ ನನ್ನನ್ನು ನಂಬುತ್ತಾನೆಯೇ? ನನ್ನ ಮೇಲಿನ ವಿಶ್ವಾಸ ಮಾಯವಾಗುವುದಂತೂ ನಿಜ. ಈ ಆಲೋಚನೆಗಳಿಂದ ಅವಳಿಗೆ ಭಾರ್ಗವನೊಡನೆ ಮನಬಿಚ್ಚಿ ಮಾತನಾಡಲು ಆಗಲೇ ಇಲ್ಲ. ಭಾರ್ಗವ ಅವಳಲ್ಲಿ ಆದ ಬದಲಾವಣೆಯನ್ನು ಗಮನಿಸಿದ. ಅಲ್ಲಿಂದ ಹೊರಡುವ ಮೊದಲು ಭಾರ್ಗವನನ್ನು ತಬ್ಬಿಕೊಂಡು ಅತ್ತಳು. ''ನನ್ನನ್ನು ಕ್ಷಮಿಸಿಬಿಡು ಭಾರ್ಗವ... ಇಷ್ಟಕ್ಕೆಲ್ಲಾ ನಾನೇ ಕಾರಣ...'' ಭಾರ್ಗವ ಅವಳ ಬೆನ್ನ ಮೇಲೆ ಕೈಯಾಡಿಸಿ ಸಮಾಧಾನ ಹೇಳಿದ.

''ನಿನ್ನನ್ನ ನೀನೇ ಯಾಕೆ ದೂಷಿಸಿಕೊಳ್ತೀಯ... ಹೋಗಲಿಬಿಡು''

''ಭಾರ್ಗವ, ನನ್ನಿಂದ ಏನಾದ್ರೂ ಸಹಾಯ ಬೇಕಾದ್ರೆ ಕೇಳು. ದುಡ್ಡು ಬೇಕಾ ? ಸಂಕೋಚವಿಲ್ಲದೇ ಕೇಳು''

''ಬೇಡ ಮಾಲಾ... ನನ್ನ ಬಳಿ ಸಾಕಷ್ಟು ದುಡ್ಡಿದೆ. ಆದರೆ ಮಾವನ್ನ ಆ ಹಣದಿಂದ ಉಳಿಸಿಕೊಳ್ಳಕ್ಕಾಗ್ತಿಲ್ಲ, ನನಗೆ ಅದೇ ವ್ಯಥೆ... ಮಾವ ಎದ್ದು ಒಂದೇ ಒಂದು ಬಾರಿ ನನ್ನ ಹತ್ತಿರ ಮಾತಾಡಿದರೆ, ನನಗೆ ಅಷ್ಟೇ ಸಾಕು. ನಾನು ಅಪರಾಧಿ ಅಲ್ಲ ಅಂತ ಅವರಿಗೆ ಖಂಡಿತಾ ಗೊತ್ತಿದೆ. ಆದರೆ ಒಮ್ಮೆ ಅವರ ಬಾಯಿಂದ ಕೇಳಿದರೆ ನನಗೆ ಅದೇ ನೆಮ್ಮದಿ...''

''ನಿನ್ನ ಮೇಲೆ ಅವರಿಗೆ ನಂಬಿಕೆ ಇತ್ತು. ನೀನು ಯಾವ ತಪ್ಪನ್ನು ಮಾಡಿಲ್ಲ ಅಂತ ಅವರಿಗೆ ತಿಳಿದಿತ್ತು. ಆದರೆ ನಿನ್ನಂತಹ ಒಳ್ಳೆಯವನಿಗೆ ಎರಗಿದ ಅಪವಾದದ ಸುದ್ದಿಯನ್ನು ಅವರಿಗೆ ತಡೆದುಕೊಳ್ಳಕ್ಕೆ ಆಗಲಿಲ್ಲ. 'ಇದಕ್ಕೆಲ್ಲ ಯಾರು ಕಾರಣವೋ ಅವರಿಗೆ ಶಿಕ್ಷೆಯಾಗುತ್ತೆ. ಒಂದಲ್ಲ ಒಂದು ದಿನ ಪಶ್ಚಾತ್ತಾಪವಾಗುತ್ತದೆ. ಇದಕ್ಕೆಲ್ಲ ಯಾರು ಕಾರಣ ಅಂತ ನಿನಗೆ ಗೊತ್ತಾ?''

''ಹೂಂ, ಗೊತ್ತು. ಆದರೆ ಅವನ ಹೆಸರನ್ನು ನಾನು ಉಸುರುವುದಿಲ್ಲ. ಅವನಿಗೆ ಕೆಟ್ಟದ್ದನ್ನು ಹಾರೈಸುವುದಿಲ್ಲ. ಯಾಕೆಂದರೆ, ನನ್ನ ಅಮೂಲ್ಯವಾದ ವಸ್ತುವೊಂದು ಅವನ ಬಳಿ ಇದೆ. ಅವನು ಅದನ್ನು ನನಗೆ ತಾನಾಗಿಯೇ ಒಪ್ಪಿಸುವವರೆಗೂ, ಅವನು ಚೆನ್ನಾಗಿರಬೇಕು.''

ಮಾಲಾ ವಸುಧಾಳ ಕೈ ಹಿಡಿದಳು. ಅವಳ ಕೈಗಳು ನಡುಗುತ್ತಿರುವುದನ್ನು ವಸುಧಾ ಗಮನಿಸಿದಳು.

''ಯಾಕೋ ತುಂಬಾ ಅಪ್ಸೆಟ್ ಆಗಿದ್ದಾಳೆ. ನಾನು ಮನೆಗೆ ಕರೆದುಕೊಂಡು ಹೋಗ್ತೀನಿ.''

''ಹಾಗೇ ಮಾಡಿ. ಅವಳಿಗೆ ಧರ್ಮಸಂಕಟ... ವಸುಧಾರವರೇ, ಒಂದು ರಿಕ್ವೆಸ್ಟ್, ಮಾಲಾ ನಿಮಗೆ ಆಪ್ತಗೆಳತಿ. ಅವಳಿಗೆ ನೀವೇ ಸಮಾಧಾನ ಹೇಳಬೇಕು'' ಮಾಲಾ ಭಾರ್ಗವನನ್ನೇ ತಿರುಗಿ ತಿರುಗಿ ನೋಡುತ್ತಾ ಮುಂದೆ ಮುಂದೆ ನಡೆದಾಗ ಅವನ ಹೊಟ್ಟೆಯಲ್ಲಿ ಕಲಕಿದಂತಾಗಿತ್ತು. ಮಾಲಾ ತನ್ನಿಂದ ಏನನ್ನೋ ಮುಚ್ಚಿಡ್ತಾ ಇದ್ದಾಳೆ. ಯಾವುದೋ ಅಪರಾಧಿ ಭಾವ ಅವಳ ನೋಟದಲ್ಲಿದೆ ಅಂತ ಅವನಿಗೆ ಅನ್ನಿಸಿತು. ಆದರೆ ಅವಳನ್ನು ಹಿಡಿದು ನಿಲ್ಲಿಸಿಕೊಳ್ಳಲು ಹಿಂಜರಿದ.

* * * *

ಎಂದಿನಂತೆ ಭಾನುವಾರ ಬೆಳಿಗ್ಗೆಯೂ ಸೂರ್ಯೋದಯವಾಯಿತು. ಹಿಂದಿನ ದಿನವೇ ಧ್ರುವ ತನ್ನ ತಾಯಿ ಹಾಗೂ ಪ್ರತಾಪನೊಂದಿಗೆ ಬಂದಿಳಿದಿದ್ದ. ವಸುಧಾ ತನ್ನ ತಂಗಿಯೊಡನೆ ಮಾಲಾಳೊಡನೆ ಉಳಿದುಕೊಂಡಿದ್ದಳು. ಬೆಳಗಿನ ತಿಂಡಿ ಕಾಫಿಯ ನಂತರ ಅರ್ಚಕರು ಮದುವೆಯ ಕಾರ್ಯಕ್ರಮಗಳಿಗೆ ನಾಂದಿ ಹಾಕಿದರು. ವಸುಧಾಳ ತಂದೆ ತಾಯಿ ಬಂದಿದ್ದರು. ಗೆಸ್ಟ್‌ಹೌಸಿನಲ್ಲಿ ಇಳಿದುಕೊಂಡಿದ್ದ ಧ್ರುವನ ಕಡೆಯಿಂದ ಬಂದಿದ್ದವರು ಕೇವಲ ಮೂರೇ ಜನ.

ಮಾಲಾ ಬಹಳ ಸರಳವಾಗಿ ಅಲಂಕರಿಸಿಕೊಂಡಿದ್ದಳು. ಅವಳ ಮುಖದ ಮೇಲೆ ಮದುಮಗಳ ಕಳೆಯೇ ಇರಲಿಲ್ಲ. ನೋಡು ನೋಡುತ್ತಿದ್ದಂತೆಯೇ ಮದುವೆಯ ಶಾಸ್ತ್ರಗಳು ಪ್ರಾರಂಭವಾಗಿ ಕೇವಲ ಅರ್ಧಗಂಟೆಗಳಲ್ಲಿ ಸಮಾಪ್ತಿಯಾಗಿತ್ತು. ಸರಳ ವಿಧಿಗಳನ್ನು ಮಾತ್ರ ಅನುಸರಿಸಿದ್ದರು. ಧ್ರುವ, ವನಮಾಲಾ ದಂಪತಿಗಳೆಂದು ಘೋಷಿಸಿದರು. ಮಾಲಾ ನಿಸ್ತೇಜಳಾಗಿ ಕುಳಿತಿದ್ದಳು.

ವಸುಧಾ ಗೆಳತಿಯ ಅಂತರಂಗದಲ್ಲಿ ನಡೆಯುತ್ತಿರುವ ಕೋಲಾಹಲವನ್ನು ಊಹಿಸಿದ್ದಳು. ಮಾಲಾ ದುಡುಕಿದಳೇನೋ ಅಂತೆನ್ನಿಸಿತ್ತು. ಕೇಟರಿಂಗ್ ಸರ್ವೀಸ್‌ನವರು ಸಮಯಕ್ಕೆ ಸರಿಯಾಗಿ ಬಿಸಿ ಬಿಸಿ ಅಡಿಗೆಗಳನ್ನು ತಂದಿಟ್ಟರು. ಅಲ್ಲಿದ್ದವರಿಗೆ ಬಡಿಸಿದರು. ಅರ್ಚಕರು ತಮಗೆ ಸಿಕ್ಕ ಸಂಭಾವನೆಯಿಂದ ಸಂತುಷ್ಟರಾಗಿ ವಧೂ ವರರನ್ನು ಹಾರೈಸಿ ಹೊರಟುಹೋಗಿದ್ದರು. ಎಲ್ಲರೂ ಅವರವರ ಆಲೋಚನೆಗಳಲ್ಲಿ ಮುಳುಗಿದ್ದರು. ಸುಮಿತ್ರಾದೇವಿ ವಸುಧಾಳ ತಾಯಿಯೊಡನೆ ತನ್ನ ಗತಕಾಲದ ವೈಭವವನ್ನು ಹೇಳಿಕೊಳ್ಳುತ್ತಿದ್ದಳು.

ಇದ್ದಕ್ಕಿದ್ದಂತೆ ಫೋನು ರಿಂಗಾದಾಗ ಎಲ್ಲರೂ ಬೆಚ್ಚಿಬಿದ್ದರು. ಅಲ್ಲಿಯೇ ಕುಳಿತಿದ್ದ

ವಸುಧಾ ಫೋನನ್ನೆತ್ತಿಕೊಂಡಳು. ಅತ್ತಲಿಂದ ಭಾರ್ಗವ ಮಾತಾಡಿದ್ದ. ''ಸ್ವಲ್ಪ ಮಾಲಾನ್ನ ಕರೀತೀರಾ?''

''ಒಂದ್ನಿಮಿಷ'' ಎಂದು ಹೇಳಿ ಇತ್ತ ತಿರುಗಿ, ''ಭಾರ್ಗವ... ಮಾಲಾಳ ಹತ್ತಿರ ಮಾತನಾಡಬೇಕಂತೆ'' ಎಂದಿದ್ದಳು. ಎಲ್ಲರ ಮುಖದ ಬಣ್ಣವೂ ಬದಲಾಗಿತ್ತು.

ಮಾಲಾ ಬಂದು ರಿಸೀವರ್‌ನೆತ್ತಿಕೊಂಡು 'ಹಲೋ' ಎಂದಳು.

''ಮಾಲಾ... ಮಾಲಾ...'' ಭಾರ್ಗವ ಅಳುತ್ತಾ ಮಾವ ತೀರಿಹೋದ ಸುದ್ದಿಯನ್ನು ತಿಳಿಸಿದ. ಮಾಲಾ ಚೀರಿ, ಹಾಗೇ ಉರುಳಿ ಬಿದ್ದುಬಿಟ್ಟಳು. ಅತ್ತಲಿಂದ ''ಹಲೋ ಹಲೋ'' ಎಂದು ಭಾರ್ಗವ ಕೂಗುತ್ತಲೇ ಇದ್ದ.

''ಮಾಲಾ... ಏನಾಯ್ತು... ಏನಾಯ್ತು...'' ವಸುಧಾಳ ಧ್ವನಿ ಅವನಿಗೆ ಕೇಳಿಸಿತ್ತು. ತಾನು ತಪ್ಪು ಮಾಡಿದೆನೇನೋ ಎಂದುಕೊಂಡು ಲೈನ್ ಕಟ್ ಮಾಡಿದ. ಕೆಲವೇ ನಿಮಿಷಗಳಲ್ಲಿ ಮಾಲಾ ಕಣ್ಣು ತೆರೆದು, ''ಭಟ್ಟರು... ಭಟ್ಟರು...'' ಎಂದು ಅಳತೊಡಗಿದಳು. ತಕ್ಷಣದಲ್ಲಿ ಅಲ್ಲಿದ್ದವರಿಗೆಲ್ಲಾ ಆ ವಾರ್ತೆ ತಿಳಿಯಿತು. ಮಧು ಅತ್ತಿಂದಿತ್ತ ತಿರುಗಿ ಚಡಪಡಿಸಿದ. ಮಾಲಾ ಅಲ್ಲಿಗೆ ಹೋಗ್ತೀನಿ ಅಂತ ಎಲ್ಲಿ ಹಠ ಹಿಡಿಯುತ್ತಾಳೋ ಎಂದು ಹೆದರಿದ್ದ. ಎಲ್ಲರೂ ಬಾಯನ್ನು ಹೊಲಿದುಕೊಂಡಿದ್ದವರಂತೆ ಸುಮ್ಮನೇ ಕುಳಿತಿದ್ದರು.

''ಭಟ್ಟರನ್ನು ಕೊನೆಯ ಬಾರಿ ನೋಡಿಕೊಂಡು ಬರ್ತೀನಿ'' ಎಂದು ಹೊರಟ ಮಧುವನ್ನೂ ಮಾಲಾ ತಡೆದಳು.

''ನೀನು ಆ ಹಕ್ಕನ್ನು ಕಳೆದುಕೊಂಡಿದೀಯ... ನೀನು ಹೋಗಬೇಡ'' ಎಂದು ಅಬ್ಬರಿಸಿದಳು. ಎಲ್ಲರೂ ಗಾಬರಿಯಾಗಿದ್ದರು. ಮತ್ತೆ ಭಾರ್ಗವ ಫೋನು ಮಾಡುತ್ತಾನೇನೋ ಅಂತ ಎಲ್ಲರೂ ಕಾದರು. ಮಾಲಾ ಬಿಕ್ಕಿ ಬಿಕ್ಕಿ ಅಳುತ್ತಲೇ ಇದ್ದಳು. ಮೊದಲೇ ಸಂಭ್ರಮದ ವಾತಾವರಣವಿರಲಿಲ್ಲ. ಈಗಿನ ವಾತಾವರಣ ಅಸಹನೀಯವಾಗಿತ್ತು. ನೋಡು ನೋಡುತ್ತಿದ್ದಂತೆಯೇ ಸಮಯ ಕಳೆದಿತ್ತು. ಸೂರ್ಯ ಮುಳುಗಿದ. ಕತ್ತಲೆಯಾಯಿತು... ಎಲ್ಲರ ಮನವೂ ಕತ್ತಲಲ್ಲಿ ಕಪ್ಪಾಗಿತ್ತು.

ಸುಮಿತ್ರಾದೇವಿ ಇದೆಂತಹ ದುರ್ದಿನ ಎಂದು ಪೇಚಾಡಿಕೊಂಡಳು. ಮದುವೆಯಂತೂ ನೆರವೇರಿದೆ. ಆದರೆ ನವದಂಪತಿಗಳು ಒಟ್ಟಿಗೆ ಮಲಗಲು ಈ ದಿನ ಪ್ರಶಸ್ತವಲ್ಲ. ಮಾಲಾಳ ಮನಸ್ಸು ಸ್ಥಿಮಿತಕ್ಕೆ ಬರೋವರೆಗೂ ಅವರಿಬ್ಬರೂ ದೂರ ದೂರವಿರುವುದೇ ಒಳ್ಳೆಯದು ಎಂದು ಆಕೆಗೆ ಅನ್ನಿಸಿತ್ತು. ಅದೇ ಮಾತನ್ನು ಮಧುಕರನಿಗೆ ಹೇಳಿದಾಗ, ಅವನಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ. ಧ್ರುವ ಧೈರ್ಯ ಮಾಡಿ ಮಾಲಾಳೊಡನೆ ಮಾತಾಡಿದ.

''ವೆರಿ ಸಾರಿ ಮಾಲಾ... ನಿನಗೆ ತುಂಬಾ ದುಃಖ ಆಗಿದೆ. ಆ ದುಃಖವನ್ನು ಹೇಗೆ ಕಡಿಮೆ ಮಾಡಬೇಕೋ ನನಗೆ ತಿಳಿಯದು. ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ನೇರವಾಗಿ ಹೇಳಿಬಿಡು...''

''ಪ್ಲೀಸ್, ಇವತ್ತು ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿ... ನನಗೆ ಯಾರೊಡನೆಯೂ ಮಾತು ಬೇಕಿಲ್ಲ''

''ಮದುಮಕ್ಕಳು ಉಪವಾಸ ಮಲಗಬಾರದು. ಒಂದು ತುತ್ತು ಮಜ್ಜಿಗೆ ಅನ್ನವನ್ನಾದರೂ ಊಟ ಮಾಡಬೇಕು'' ಎಂದು ಹೇಳಿ ಬಲವಂತದಿಂದ ಮಾಲಾಳನ್ನು ಊಟಕ್ಕೆ ಎಬ್ಬಿಸಿದರು. ಅವಳ ಗಂಟಲಲ್ಲಿ ಅನ್ನ ಇಳಿಯುವುದೇ ಕಷ್ಟವಾಯಿತು. ವಸುಧಾ ಅಲ್ಲೇ ಉಳಿದುಕೊಂಡಳು. ಅವಳ ತಂದೆ, ತಾಯಿ ಹಾಗೂ ತಂಗಿ, ತಮ್ಮ ಮನೆಗೆ ಹೊರಟು ಹೋಗಿದ್ದರು. ಮಧು, ತಾನೇ ಸುಮಿತ್ರಾದೇವಿ ಹಾಗೂ ಪ್ರತಾಪನನ್ನು ಗೆಸ್ಟ್‌ಹೌಸಿಗೆ ಬಿಟ್ಟುಬಂದ. ಧ್ರುವನನ್ನು ಬಲವಂತವಾಗಿ ತನ್ನ ಮನೆಯಲ್ಲಿ ಉಳಿಸಿಕೊಂಡ.

ರಾತ್ರಿ ಎಷ್ಟೋ ಹೊತ್ತಿನ ತನಕ, ಮಧು, ಧ್ರುವ ಮಾತನಾಡುತ್ತಾ ಕಾಲ ಕಳೆದರು. ಮಧ್ಯೆ ಮಧ್ಯೆ ಮದ್ಯಸೇವನೆಯೂ ನಡೆದಿತ್ತು. ನಂತರ ಯಾವಾಗಲೋ ಹಾಸಿಗೆಯ ಮೇಲೆ ಉರುಳಿಕೊಂಡರು. ಮಾಲಾ ಬೆಳಗಾಗುವುದನ್ನೇ ಕಾಯುತ್ತಾ ಮಲಗಿದ್ದಳು. ಮಧ್ಯೆ ಮಧ್ಯೆ ನಿದ್ದೆ ಹೋಗಿದ್ದ ವಸುಧಾಳನ್ನು ಎಬ್ಬಿಸಿ ಮಾತಿಗೆಳೆಯುತ್ತಿದ್ದಳು.

ಬೆಳಗಾಯಿತು... ಸುಮಿತ್ರಾದೇವಿ ಫೋನು ಮಾಡಿ, ತಾವುಗಳು ಇವತ್ತೇ ಊರಿಗೆ ಹೊರಡುವುದಾಗಿ ತಿಳಿಸಿದಾಗ, ಮಧು ಸರಿಯಾಗಿ ಎಚ್ಚರಗೊಂಡ. ಪಕ್ಕದಲ್ಲಿ ಉರುಳಿಕೊಂಡಿದ್ದ ಧ್ರುವನನ್ನು ಎಬ್ಬಿಸಿದ. ತಾಯಿಯ ಮಾತು ಅರ್ಥವಾಗಲು ಅವನಿಗೆ ಸಮಯ ಹಿಡಿಯಿತು.

''ಮಾಲಾ ಇವತ್ತೇ ಬರುವುದಿಲ್ಲ. ಅವಳನ್ನು ಇಲ್ಲಿ ಬಿಟ್ಟು ಬಂದರೂ ಚೆನ್ನಾಗಿರಲ್ಲ. ಏನು ಮಾಡಲಿ ನೀನೇ ಹೇಳು'' ಕೇಳಿದ.

''ಇನ್ನೊಂದೆರಡು ದಿನ ನೀನು ಅಲ್ಲೇ ಇದ್ದು, ಅವಳನ್ನು ಕರೆದುಕೊಂಡು ಬಾ... ನಮ್ಮನ್ನು ಏರ್‌ಪೋರ್ಟ್‌ಗೆ ತಲುಪಿಸುವ ವ್ಯವಸ್ಥೆ ಮಾಡು'' ಎಂದಳು.

* * * *

''ನಾನು, ಹೆದರಿಬಿಟ್ಯಾ?..'' ಧ್ರುವ ಕಳ್ಳನಂತೆ ಒಳಗೆ ಬಂದಿದ್ದ.

''ಇಲ್ಲೇನು ಮಾಡ್ತಿದೀರಿ...'' ಅವಳ ಧ್ವನಿಯ ಬಿರುಸಿಗೆ ಹೆದರಿದ.

''ಎಲ್ಲಾದ್ರೂ ಹೊರಗೆ ತಿರುಗಾಡಿ ಬರೋಣ್ವಾ... ಬರ್ತೀಯಾ?...''

''ಇಲ್ಲ, ನನಗೆ ಮೂಡ್ ಇಲ್ಲ...'' ಎದ್ದು ಕುಳಿತು ಸುತ್ತಲೂ ನೋಡಿದಳು. ''ವಸು ಎಲ್ಲಿ?''

''ಅವರು ಮನೆಗೆ ಹೋಗಿದಾರೆ. ಮಧು ಬಿಟ್ಟು ಬರಲು ಹೋಗಿದಾನೆ...''

''ಓ... ಹೊರಗೇ ಕೂತು ಮಾತನಾಡೋಣ ಬನ್ನಿ...'' ರೂಮಿನಿಂದ ಹೊರಕ್ಕೆ ಬಂದರೆ ಸಾಕು ಎನಿಸಿತ್ತು. ಎದುರುಬದುರು ಕುಳಿತರು. ಮಾತು ಪ್ರಾರಂಭಿಸುವುದು ಹೇಗೆ ಎಂದು ಗೊತ್ತಾಗಿರಲಿಲ್ಲ, ಕಡೆಗೆ ಮಾಲಾಳೇ ಕೇಳಿದಳು.

"ನೀವು ಯಾವಾಗ ಊರಿಗೆ ಹೋಗ್ತಾ ಇದೀರಿ?..."

"ಯಾವಾಗ ಹೋಗೋಣ ನೀನೇ ಹೇಳು..."

"ಸದ್ಯಕ್ಕೆ ನಾನಂತೂ ಎಲ್ಲಿಗೂ ಬರಲ್ಲ. ನಿಮಗೆ ಆಫೀಸು, ಬಿಸಿನೆಸ್ ಕೆಲಸ ಇರುತ್ತೆ ಅಲ್ವಾ?"

"ಎಲ್ಲಾ ಹೇಗೋ ನಡೆಯುತ್ತೆ. ಪ್ರತಾಪ್ ಇದಾನಲ್ಲ. ನಾವು ಹನಿಮೂನ್‌ಗೆ ಯಾವಾಗ ಹೋಗೋಣ? ಎಲ್ಲಿಗೆ ಹೋಗೋಕೆ ಇಷ್ಟ ನಿನಗೆ?'

"ನನಗೆ ಯಾವುದರಲ್ಲೂ ಇಂಟರೆಸ್ಟ್ ಇಲ್ಲ. ಮತ್ತೆ ಮತ್ತೆ ಅದೇ ಮಾತುಗಳನ್ನು ಕೇಳಬೇಡಿ."

"ಯಾಕೆ ನಿನಗೆ ಈ ಮದುವೆ ಇಷ್ಟವಿರಲಿಲ್ವಾ? ಮದುವೆಗೆ ಯಾಕೆ ಒಪ್ಪಿಕೊಂಡೆ?"

"ನಾನು ಲವ್ ಮಾಡಿ ಮದುವೆಯಾಗಬೇಕೂಂತ ಅಂದುಕೊಂಡಿದ್ದೆ... ಆದರೆ ಈಗ ಮದುವೆ ಮೊದಲಾಗಿದೆ. ನನಗೆ ಸ್ವಲ್ಪ ಸಮಯ ಬೇಕೇಬೇಕು. ನೀವು ಯಾವುದೇ ವಿಷಯಕ್ಕೂ ನನಗೆ ಫೋರ್ಸ್ ಮಾಡಬಾರದು."

"ಇದನ್ನೇಕೆ ಮೊದಲೇ ಹೇಳಲಿಲ್ಲ?"

"ನಾನು ಕಾಂಪ್ರಮೈಸ್ ಮಾಡಿಕೊಂಡಿದೀನಿ... ಹಾಗಂತ ತಕ್ಷಣಕ್ಕೆ ನನ್ನ ಭಾವನೆಗಳನ್ನು ಬದಲಾಯಿಸಿಕೊಳ್ಳಲು ಆಗುವುದಿಲ್ಲ. ನೀವೂ ಎಜುಕೇಟೆಡ್... ತಿಳುವಳಿಕೆಯುಳ್ಳವರು. ನನ್ನ ಭಾವನೆಗಳಿಗೆ ಬೆಲೆ ಕೊಡ್ತೀರಿ ಅಂತ ಅಂದುಕೊಂಡಿದೀನಿ" ಧ್ರುವ ನಿರುತ್ತರನಾದ. ಕಾರು ಬಂದು ನಿಂತ ಸದ್ದು ಕೇಳಿದ ಕೂಡಲೇ, ಮಾಲಾ ಎದ್ದು ಒಳಕ್ಕೆ ಹೊರಟುಹೋಗಿದ್ದಳು. ಧ್ರುವ ಒಂದು ಮ್ಯಾಗ್ಜೈನ್ ಹಿಡಿದು ಪುಟಗಳನ್ನು ತಿರುವಿದ. ಒಬ್ಬನೇ ಕೂತವನನ್ನು ಕಂಡು ಹುಬ್ಬೇರಿಸಿದ ಮಧು, "ಮಾಲಾನ್ನ ಎಬ್ಬಿಸಬೇಕಾಗಿತ್ತು..." ನುಡಿದ.

"ಪರವಾಗಿಲ್ಲ ಬಿಡು... ಅವಳು ರೆಸ್ಟ್ ತಗೊಳ್ಳಲಿ..."

"ನೀನು ಹೀಗೇ ಸುಮ್ಮನಿದ್ದರೆ, ಅವಳು ನಿನ್ನನ್ನು ಹತ್ತಿರಕ್ಕೆ ಕರೆಯಲ್ಲ" ಇಬ್ಬರೂ ಸುಮ್ಮನೆ ಪೆದ್ದನಗೆ ನಕ್ಕರು. "ಕಾಫಿ ತರಿಸ್ತೀನಿ" ಎನ್ನುತ್ತಾ ಮಧು ಹೋಟೆಲ್ಲಿಗೆ ಫೋನು ಮಾಡಿದ.

"ನಿನ್ನ ತಂಗಿಗೆ ಭಾರ್ಗವನ ಮೇಲಿನ ಮೋಹ ಕಡಿಮೆಯಾಗಲಿಲ್ಲ, ಇನ್ನೂ ಹೆಚ್ಚಾಗಿರಬೇಕು."

"ನಾವು ಮಾಡಿದ ಪ್ಲಾನ್ ಸರಿಹೋಗಲಿಲ್ಲ, ಹೋಗಲಿ ಬಿಡು, ಮದುವೆ ಯಾಯ್ತಲ್ಲ ಅದು ಮುಖ್ಯ."

"ಅವಳು ಭಾರ್ಗವನ ಸೇಫ್ಟಿಗೋಸ್ಕರವೇ ನನ್ನನ್ನ ಒಪ್ಪಿಕೊಂಡಿದಾಳೆ. ಹೀಗೇ ಮುಂದುವರಿದರೆ ಏನು ಮಾಡಲಿ?"

''ಏನು ಮಾಡಬೇಕೂಂತ ನಾನು ಹೇಳಿಕೊಡಬೇಕಾ? ನಾನಂತೂ ಪಕ್ಕಾ ಬ್ರಹ್ಮಚಾರಿ'' ಮಧು ಕಿಸಕ್ಕನೆ ನಕ್ಕ.

''ಮದುವೆಯಾಗಿಯೂ ನಾನು ಬ್ರಹ್ಮಚಾರಿ...'' ಹಾಗೆ ಹೇಳಿದರೂ ಧ್ರುವ ಮಧುಕರನ ಕಣ್ಣು ತಪ್ಪಿಸಿದ.

''ವಸುಧಾನ್ನ ಕೇಳೋಣ. ಮಾಲಾಗೆ ಏನು ಇಷ್ಟ... ಏನು ಬೇಕು ಅಂತ. ಅವಳಿಗೆ ಗೊತ್ತಿರುತ್ತೆ.''

''ಸದಾ ವಸುಧಾನ್ನೇ ಕೇಳೋಕೆ ಆಗುತ್ತಾ. ನಿನ್ನ ತಂಗೀನೂ ಮಾತ್ನಾಡಲಿ.''

''ಮಾತ್ನಾ ಬಹಳ ಷಾರ್ಪ್ ಆಗಿ ಆಡ್ತಾಳಪ್ಪಾ... ಈಗೇಕೋ ಮಂಕಾಗಿದಾಳೆ ಅಷ್ಟೇ...''

''ಆ ವಸುಧನ್ನ ಕಳಿಸಿದರೆ ಎಲ್ಲಾ ಸರಿ ಹೋಗಬಹುದು.''

''ನಾನು ಯೋಚಿಸ್ತಿದ್ದೆ, ವಸುಧಾ ಸದಾ ನಮ್ಮ ಮನೇಲೇ ಇದ್ದರೆ ಹೇಗೆ ಅಂತ...'' ಕಣ್ಣು ಕಿರಿದು ಮಾಡಿ ನಕ್ಕ.

''ಅಂದರೆ... ಯೂ ಮೀನ್ ಟು ಮ್ಯಾರೀ ಹರ್...''

''ಎಸ್... ಆದರೆ ಹೇಗೆ ಕೇಳೋದು ಅಂತ ಯೋಚಿಸ್ತಿದ್ದೆ...''

''ಅವಳು ಒಪ್ಪಿಕೊಳ್ತಾಳೆ ಅಂತ ನನಗನ್ನಿಸಲ್ಲ''

''ಯಾಕೆ ಒಪ್ಪಲ್ಲ, ನಾನು ಯಾವುದರಲ್ಲಿ ಕಡಿಮೆ ಆಗಿದೀನಿ?''

''ಮಾಲಾ ನಿನ್ನ ಮೇಲೆ ಚಾಡಿ ಹೇಳದೇ ಇರ್ತಾಳಾ! ಒಂದು ವೇಳೆ ಅವಳು ಒಪ್ಪಿದರೂ ಮಾಲಾ ಬೇಡಾಂತಾಳೆ... ನೋಡ್ತಿರು.''

''ಮಾಲಾನ್ನ ಭಾರ್ಗವನ್ನ ದೂರ ಮಾಡಿದ ಹಾಗೇ, ವಸುಧಾಳನ್ನೂ ಮಾಲಾಳನ್ನೂ ದೂರ ಮಾಡೋಕೆ ಏನಾದ್ರೂ ಪ್ಲಾನ್ ಇದ್ದರೆ ಹೇಳು.''

''ಈ ಪ್ಲಾನೂ ನೀನೇ ಹುಡುಕು. ನನಗೆ ಅದೆಲ್ಲ ಗೊತ್ತಾಗಲ್ಲ. ಆದರೆ ವಸುಧನ್ನ ನೋಡಿದರೆ ಶ್ರೀಮಂತೆ ಅಂತ ಅನ್ನಿಸಲ್ಲ''

''ನನಗೆ ಶ್ರೀಮಂತ ಹುಡುಗಿ ಬೇಡ... ಈಗ ಭಟ್ಟರೂ ಇಲ್ಲ, ನನಗೆ ಅಡಿಗೆ ಮಾಡಿ ಹಾಕಕ್ಕೆ ಒಂದು ಹೆಣ್ಣು ಬೇಕು.''

''ಹೆಣ್ಣೇ ಯಾಕೆ? ಅಡಿಗೆಗೆ ಒಬ್ಬ ಹುಡುಗನ್ನ ಇಟ್ಕೋ...''

''ಮಾಲಾನೂ ಹೊರಟುಹೋಗ್ತಾಳೆ. ಅವಳ ಜಾಗ ತುಂಬಕ್ಕೆ ಒಬ್ಬ ಹುಡುಗಿ ಇರಲಿ ಅಂತ.''

''ಯೂ ರಾಸ್ಕಲ್... ತಬ್ಬಿಕೊಂಡು ಮಲಗೋಕೆ ಒಬ್ಬಳು ಹೆಂಡತಿ ಬೇಕು ಅಂತ ನೇರವಾಗಿ ಯಾಕೆ ಹೇಳಬಾರದು?'' ಸ್ನೇಹಿತನ ಬೆನ್ನ ಮೇಲೆ ಹಿತವಾಗಿ ಗುದ್ದಿದ.

"ಅದನ್ನೆಲ್ಲ ಭಾವನಾದೋನು ನೀನು ಅರ್ಥ ಮಾಡ್ಕೋಬೇಕು.... ನೀವಿಬ್ಬರೂ ಹೋಗಿ ವಸುಧಾಳ ತಂದೆ ಹತ್ತಿರ ಮಾತಾಡ್ತೀರಾ?"

"ಮೊದಲು ನಿನ್ನ ಮುದ್ದು ತಂಗಿ ಏನಂತಾಳೆ ಅಂತ ತಿಳಕೋ..."

"ನೀನೇ ಮಾಲಾಳ ಹತ್ತಿರ ಮಾತಾಡು. ನಿನಗೆ ಆ ಹಕ್ಕಿದೆ. ನನಗೆ ಅವಳೊಡನೆ ಸಲುಗೆಯೇ ಇಲ್ಲ."

'ಆಲ್‌ರೈಟ್ ಈಗಲೇ ಕೇಳ್ತೀವಿ' ಅಂತ ಮಾಲಾಳ ರೂಮಿಗೆ ಬಂದ. ರೂಮಿನ ದೀಪ ಸಹ ಹಾಕಿರಲಿಲ್ಲ. ಕತ್ತಲಿನಲ್ಲಿ ಮಲಗಿದ್ದ ಮಾಲಾ ನರಳುತ್ತಿದ್ದ ಧ್ವನಿ ಕೇಳಿಸಿತು. "ಮಧೂ, ಮಧೂ..." ಎಂದು ಅವನನ್ನು ಕರೆದ. ಮಧು ಒಳ ಬಂದು ದೀಪ ಹಾಕಿದ. ಮಾಲಾ ನರಳುತ್ತಿದ್ದಳು. ಅವಳ ಹಣೆಯ ಮೇಲೆ ಕೈ ಇಟ್ಟ. ಜ್ವರದಿಂದ ಮೈ ಸುಡುತ್ತಿತ್ತು.

"ಜ್ವರ ಬಂದಿದೆ... ಈಗ ಏನ್ಮಾಡೋದು... ಎಬ್ಬಿಸು..."

"ನೀನೇ ಎಬ್ಬಿಸು..." ಅವರಿಬ್ಬರ ಧ್ವನಿಗೆ ಅವಳು ಎಚ್ಚರಗೊಂಡಳು. ಕಣ್ಣು ಬಿಟ್ಟಳು. ಕಣ್ಣುಗಳು ಕೆಂಡವಾಗಿದ್ದವು. "ವಸುಧಾ... ವಸುಧಾ..." ನರಳುತ್ತಾ ಕರೆದಳು.

"ಅವಳು ಮನೆಗೆ ಹೋಗಿದಾಳೆ. ಫೋನು ಮಾಡ್ಲಾ?" ಹೂಂ ಎನ್ನುವಂತೆ ತಲೆಯಾಡಿಸಿದಳು. ಮಧು ವಸುಧಾಳಿಗೆ ಫೋನು ಮಾಡಿ, ಹಾಗೇ ಡಾಕ್ಟರಿಗೂ ಫೋನು ಮಾಡಿದ. ಹತ್ತೇ ನಿಮಿಷದಲ್ಲಿ ವಸುಧಾ ಬಂದಳು. ಮಧು ನಿರಾಳವಾದ.

"ನಿಮ್ಮ ಸ್ನೇಹಿತೆಗೆ ಜ್ವರ ಬಂದಿದೆಯಲ್ರೀ..."

"ನಂಗೆ ಗೊತ್ತಾಗ್ಲೇ ಇಲ್ಲ. ಯಾಕೆ ಏನಾಯ್ತಂತೆ?" ಅಷ್ಟರಲ್ಲಿ ಡಾಕ್ಟರು ಬಂದು ಚೆಕಪ್ ಮಾಡಿ ಮಾತ್ರೆಗಳನ್ನು ಬರೆದುಕೊಟ್ಟರು.

"ಜ್ವರ ಜಾಸ್ತೀನೇ ಇದೆ. ನಾಳೆ ಬೆಳಿಗ್ಗೆ ಹೊತ್ತಿಗೆ ಕಡಿಮೆ ಆಗದಿದ್ದರೆ ಇಂಜೆಕ್ಷನ್ ಕೊಡ್ತೀನಿ" ಎಂದಿದ್ದರು. ಎರಡು ದಿನಗಳು ಕಳೆದರೂ ಅವಳಿಗೆ ಜ್ವರ ಇಳಿಯಲಿಲ್ಲ. ಮಧ್ಯಾಹ್ನದ ಹೊತ್ತಿಗೆ ಮೈಯಲೆಲ್ಲಾ ಗುಳ್ಳೆಗಳು. ವಸುಧಾ ಗಾಬರಿಯಿಂದ ಅವಳ ತಾಯಿಗೆ ಹೇಳಿಕಳಿಸಿದಳು. ಆಕೆ ಮೈಯೆಲ್ಲಾ ಎದ್ದಿರುವ ಗುಳ್ಳೆ "ಸೀತಾಳ ಸಿಡುಬು" ಎಂದು ದೃಢೀಕರಿಸಿದಳು.

"ಸೀತಾಳ ಸಿಡುಬು!" ಎಲ್ಲರೂ ಅವಳ ಸಮೀಪಕ್ಕೆ ಹೋಗಲು ಹೆದರಿದರು. ಅದು ಸಾಂಕ್ರಾಮಿಕ, ತಮಗೂ ಎದ್ದು ಬಿಟ್ಟರೆ. ವಸುಧಾಳ ತಾಯಿಯ ಸಲಹೆಯಂತೆ ಮಾಲಾಳನ್ನು ನರ್ಸಿಂಗ್ ಹೋಂಗೆ ಸೇರಿಸಿದರು.

"ಮನೇಲಿ ಗಂಡು ಹುಡುಗರು. ವಸುಧಾ ಹುಡುಗಿ... ಹುಶಾರಾಗೋವರೆಗೂ ನೀನು ನರ್ಸಿಂಗ್ ಹೋಂನಲ್ಲಿರುವುದು ಒಳ್ಳೆಯದು" ಎಂದು ಮಾಲಾಳನ್ನು ಒಪ್ಪಿಸಿದರು. ಮಾಲಾ ಅತ್ತಳು.

''ಅಳಬೇಡಮ್ಮ... ಅತ್ತರೆ ನಂಜಾಗುತ್ತೆ. ಬೇಗ ಹುಶಾರಾಗಬೇಕೋ ಇಲ್ಲವೋ... ನಿನ್ನ ಅತ್ತೇನ ಕರೆಸೋಣವಾ!''

''ಬೇಡ ಆಂಟಿ, ಅವರು ಬಂದು ಏನ್ಮಾಡ್ತಾರೆ! ನನ್ನ ಹಣೇಲಿ ಇದ್ದ ಹಾಗಾಗುತ್ತೆ ಒಂದು ವೇಳೆ ನಾನೇನಾದರೂ ಸತ್ತುಹೋದರೆ, ಭಾರ್ಗವ ಬಂದು ನೋಡ್ತಾನೆ ಅಲ್ವಾ ಆಂಟಿ?''

''ಥೂ ಬಿಡ್ತು ಅನ್ನು. ಹಾಗೆಲ್ಲಾ ಮಾತನಾಡಬಾರದು. ಈಗ ಮೈಮೇಲೆ ಅಮ್ಮ ಬಂದಿದೆ. ಅದನ್ನು ತಂಪು ಮಾಡೋ ಹಾಗೆ, ಪಥ್ಯದಲ್ಲಿರಬೇಕು. ಎಲ್ಲಾ ಸರಿ ಹೋಗುತ್ತದೆ.''

''ಆಂಟೀ, ನನಗೇ ಯಾಕೆ ಹೀಗಾಯ್ತು! ಕಲೆ ಉಳಿದುಬಿಟ್ಟರೇ...''

''ಕಲೆ ಗಿಲೆ ಏನೂ ಉಳಿಯಲ್ಲ. ಎಲ್ಲಾ ಒಣಗಿದ ಮೇಲೆ ಎಳನೀರಿನಲ್ಲಿ ತೊಳೆದು ಕೊಂಡರೆ, ಒಂದು ಚೂರೂ ಕಲೆ ಇಲ್ಲದೆ ಹಾಗೆ ಮಾಯವಾಗುತ್ತದೆ. ನಾನು ಬಂದು ಆಸ್ಪತ್ರೇಲಿ ನಿನ್ನ ಜೊತೆಗೆ ಮಲಗ್ತೀನಿ. ನೀನೇನೂ ಭಯಪಡಬೇಡ.''

ಮಧು ದಿಕ್ಕುಗೆಟ್ಟವನಂತೆ ಪರದಾಡಿದ. ಇದ್ಯಾಕೆ ಹೀಗಾಯ್ತು? ಮೊನ್ನೆ ಮದುವೆ ಯಾದವಳಿಗೆ ಇದ್ಯಾವ ಶಾಪ? ಭಟ್ಟರಿಗೆ ಬೇಸರವಾಗಿದ್ದರೆ ಆ ಶಾಪ ನನಗೆ ತಟ್ಟ ಬೇಕಾಗಿತ್ತು.. ಇವಳಂತೆ ನನಗೂ ಈ ಸಿಡುಬು ಎದ್ದುಬಿಟ್ಟರೇ... ಭಯದಿಂದ ತತ್ತರಿಸಿದ. ಮೊದಲು ನಾನು ಒಂದು ವ್ಯಾಕ್ಸಿನೇಶನ್ ಹಾಕಿಸ್ಕೊಳ್ಳಲೇ ಬೇಕು... ಡಾಕ್ಟರರ ಹತ್ತಿರ ಮಾತನಾಡಿದ.

ಸ್ಪೆಶಲ್ ವಾರ್ಡಿನಲ್ಲಿ ಮಲಗಿದ್ದ ಮಾಲಾ ಭಾರ್ಗವನ ಧ್ವನಿ ಕೇಳಿ ಕನಸೆಂದೇ ಭಾವಿಸಿದಳು. ''ಮಾಲಾ... ಮಾಲಾ...'' ಮತ್ತೆ ಭಾರ್ಗವ ಕರೆದಾಗ ಕಣ್ಣು ಬಿಟ್ಟಳು. ಎದುರಿಗೆ ನಿಜವಾಗಿಯೂ ಅವನೇ... ಕಣ್ಣಿನಲ್ಲಿ ನೀರು ತುಂಬಿಕೊಂಡು ಮಂಜಾದವು. ಪಕ್ಕಕ್ಕೆ ಕತ್ತು ತಿರುಗಿಸಿದಳು.

''ಏನಾಯ್ತು? ಆಸ್ಪತ್ರೇಲಿ ಯಾಕೆ ಇದೀಯ? ಏನು ಮಾಡ್ಕೊಂಡೆ?...'' ಒಂದೇ ಉಸಿರಿಗೆ ಕೇಳಿದ.

ನರ್ಸು ಬಂದವಳು, ''ಚಿಕನ್‌ಪಾಕ್ಸ್ ಆಗಿದೆ... ದೂರ ನಿಂತ್ಕೊಂಡು ಮಾತಾಡಿ'' ಎಂದು ನುಡಿದಾಗ ಭಾರ್ಗವ ಪೆಚ್ಚಾದ.

''ಏನಾಯ್ತು! ನಿಜ ಹೇಳು...'' ಅವನು ಅವಳ ಕೈ ಹಿಡಿದ.

''ದೂರ ಹೋಗು... ನನ್ನನ್ನು ಮುಟ್ಟಬೇಡ...'' ಗದರಿದಳು. ಅವನು ಕೈ ಬಿಟ್ಟ. ''ನಾನು ಪಾಪಿ... ನಾನು ಪಾಪಿ... ನಾನು ಭಟ್ಟರನ್ನು ಕೊನೇ ಬಾರಿ ಕೂಡಾ ನೋಡೋಕೆ ಬರಲಿಲ್ಲ, ಅದಕ್ಕೇ ಈ ಶಿಕ್ಷೆ... ನನ್ನನ್ನು ಕ್ಷಮಿಸು...''

''ಛೇ... ಹಾಗೆಲ್ಲಾ ಹೇಳಬೇಡ''

''ನೀನು ಕಾದೂ ಕಾದೂ ಊರಿಗೆ ಹೋದೆ ಅಂತ ತಿಳೀತು. ಮನೇಗೆ ಬಾಡಿಯನ್ನು ತರಬಹುದಾಗಿತ್ತಲ್ಲ...''

''ಮನೆ? ಯಾವ ಮನೆ? ನನಗೆಲ್ಲಿದೆ ಮನೆ?...''

''ಹೀಗಾಗಬಾರದಿತ್ತು ಭಾರ್ಗವ... ಯಾಕೆ ಹೀಗಾಯ್ತು?''

''ನಾನು ನತದೃಷ್ಟ. ಅದಕ್ಕೇ ಹೀಗಾಯ್ತು. ಹೋಗಲಿ ಬಿಡು. ಈಗ ರೆಸ್ಟ್ ತಗೋ. ನಾನು ಮತ್ತ ಆದಾಗ ಬರ್ತೀನಿ.''

''ನಾನು ಇಲ್ಲಿರುವ ವಿಷಯ ಹೇಗೆ ತಿಳಿಯಿತು?''

''ಅಕಸ್ಮಾತ್ತಾಗಿ ವಸುಧಾ ಸಿಕ್ಕಿದ್ದಳು. ಅವಳು ಹೇಳಿದಳು...''

''ಅವಳು ಇನ್ನೇನು ಹೇಳಿದಳು?'' ಕಾತುರದಿಂದ ಕೇಳಿದಳು.

''ಇನ್ನೇನೂ ಹೇಳಲಿಲ್ಲ, ನಾನೂ ಕೇಳಲಿಲ್ಲ...'' ಮಾಲಾ ನಿಟ್ಟುಸಿರು ಬಿಟ್ಟಳು. ಭಾರ್ಗವ ಅಲ್ಲಿಂದ ಹೊರಟುಹೋಗಿದ್ದ. ಏಳೆಂಟು ದಿನಗಳಲ್ಲಿ ಅವಳ ಮೈಮೇಲಿನ ಗುಳ್ಳೆಗಳು ಬಾಡಿದ್ದವು. ಮನೆಗೆ ಹೋಗಬಹುದೆಂದು ಹೇಳಿದ್ದರು. ಧ್ರುವ ತನ್ನ ತಾಯಿಯನ್ನು ಕರೆಸಿದ್ದ.

ವಸುಧಾಳ ತಾಯಿ, ಬೇವಿನಸೊಪ್ಪನ್ನು ಅರಿಶಿನದೊಂದಿಗೆ ನುಣ್ಣಗೆ ಅರೆದು ಮೈಗೆಲ್ಲಾ ಹಚ್ಚಿ ಸ್ನಾನ ಮಾಡಿಸಿದರು. ಬೇವಿನ ಕಷಾಯವನ್ನು ಸ್ವಲ್ಪ ಕುಡಿಸಿದರು. ಬೆಚ್ಚಗೆ ಹೊದ್ದು ಮಲಗಿದ್ದವಳು ಹೆಜ್ಜೆಯ ಸದ್ದನ್ನು ಕೇಳಿ ಇತ್ತ ತಿರುಗಿದಳು. ಧ್ರುವ ಮುಗುಳ್ನಕ್ಕ. ಮಾಲಾ ಅತ್ತ ಮುಖವನ್ನು ತಿರುಗಿಸಿದಳು.

''ನನ್ನ ಮೇಲೆ ಕೋಪಾನಾ ಮಾಲಾ! ನಾನು ಬಾಂಬೆಗೆ ಹೊರಟುಹೋಗಿದ್ದೆ. ನರ್ಸಿಂಗ್ ಹೋಂಗೆ ಬಂದಿದ್ದೆ. ನೀನು ನಿದ್ದೆ ಮಾಡಿಬಿಟ್ಟಿದ್ದೆ'' ಅವಳು ಮಾತಾಡಲಿಲ್ಲ.

''ಮಾಲಾ... ಇಲ್ಲಿ ಇರೋದೇ ಬೇಡ, ಬಾಂಬೆಗೆ ಹೊರಟುಹೋಗೋಣ.''

''ಇಲ್ಲ, ನಾನು ಈ ಮನೆಯನ್ನು ಬಿಟ್ಟು ಎಲ್ಲಿಗೂ ಬರಲ್ಲ'' ಅವಳು ಸಿಡಾರನೆ ನುಡಿದಾಗ ಅವನು ಹೆದರಿದ.

''ನಾನು ನಿನಗೋಸ್ಕರ ಸದಾಕಾಲ ಇಲ್ಲೇ ಇರೋಕೆ ಆಗಲ್ಲವಲ್ಲ.''

''ನಿಮಗೆ ಇಷ್ಟವಿದ್ದರೆ ಇಲ್ಲಿ ಇರಬಹುದು. ಇಲ್ಲದಿದ್ದರೆ ಹೋಗಬಹುದು. ಆದರೆ ನಾನು ಮಾತ್ರ ಇಲ್ಲೇ ಇರ್ತೀನಿ. ಹಾಗಂತ ತೀರ್ಮಾನಿಸಿದೀನಿ.''

''ಇದು ನಿನ್ನ ತವರುಮನೆ. ನಿನ್ನ ಗಂಡನ ಮನೆಗೆ ನೀನು ಬರಲೇಬೇಕು ಅಲ್ವಾ?...'' ಅವನು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

''ಇದೇ ನನ್ನ ಮನೆ... ನೀವೂ ಇಲ್ಲಿಗೇ ಬಂದು ಇರಬಹುದು. ನನ್ನ ಡ್ಯಾಡಿ ನನಗೆ

ಪ್ರೀತಿಯಿಂದ ಕೊಟ್ಟ ಮನೆಯನ್ನು ಬಿಟ್ಟು ನಾನು ಇನ್ನೆಲ್ಲೂ ಹೋಗುವುದಿಲ್ಲ. ಸಾಯೋ ತನಕ ಇಲ್ಲೇ ಇರ್ತೀನಿ.''

''ನಿಮಗೆ ಡ್ಯಾಡಿ ನಿನಗೆ ಈ ಮನೆಯನ್ನು ಕೊಟ್ಟಿದಾರಾ?... ಹಾಗಂತ ಮಧು ಹೇಳಿಲ್ಲವಲ್ಲ''

''ಮಧು ನಿಮಗೆ ಏನು ಹೇಳಿದಾನೋ ಹೇಳಿಲ್ಲವೋ ನನಗೆ ಗೊತ್ತಿಲ್ಲ. ಆ ವಿಷಯ ನನಗೆ ಬೇಡ. ಪ್ಲೀಸ್, ನನಗೆ ನಿದ್ದೆ ಬರ್ತಿದೆ...''

''ಓ..ಕೇ. ನಿನಗೆ ಈ ಹುಶಾರಿಲ್ಲ ಅಂತ ಸುಮ್ಮನಿದೀನಿ. ನಾನು ನಿನ್ನ ಗಂಡ. ನನ್ನ ಹತ್ತಿರ ಹೇಗೆ ಮಾತನಾಡಬೇಕು ಅನ್ನೋದನ್ನ ಮೊದಲು ತಿಳ್ಕೋ.'' ಮಾಲಾ ಉತ್ತರಿಸದೇ ಗೋಡೆಯ ಕಡೆ ಮುಖ ಮಾಡಿ ಮಲಗಿದಳು.

* * * *

ಮನೆಗೆ ಬಂದ ಒಂದೆರಡು ದಿನಗಳಲ್ಲಿ ಮಾಲಾ ಸ್ವಲ್ಪ ಗೆಲುವಾದಳು. ಡಾಕ್ಟರು ಆಗಾಗ ಬರುತ್ತಿದ್ದರು. ನರ್ಸಿಂಗ್ ಹೋಂನಲ್ಲೇ ಇದ್ದಿದ್ದರೆ ಭಾರ್ಗವ ಬಂದು ಮಾತಾಡಿಸಿ ಕೊಂಡು ಹೋಗುತ್ತಿದ್ದ ಅಂತ ಅನ್ನಿಸುತ್ತಿತ್ತು. ಆದರೆ ನನ್ನ ಮದುವೆ ಧ್ರುವನೊಂದಿಗೆ ಆಗಿದೆ ಅಂತ ಅವನಿಗೆ ತಿಳಿದರೆ, ಅವನು ಏನು ಮಾಡಬಹುದು? ಎಂದು ಊಹಿಸಲೂ ಹೆದರುತ್ತಿದ್ದಳು. ಮಧು ಬಂದು ಸುಮ್ಮನೇ ನೋಡಿಕೊಂಡು ಹೋಗಿದ್ದ. ಮಾತಾಡಿರ ಲಿಲ್ಲ. ವಸುಧಾ ಮಾತ್ರ ಆಗ ಈಗ ಬರುತ್ತಿದ್ದಳು. ಈಗ ಒಬ್ಬ ಹೊಸ ಅಡಿಗೆಯವರನ್ನು ಗೊತ್ತು ಮಾಡಿಕೊಂಡಿದ್ದರು. ಆಕೆ ಇಲ್ಲೇ ಇವರ ಮನೆಯಲ್ಲೇ ಇರಲು ಒಪ್ಪಿಕೊಂಡಿದ್ದಳು.

ಮಾಲಾಳ ಆರೋಗ್ಯ ಬೇಗ ಬೇಗನೇ ಸುಧಾರಿಸಿತು. ಮಧು ಜಾಣತನದಿಂದ ಸುಮಿತ್ರಾದೇವಿ ಇರುವಾಗಲೇ ಆಕೆಯೊಡನೆ ತಾನು ವಸುಧಾಳನ್ನು ಮದುವೆಯಾಗ ಬೇಕೆಂದುಕೊಂಡಿರುವ ವಿಷಯವನ್ನು ತಿಳಿಸಿ ಅವಳ ತಂದೆತಾಯಿಯ ಹತ್ತಿರ ಮಾತನಾಡ ಬೇಕೆಂದು ಕೇಳಿಕೊಂಡಿದ್ದ.

ಮಧು ಅಷ್ಟು ಗೌರವ ಕೊಟ್ಟಿದ್ದೇ ಸಾಕು ಎಂಬಂತೆ, ಆಕೆ ಮದುವೆಯನ್ನು ನಿಶ್ಚಯಿಸಿಯೇ ಬಿಟ್ಟಳು. ವಸುಧಾ ತಕ್ಷಣವೇ ಬಂದು ಮಾಲಾಳೊಡನೆ ನಾಚುತ್ತಾ ಈ ವಿಷಯವನ್ನು ತಿಳಿಸಿದಳು. ಮಾಲಾಳಿಗೆ ಖುಷಿಯಾಗಲಿಲ್ಲ. ವಸುಧಾಳನ್ನು ಎಚ್ಚರಿಸಿದಳು.

''ಮಧು ಒಳ್ಳೆಯವನಲ್ಲ, ನೀನು ಒಪ್ಕೋಬೇಡ.''

''ಯಾಕೇ... ನಾನು ನಿನ್ನ ಅತ್ತಿಗೆಯಾದರೆ ನಿನಗೆ ಸಂತೋಷವಿಲ್ವಾ?''

''ಮಧು ಸರಿಯಾಗಿದ್ದಿದ್ದರೆ ನಾನೇ ಪ್ರಪೋಸ್ ಮಾಡ್ತಿದ್ದೆ. ಅವನು ಅಣ್ಣನಾಗಲು ಅರ್ಹನೇ ಇಲ್ಲ. ಹೆಂಡತಿಯನ್ನು ಸುಖವಾಗಿಟ್ಟುಕೊಳ್ತಾನೆ ಅನ್ನೋ ನಂಬಿಕೆ ನನಗಿಲ್ಲ...''

''ನಾನು ಅವರನ್ನು ತಿದ್ದಲು ಪ್ರಯತ್ನಿಸ್ತೀನಿ ಮಾಲಾ... ಆಮೇಲೆ ನೀನೇ ನಿನ್ನ ಅಣ್ಣನ್ನ ಮೆಚ್ಚಿಕೊಳ್ತೀಯ...''

"ಆಮೇಲೆ, ಅವನು ಹೇಗೆ ಬದಲಾದರೆ ನನಗೇನು ಉಪಯೋಗ? ನನ್ನ ಬಾಳಂತೂ ಹಾಳಾಯ್ತಲ್ಲ"

"ಇಲ್ಲ ಮಾಲಾ... ನಿನ್ನ ಬಾಳನ್ನು ಸರಿಪಡಿಸಲು ಪ್ರಯತ್ನಿಸ್ತೀನಿ. ನೀನು ಧ್ರುವನಿಗೆ ಡೈವೋರ್ಸ್ ಕೊಟ್ಟು ಭಾರ್ಗವನ ಜೊತೆ ಮದುವೆಯಾಗುವುದಕ್ಕೆ ಒಪ್ಪಿಸ್ತೀನಿ."

"ಅದು ನನಸಾಗದೇ ಇದ್ದರೇ..."

"ನಾನು ನಿನ್ನ ಅಣ್ಣನಿಗೆ ಡೈವೋರ್ಸ್ ಕೊಟ್ಟು ಹೋಗ್ತೀನಿ..."

"ಛೀ... ಹಾಗೆಲ್ಲಾ ಮಾತನಾಡಬೇಡ. ನೀನು ನಿಜವಾಗಿಯೂ ಮಧೂನ ಮೆಚ್ಚಿಕೊಂಡು ಮದುವೆಯಾದರೆ, ಲೈಫ್‌ಲಾಂಗ್ ಅವನ ಜೊತೆಯಲ್ಲಿರಬೇಕು. ಅವನು ನಿನ್ನನ್ನು ಮೆಚ್ಚಿದಾನೆ. ನೀವಿಬ್ಬರೂ ಸುಖವಾಗಿರಬೇಕು..."

"ಮಧು ಒಳ್ಳೆಯವರಲ್ಲ ಅಂತ ಹೇಳ್ತೀಯ. ಅವರು ಸುಖವಾಗಿರಲಿ ಅಂತ ಹಾರೈಸ್ತೀಯ... ಚೆನ್ನಾಗಿದೆ ನಿನ್ನ ಮಾತು..."

"ನನ್ನ ಡ್ಯಾಡಿ ತುಂಬಾ ಒಳ್ಳೆಯವರಾಗಿದ್ದರು. ಮಮ್ಮಿ ಹೇಗಿದ್ದಳೋ ನನಗಂತೂ ನೆನಪಿಲ್ಲ, ಭಾರ್ಗವ, ಭಟ್ಟರು, ಕಾವೇರಮ್ಮ ಎಲ್ಲರೂ ಒಳ್ಳೆಯವರಾಗಿದ್ದರು. ಎಲ್ಲರೂ ನನಗೆ ಒಳ್ಳೆಯ ಬುದ್ಧಿಯನ್ನೇ ಹೇಳಿಕೊಟ್ಟರೇ ಹೊರತು ಮಧುಕರನನ್ನ ದ್ವೇಷಿಸು ಅಂತ ಯಾರೂ ಹೇಳಿಕೊಡಲಿಲ್ಲ, ನನಗೂ ಅವನಿಗೂ ಸರಿಹೋಗಲ್ಲ... ಆದರೆ ಅವನ ಹೆಂಡತಿಯಾಗಿ ಬಂದರೆ ನೀನು ನನ್ನ ಅತ್ತಿಗೆಯಾಗ್ತೀಯ... ನಿನ್ನನ್ನ ನಾನು ದ್ವೇಷಿಸಕ್ಕೆ ಆಗುತ್ತಾ? ಭಾರ್ಗವನ್ನ ಪ್ರೀತಿಸಿದ್ದಕ್ಕಾಗಿ, ಕಾಂಪ್ರಮೈಸ್ ಮಾಡಿಕೊಂಡು ಧ್ರುವನ್ನ ಮದುವೆಯಾದೆ. ಹಾಗೇ ನಿನಗೋಸ್ಕರ ಅವನ ಹತ್ತಿರ ಕಾಂಪ್ರಮೈಸ್ ಮಾಡಿಕೊಳ್ತೀನಿ, ಅಷ್ಟೇ..."

"ಥೂ, ಮುದುಕಿ ತರಹ ಮಾತನಾಡಬೇಡ. ನಾನು ಇನ್ನೂ ಒಪ್ಪಿಗೆ ಕೊಟ್ಟಿಲ್ಲ. ನಾನು ಒಪ್ಪಿದರೂ ನಿನಗೋಸ್ಕರ ಅಂತ ತಿಳಕೋ..."

"ಆದರೂ ಆ ಜೀವನ ನಿನ್ನದು. ನನಗೋಸ್ಕರ ನೀನು ಯಾವ ತ್ಯಾಗವನ್ನೂ ಮಾಡಬೇಕಾಗಿಲ್ಲ, ನಿನ್ನ ಜೀವನಾನ ನೀನೇ ಚೂಸ್ ಮಾಡ್ಕೋ..."

"ಆಗಲಿ ಮಾಲಾ... ನಿನ್ನ ಸಲಹೆಗೆ ಥ್ಯಾಂಕ್ಸ್. ಆದರೆ ಒಪ್ಪದೇ ಇರುವುದಕ್ಕೆ ಒಂದು ಪ್ರಬಲವಾದ ಕಾರಣ ಬೇಕು ಅಲ್ವಾ?... ಆದಷ್ಟು ಬೇಗ ನನ್ನ ಡಿಸಿಷನ್ ಏನೂಂತ ನಿನಗೇ ತಿಳಿಯುತ್ತೆ. ಒಂದು ವೇಳೆ ನಾನು ಅತ್ತಿಗೆಯಾಗಿ ಬಂದರೆ ನನ್ನನ್ನ ಹೇಟ್ ಮಾಡಲ್ಲ ತಾನೇ...?"

"ಛೆ...ಛೆ... ನಿನ್ನನ್ನ ಯಾವುದೇ ರೂಪದಲ್ಲೂ ನಾನು ಹೇಟ್ ಮಾಡಲ್ಲ, ಅದು ಮಾತ್ರ ಗ್ಯಾರಂಟಿ..."

"ಸಾರಿ ಮಾಲಾ... ನಾನು ಈಗಾಗಲೇ ಒಪ್ಪಿಗೆ ಕೊಟ್ಟುಬಿಟ್ಟಿದೀನಿ" ಅವಳ ಕಿವಿಯಲ್ಲಿ ಉಸುರಿದಳು. ಮಾಲಾ ಅವಳನ್ನು ತಳ್ಳಿದಳು.

"ಥೂ ಕಳ್ಳಿ. ನಾಟಕ ಬೇರೆ ಆಡ್ತೀಯಾ... ಎನಿವೇ ಕಂಗ್ರಾಟ್ಸ್..." ಎಂದು ಸ್ನೇಹಿತೆಯನ್ನು ಆತ್ಮೀಯವಾಗಿ ತಬ್ಬಿಕೊಂಡಳು.

* * * *

ಧ್ರುವನಿಗೆ ಮಾಲಾಳ ಮೇಲಿನ ಅಸಮಾಧಾನ ಕಡಿಮೆ ಆಗಿರಲಿಲ್ಲ. ಹೆಸರಿಗೆ ಮದುವೆಯಾದವರು. ಯಾವ ಸಾಮೀಪ್ಯವೂ ಇಲ್ಲ. ಹೋಗಲಿ ಅಂತಂದ್ರೆ ನಗುನಗುತ್ತಾ ಮಾತನಾಡುವುದೂ ಇಲ್ಲ. ಅದಕ್ಕೆ ತಕ್ಕ ಹಾಗೇ, ಭಾರ್ಗವನ ಅವಮಾನ, ಭಟ್ಟರ ಸಾವು ಎಲ್ಲಾ ಇವಳ ಮೇಲೆ ಪರಿಣಾಮ ಬೀರಿದೆ. ಜೊತೆಗೆ ಈ ಸಿಡುಬಿನ ಕಾಯಿಲೆ. ಮಮ್ಮಿ ಬೇರೆ ಅದೇನೋ ಶಾಂತಿ, ಅದೇನೋ ಹೋಮ ಅಂತ ಹೇಳುತ್ತಲೇ ಇದಾಳೆ. ಎಲ್ಲಾ ಮುಗಿಸಿ ಕರೆದುಕೊಂಡು ಹೋಗೋಣ ಅಂತ ಅಂದುಕೊಂಡರೆ, ಎಲ್ಲಿಗೂ ಬರೋಲ್ಲವಂತೆ... ಇದೆಲ್ಲಾ ಡೈವೋರ್ಸ್ ಕೊಟ್ಟು ಬಿಟ್ಟುಹೋಗಲಿ ಅಂತ ಆಡ್ತಿರೋ ನಾಟಕ. ನಾನು ಅಷ್ಟು ಸುಲಭವಾಗಿ ಡೈವೋರ್ಸ್ ಕೊಟ್ಟು ಬಿಡುಗಡೆ ಕೊಡೋಹಾಗಿದ್ರೆ, ಮಧುಕರನ ಡ್ರಾಮಾದಲ್ಲಿ ನಾನು ಯಾಕೆ ಸೇರಿಕೊಳ್ಳುತ್ತಿದ್ದೆ? ಆಗಲಿ ಮಧುಕರನ ಮದುವೆಯೊಂದು ಆಗಿ ಹೋಗಲಿ... ಆಮೇಲೆ ಅವಳೇ ತಾನಾಗಿಯೇ ನನ್ನ ಜೊತೆಯಲ್ಲಿ ಬಾಂಬೆಗೆ ಬರುತ್ತಾಳೆ ಎಂದು ತನ್ನಲ್ಲೇ ಲೆಕ್ಕಾಚಾರ ಹಾಕಿದ.

ಮಧುಕರ ವಸುಧಾಳ ಮದುವೆಗೆ ಎಲ್ಲ ಸಿದ್ಧತೆಗಳು ಪ್ರಾರಂಭವಾದವು. ಮಾಲಾ ಯಾವ ಉತ್ಸಾಹವನ್ನೂ ತೋರಲಿಲ್ಲ. ಸುಮಿತ್ರಾದೇವಿಯೇ ಎಲ್ಲ ಯಜಮಾನಿಕೆಯನ್ನು ವಹಿಸಿದ್ದಳು. ಇದೇ ಸಮಯದಲ್ಲೇ ಶಾಂತಿ, ಹೋಮವನ್ನು ನೆರವೇರಿಸಿ ಮಾಲಾಳನ್ನು ಮನೆ ತುಂಬಿಸಿಕೊಳ್ಳಬೇಕೆಂದುಕೊಂಡಿದ್ದಳು. ಮಗನ ಮದುವೆಯ ರಿಸೆಪ್ಶನ್ ಸಮಾರಂಭವನ್ನು ಅದ್ದೂರಿಯಾಗಿ ಮಾಡಿ, ತಮ್ಮ ಕಡೆಯ ನೆಂಟರಿಷ್ಟರನ್ನೆಲ್ಲಾ ಕರೆದು ಉಪಚರಿಸಬೇಕೆಂದುಕೊಂಡಳು. ಹೇಗೂ ಮಧು ಖರ್ಚು ಮಾಡೋಕೆ ರೆಡಿಯಾಗಿದ್ದಾನೆ, ನಮಗೇನು ನಷ್ಟ ಅಂತಂದುಕೊಂಡು ಖರ್ಚುವೆಚ್ಚವನ್ನು ಲೆಕ್ಕಿಸದೇ ಭಾರೀ ಲಿಸ್ಟನ್ನೇ ತಯಾರಿಸಿದಳು.

ತಾನೊಮ್ಮೆ ಭಾರ್ಗವನನ್ನು ಕಂಡು ಮಾತನಾಡಿ, ಎಲ್ಲ ವಿಷಯವನ್ನು ಹೇಳಿ ಅವನ ಕ್ಷಮೆಯನ್ನು ಕೇಳಬೇಕೆಂದುಕೊಂಡಳು ಮಾಲಾ. ಷಾಪಿಂಗ್‌ಗೆ ಹೋಗುವ ನೆವದಲ್ಲಿ ಗೆಳತಿಯರಿಬ್ಬರೂ ಮನೆಯಿಂದ ಆಚೆ ಹೊರಟರು. ಭಾರ್ಗವನ ವಿಳಾಸ ತಿಳಿಯದು. ಸೀದಾ ಪೋಲಿಸ್ ಸ್ಟೇಷನ್‌ಗೆ ಬಂದು, ಅಲ್ಲಿ ಪೋಲಿಸ್ ಇನ್ಸ್‌ಪೆಕ್ಟರ್‌ನೊಡನೆ ಮಾತನಾಡಿದರು. ಶ್ರೀಮಂತರ ಮನೆಯ ಹುಡುಗಿಯರನ್ನು ಸ್ವಾಭಾವಿಕವಾಗಿಯೇ, ಅತಿ ಗೌರವದಿಂದ ಮಾತನಾಡಿಸಿ, ಕಾಫಿಯನ್ನು ತರಿಸಿಕೊಟ್ಟ, ಅವರುಗಳಿಗೆ ಬೇಕಾದ ಮಾಹಿತಿಯನ್ನು ನೀಡಿದ ಆ ಮಹಾಶಯ. ಮಾಲಾಳಿಗೆ ಸ್ವಲ್ಪ ನೆಮ್ಮದಿಯುಂಟಾಗಿತ್ತು.

ಮಧುಕರ, ಭಾರ್ಗವನ ಮೇಲೆ ಹಾಕಿದ್ದ ಕೇಸನ್ನು ಹಿಂತೆಗೆದುಕೊಂಡಿದ್ದ.

ಭಾರ್ಗವ ತಪ್ಪಿತಸ್ಥನಲ್ಲ ಎಂದು ಸಾಬೀತಾಗಿತ್ತು. ಜೊತೆಗೇ ಭಾರ್ಗವ ಕಂಪೆನಿಯ ಕೆಲಸಕ್ಕೆ ರಾಜೀನಾಮೆ ಕೊಟ್ಟಿರುವ ವಿಷಯವೂ ತಿಳಿಯಿತು. ಭಾರ್ಗವನ ವಿಳಾಸವನ್ನು ಪಡೆದು ಅವನನ್ನು ಹುಡುಕಿ ಮಾತನಾಡಬೇಕೆಂದರು. ''ನಾನು ಈಗಲೇ ಅವನನ್ನು ಇಲ್ಲಿಗೆ ಕರೆಸುತ್ತೇವೆ...'' ಎಂದು ಹೇಳಿ, ಅವನು ಕೊಟ್ಟಿದ್ದ ಫೋನು ನಂಬರ್ರಿಗೆ ಫೋನು ಮಾಡಿ, ಈ ಕ್ಷಣವೇ ಪೋಲಿಸ್ ಸ್ಟೇಷನ್‌ಗೆ ಬರಬೇಕೆಂದು ಆರ್ಡರ್ ಮಾಡಿದ ಆ ಇನ್‌ಸ್ಪೆಕ್ಟರ್.

ಕಾಲುಗಂಟೆಯೊಳಗೆ ಭಾರ್ಗವ ಅಲ್ಲಿಗೆ ಹಾಜರಾದ. ಮಾಲಾಳನ್ನು ಕಂಡು ಅಚ್ಚರಿಯಾಯಿತು. ಜೊತೆಗೆ ಏನೋ ಸಂದೇಹ. ಆದರೂ ಮುಗುಳ್ನಕ್ಕು, ''ಅದೇನು ಇಲ್ಲಿ? ಈಗ ಹೇಗಿದೀಯ?'' ಕುಶಲವನ್ನು ವಿಚಾರಿಸಿದ.

''ನಿಂದು ಏನೂ ತಪ್ಪಿಲ್ಲ. ಇದೆಲ್ಲಾ ಮಧೂದೇ ಕಿತಾಪತಿ. ನನ್ನನ್ನ ನಿನ್ನಿಂದ ದೂರ ಮಾಡೋಕೆ ಮಧು ಮಾಡಿದ ಪ್ಲಾನ್ ಅಂತ ನನಗೆ ತಿಳಿಯಿತು. ನಿನಗೆ ಅವನು ಹೀಗೆ ದ್ರೋಹ ಮಾಡಬಾರದಾಗಿತ್ತು...''

''ನನಗಿಂತ, ಅವನಿಗೆ ನಿಮ್ಮ ಡ್ಯಾಡಿಯ ಮೇಲೇ ಅಸಮಾಧಾನ. ಅವರು ನನ್ನನ್ನು ಮಗನಂತೆ ಬೆಳೆಸಿ, ಆಸ್ತಿಯಲ್ಲಿ ಸಮಪಾಲು ಕೊಟ್ಟರು ಅಂತ ಕೋಪ... ನಾನು ನನ್ನ ಭಾಗಕ್ಕೆ ಬರೆದಿದ್ದ ಆಸ್ತಿಯನ್ನೆಲ್ಲ ಅವನಿಗೇ ವಾಪಸ್ಸು ಕೊಟ್ಟುಬಿಟ್ಟೆ.. ಆದರೂ...''

''ಏನು ? ಎಲ್ಲಾ ಬರೆದುಕೊಟ್ಯಾ? ನೀನ್ಯಾಕೆ ಹೀಗೆ ಮಾಡಿದೆ?... ನನಗ್ಯಾಕೆ ಹೇಳಲಿಲ್ಲ!... ನೀನು ಹೀಗೆ ಮಾಡಬಾರದಾಗಿತ್ತು...''

''ಅವನ ಅಸಮಾಧಾನ ಕಡಿಮೆಯಾಗುತ್ತೆ. ಅವನು ಬದಲಾಗುತ್ತಾನೆ ಅಂದು ಕೊಂಡಿದ್ದೆ. ಆದರೆ, ಅವನು ನನಗೆ ಅನ್ಯಾಯ ಮಾಡಕ್ಕೆ ಹೋಗಿ ನನ್ನ ಮಾವನನ್ನೇ ಬಲಿ ತೆಗೆದುಕೊಂಡುಬಿಟ್ಟ...'' ಅವನ ಗಂಟಲು ಕಟ್ಟಿತ್ತು.

''ನೀನು ಅವನನ್ನು ಸುಮ್ಮನೇ ಬಿಡಬೇಡ ಭಾರ್ಗವ, ಅವನ ಮೇಲೆ ಮಾನನಷ್ಟದ ಕೇಸ್ ಹಾಕು...''

''ಈಗ ನನ್ನ ಹತ್ತಿರ ಏನಿದೆ? ನನಗೆ ಯಾರ ಸಪೋರ್ಟ್ ಇದೆ?''

''ನಾನು ನಿನಗೆ ಸಹಾಯ ಮಾಡ್ತೀನಿ... ನನ್ನ ಹೆಸರಿನಲ್ಲಿರುವ ಮನೆಯನ್ನು ಮಾರಿ, ನಿನಗೆ ಹಣವನ್ನು ಕೊಡ್ತೀನಿ...''

''ನನ್ನ ಮೇಲೆ ನೀನು ಇಟ್ಟಿರುವ ಪ್ರೀತಿಗೆ ತುಂಬಾ ಥ್ಯಾಂಕ್ಸ್ ಮಾಲಾ... ಆದರೆ, ನಾನು ಅವನ ಮೇಲೆ ಕೇಸ್ ಹಾಕಲಾರೆ. ನಾನು ಅಪ್ಪಾಜಿಗೆ ಅವಮಾನ ಮಾಡಲಾರೆ...''

''ಅವನು ಡ್ಯಾಡಿಗೆ ಅವಮಾನ ಮಾಡಲಿಲ್ವಾ?''

''ಅವನು, ಅವನ ಸ್ನೇಹಿತರ ಮಾತಿಗೆ ಕಿವಿಗೊಟ್ಟ... ಅವನಿಗೆ ಮನೆಯವರಿಗಿಂತ ಹೊರಗಿನವರು ಆತ್ಮೀಯರಾಗಿ ಕಂಡರು...'' ಮಾಲಾ ತಪ್ಪಿತಸ್ಥಳಂತೆ ವಸುಧಾಳ ಕಡೆ ನೋಡಿದಳು.

''ಭಾರ್ಗವ, ನೀನು ಇಷ್ಟು ಒಳ್ಳೆಯವನಾಗಬಾರದಾಗಿತ್ತು. ಇದರಿಂದ ನಿನಗೇನು ಲಾಭ?''

''ನನಗೆ ಯಾವ ಲಾಭವೂ ಇಲ್ಲ, ಆದರೆ ಹಾಗಂತ ನನ್ನನ್ನು ಸಾಕಿ ಸಲಹಿದವರಿಗೆ ದ್ರೋಹ ಮಾಡಲಾರೆ. ಮಧು ನನ್ನ ತಮ್ಮನಿದ್ದ ಹಾಗೆ... ಅವನ ಮೇಲೆ ಕೇಸು ಹಾಕಿ, ಅವನಿಂದ ಹಣವನ್ನು ಕಿತ್ತುಕೊಂಡರೆ, ನಾನು ಶ್ರೀಮಂತನಾಗುವುದಿಲ್ಲ. ನಾನು ಉದ್ಧಾರ ವಾಗುವುದಿಲ್ಲ.''

''ನ್ಯಾಯ ನೀತಿ ಅಂತ ನಡೆದರೆ ನಿನಗೆ ಏನೂ ದಕ್ಕುವುದಿಲ್ಲ.''

''ನನಗೆ ಏನೂ ಬೇಡ... ನೀನೊಬ್ಬಳು ನನ್ನ ಭಾಗ್ಯಕ್ಕೆ ಇದ್ದರೆ ಸಾಕು'' ಮಾಲಾ ಸರ್ರನೆ ಪಕ್ಕಕ್ಕೆ ತಿರುಗಿ, ದೂರ ಹೋಗಿ ನಿಂತಳು. ಭಾರ್ಗವ ನಕ್ಕು, ಅವಳ ಬಳಿಗೆ ಬಂದ.

''ನನಗೆ ಗೊತ್ತು, ಬರೀ ಪ್ರೀತಿ ಒಂದಿದ್ದರೆ ಬದುಕಲು ಸಾಧ್ಯವಿಲ್ಲ ಅಂತ.. ಆದರೆ, ನಾನೂ ಚೆನ್ನಾಗಿ ಸಂಪಾದಿಸಿ, ನಿನ್ನನ್ನು ತಕ್ಕಮಟ್ಟಿಗೆ ಸುಖವಾಗಿಟ್ಟುಕೊಳ್ಳಲು ಪ್ರಯತ್ನಿಸು ತ್ತೀನಿ. ನನಗೆ ಸ್ವಲ್ಪ ಕಾಲಾವಕಾಶ ಬೇಕು. ಈಗ ಸದ್ಯಕ್ಕೆ ನಾನು ನಿರುದ್ಯೋಗಿ... ನನಗೇ ಇರೋಕೆ ಠಿಕಾಣಿ ಇಲ್ಲ...''

''ಬಾ... ವಸುಧಾ ಮನೆಗೆ ಹೋಗೋಣ...'' ಮಾಲಾ ಗೆಳತಿಯ ಕೈ ಹಿಡಿದೆಳೆದಳು.

''ಅರೇ... ನಾನೇನ್ಮಾಡ್ದೆ... ನನಗೆ ಸ್ವಲ್ಪ ಸಮಯ ಬೇಕು ಅಂತಂದೆ. ನಿಮ್ಮ ಸ್ನೇಹಿತೆಗೆ ಬಹಳ ಬೇಗ ಕೋಪ ಬರುತ್ತಪ್ಪಾ...'' ಮಾಲಾ ಅಲ್ಲಿಂದ ಹೊರ ಬಂದಿದ್ದಳು. ವಸುಧಾ ನುಡಿದಳು.

''ನಾನು ನಿಮ್ಮ ಹತ್ತಿರ ಮುಖ್ಯವಾದ ವಿಷಯವನ್ನು ಮಾತನಾಡಬೇಕು. ನಾಳೆ ನಮ್ಮ ಮನೆಗೆ ಬರೋಕೆ ಆಗುತ್ತಾ?''

''ಏನು ವಿಷಯ? ಈಗಲೇ ಹೇಳಬಹುದಲ್ಲ...''

''ತುಂಬಾ ವಿಷಯವಿದೆ. ಮಾಲಾಳ ಎದುರಿಗೆ ಹೇಳುವಂತಹುದಲ್ಲ. ಅವಳು ಮುಂದೆ ಮುಂದೆ ಹೋಗ್ತಾನೇ ಇದಾಳೆ. ಹತ್ತು ಗಂಟೆಯ ಹೊತ್ತಿಗೆ ನಮ್ಮ ಮನೆಗೆ ಬನ್ನಿ. ನಾನು ನಿಮಗೋಸ್ಕರ ಕಾಯ್ತಾ ಇರ್ತೀನಿ'' ಎಂದು ಹೇಳಿ, ಮಾಲಾಳ ಹಿಂದೆ ಓಡಿದಳು. ಏನು ವಿಷಯವಿರಬಹುದು? ಭಾರ್ಗವ ಚಿಂತಿಸಿ, ಚಿಂತಿಸಿ ತಲೆಕೆಡಿಸಿಕೊಂಡ.

* * * *

ಭಾರ್ಗವ ಸಮಯಕ್ಕೆ ಸರಿಯಾಗಿ ಬಂದ. ಅವನಿಗಾಗಿಯೇ ಕಾಯುತ್ತಾ ಕುಳಿತಿದ್ದ ವಸುಧಾ, ಬಾಗಿಲನ್ನು ತೆಗೆದು ಒಳಕ್ಕೆ ಬರಮಾಡಿಕೊಂಡಳು. ಅವನ ಕಣ್ಣುಗಳು ಮಾಲಾಳನ್ನು ಅರಸಿದವು. ಅದನ್ನು ಗಮನಿಸಿ ನುಡಿದಳು.

''ಮಾಲಾ ಬಂದಿಲ್ಲ. ನಾನು ಅವಳ ವಿಷಯವನ್ನು ಮಾತಾಡಲೆಂದೇ ನಿಮಗೆ ಬರಹೇಳಿದ್ದು. ಆದರೆ ಹೇಗೆ ಪ್ರಾರಂಭಿಸಬೇಕೂಂತ ಗೊತ್ತಾಗ್ತಿಲ್ಲ''

''ಏನಾಯ್ತು ಮಾಲಂಗೆ? ಆರೋಗ್ಯವಾಗಿದಾಳೆ ತಾನೇ?'' ಆತಂಕದಿಂದ, ಆತುರದಿಂದ ಪ್ರಶ್ನಿಸಿದ.

''ಹೇಳ್ತೀನಿ, ಎಲ್ಲಾ ಹೇಳ್ತೀನಿ, ಆದರೆ ನಿಮಗೆ ಬೇಸರವಾಗಬಹುದು.''

''ನೀವು ಏನೋ ಮುಚ್ಚಿಡ್ತಾ ಇದೀರಿ. ಅದೇನು ಅಂತ ಬೇಗ ಬೇಗ ಹೇಳಬಾರದಾ?'' ಅವಸರಿಸಿದ.

''ನನ್ನ ಮಧುಕರನ ಮದುವೆ ನಿಶ್ಚಯವಾಗಿದೆ.'' ಮುಗುಳ್ನಕ್ಕ.

''ಕಂಗ್ರಾಟ್ಸ್... ಇದನ್ನ ಹೇಳೋಕೆ ಅನುಮಾನಿಸಿದ್ರಾ? ಮಾಲಾಗೆ ಗೊತ್ತಾ? ಅವಳು ಒಪ್ತಾಳೋ ಇಲ್ಲವೋ...''

''ಅವಳೂ ಒಪ್ಪಿಕೊಂಡಿದಾಳೆ... ಮಧುಕರ ಪ್ರಪೋಸ್ ಮಾಡಿದಾಗ ನಾನು ಹಿಂದೆ ಮುಂದೆ ಯೋಚಿಸದೆ ಒಪ್ಪಿಕೊಂಡೆ. ಯಾಕೆ ಗೊತ್ತಾ?''

''ಲವ್... ಲವ್ ಈಸ್ ಬ್ಲೈಂಡ್''

''ಲವ್ ಗಿವ್ ಏನಿಲ್ಲ. ಮಧು ನನ್ನನ್ನ ಏಕೆ ಮೆಚ್ಚಿಕೊಂಡಿದಾರೋ ನನಗೆ ತಿಳಿಯದು. ಆದರೆ ನಾನು ಮಾತ್ರ ಮಾಲಾಳಿಗೋಸ್ಕರ ಈ ಮದುವೆಗೆ ಒಪ್ಪಿಕೊಂಡೆ...''

''ನಿಮ್ಮ ತೀರ್ಮಾನ ಸರಿಯಿಲ್ಲ. ಮಾಲಾಳಿಗೋಸ್ಕರ ನಿಮ್ಮ ಲೈಫ್‌ನ ನೀವಾಗಿಯೇ ಏಕೆ ಹಾಳು ಮಾಡಿಕೊಳ್ತಿದೀರಿ? ಅದರ ಜೊತೆಗೆ, ನಿಮ್ಮ ಮಾಲಾಳ ಸ್ನೇಹ ಹಾಳಾಗುತ್ತದೆ ಅಷ್ಟೇ...''

''ಇಲ್ಲ ಭಾರ್ಗವ, ನಾನು ಬರೀ ಸ್ನೇಹಿತೆಯಾಗಿ ಅವಳಿಗೆ ಯಾವ ಸಪೋರ್ಟ್ ಮಾಡಲಾರೆ. ಅವಳ ಮನೆಯಲ್ಲಿದ್ದುಕೊಂಡು ಅವಳ ಲೈಫ್‌ನ ಸರಿ ಮಾಡಬೇಕೂಂತ ನನ್ನ ಆಸೆ.''

''ಅವಳು ಧೈರ್ಯವಂತೆ,. ಈಗ ನನ್ನ ದೆಸೆಯಿಂದಾಗಿ, ಮಾವನ ಸಾವಿನಿಂದ ನೊಂದು, ಆರೋಗ್ಯವನ್ನು ಕೆಡಿಸಿಕೊಂಡಿದಾಳೆ. ಕ್ರಮೇಣ ಸರಿಹೋಗ್ತಾಳೆ. ನಾನು ಆದಷ್ಟು ಬೇಗ ಏನಾದರೂ ಒಂದು ಮಾರ್ಗವನ್ನು ಹುಡುಕ್ತೀನಿ.''

''ಆದರೆ... ಒಂದು ಅಚಾತುರ್ಯ ನಡೆದುಹೋಗಿದೆ. ತಿಳಿದೋ ತಿಳಿಯದೆಯೋ ಒಂದು ತಪ್ಪು ನಡೆದುಹೋಗಿದೆ.''

''ಆ ವಿಷಯ ನನಗೆ ಗೊತ್ತು. ಮಾಲಾ ಪೇಪರ್ರುಗಳನ್ನು ನೋಡದೇ, ಮಧು ಕೇಳಿದಕ್ಕೆಲ್ಲಾ ಸೈನ್ ಹಾಕಿಬಿಟ್ಟಿದಾಳೆ. ಈಗ ಮನೆ ಸಹ ಮಧುವಿನ ಹೆಸರಿಗೆ ಆಗಿ ಹೋಗಿದೆ.''

''ಹೌದಾ!'' ವಸುಧಾ ಕಣ್ಣರಳಿಸಿದಳು. ''ಅವಳಿಗೆ ಈ ವಿಷಯ ಹೊಸದು. ನಿಮಗೆ ಗೊತ್ತಿದ್ದೂ ನೀವೇಕೆ ಮಾಲಾಳಿಗೆ ಈ ವಿಷಯವನ್ನು ಹೇಳಲಿಲ್ಲ?''

''ಅವನು ತಂಗಿಗೂ ಮೋಸ ಮಾಡಬಹುದು ಅಂತ ನಾನಂದುಕೊಂಡಿರಲಿಲ್ಲ. ಈಗ ನನ್ನ ಮೇಲಿನ ಕೇಸನ್ನು ವಾಪಸ್ಸು ತೆಗೆದುಕೊಂಡಾಗ ತಾನೇ ಜಂಭದಿಂದ ಹೇಳಿಕೊಂಡ. 'ಈಗ ನಿನಗೂ ಯಾವ ಆಸ್ತಿ ಇಲ್ಲ, ನಿನ್ನ ಮಾಲಾಳಿಗೂ ಮನೆಯಿಲ್ಲ. ಅವಳೀಗ ನನ್ನ ಕೈಗೊಂಬೆ... ನೀನು ಏನೂ ಮಾಡಕ್ಕೆ ಆಗಲ್ಲ' ಅಂತ ಹಂಗಿಸಿದ.''

''ಅಂದ್ರೇ... ಈಗ ಮನೆ ಮಧುಕರನ ಹೆಸರಿನಲ್ಲಿದೆಯಾ?''

''ಹೌದು, ಬೇಕಾದ್ರೆ ನಿಮ್ಮ ಮಧೂನ್ನೇ ಕೇಳಿ. ಅವನು ಈ ಮಾತುಗಳನ್ನು ಹೇಳಿದಾಗ ನನಗೆ ಅವನ ಮೇಲೆ ಜಿಗುಪ್ಸೆ ಬಂತು. ಶ್ರೀಮಂತಿಕೆಯ ಅಹಂಕಾರದಲ್ಲಿ ಮನುಷ್ಯ ಯಾರಿಗೆ ಬೇಕಾದ್ರೂ ಅನ್ಯಾಯ ಮಾಡ್ತಾನೆ. ಮಧು ಆ ಜಾತಿಗೆ ಸೇರಿದವನು ಅಂತ ಅನ್ನಿಸ್ತು.''

''ಬೇರೆ ಇನ್ನೇನಾದರೂ ಹೇಳಿದ್ರಾ?''

''ನನಗೆ ಅವನ ಮಾತುಗಳನ್ನು ಕೇಳಿಸಿಕೊಳ್ಳುತ್ತಾ ನಿಲ್ಲುವ ಸಹನೆಯಿರಲಿಲ್ಲ. ನನ್ನ ಪಾಡಿಗೆ ನಾನು ಹೊರಟು ಹೋದೆ. ಬಿಸಿನೆಸ್ ಪಾರ್ಟನರ್‌ಷಿಪ್‌ನಿಂದ ಅವಳನ್ನು ಇನ್ನೂ ತೆಗೆದಿಲ್ಲ. ಅದೇನು ಅವಳ ಅದೃಷ್ಟವೋ, ದುರಾದೃಷ್ಟವೋ ತಿಳಿಯದು. ಈಗ ನನ್ನ ಅವಳ ಅಂತಸ್ತು ಹೆಚ್ಚು ಕಡಿಮೆ ಒಂದೇ ಲೆವಲ್‌ನಲ್ಲಿದೆ. ಅವಳನ್ನು ಎಂದು ಮನೆಯಿಂದ ಆಚೆ ತಳ್ಳುತ್ತಾನೋ...''

''ನೀವು ಮಾಲಾಳಿಗೆ ಹೀಗೆ ಮೋಸ ಮಾಡಬಾರದಾಗಿತ್ತು. ಮಧುಕರ ಮಾಡಿರುವುದನ್ನು ಮುಚ್ಚಿಡದೇ, ಅವಳಿಗೆ ಎಲ್ಲವನ್ನೂ ತಿಳಿಸಬೇಕಾಗಿತ್ತು.''

''ಈ ವಿಷಯ ನನಗೆ ತಿಳಿದಿದ್ದೇ ಕೆಲವು ದಿನಗಳ ಹಿಂದೆ. ನನ್ನ ಭಾಗದ ಆಸ್ತಿಯನ್ನು ಹಿಂತಿರುಗಿಸಿದಾಗ ನಾನೇ ಬೇಕೂಂತ ತಿಳಿಸಲಿಲ್ಲ. ತಿಳಿಸಿದ್ದರೆ ಖಂಡಿತಾ ಅವರಿಬ್ಬರೂ ಜಗಳ ಆಡುತ್ತಿದ್ದರು... ಆದರೆ ಅವನೂ ಅವಳಿಗೆ ತಿಳಿಸಿಲ್ಲವಲ್ಲ. ಆದರೆ ನಾನು ಮಾಡಿರದ ತಪ್ಪುಗಳಿಗೆ ಪಿತೂರಿ ನಡೆಸಿ, ಜೈಲಿಗೆ ಕಳಿಸಿ ಕೇಸ್ ಹಾಕಿ ಅವಮಾನ ಮಾಡಿದ. ಇದನ್ನೆಲ್ಲಾ ಮಾಲಾಳಿಗೆ ಹೇಳಿದಾನೆ ಅಲ್ವಾ? ಒಟ್ಟಿನಲ್ಲಿ ನಾನು ಅವಳ ದೃಷ್ಟಿಯಲ್ಲಿ ಕೆಟ್ಟವನಾಗಬೇಕು. ಇದರ ಒತ್ತಡ ತಾಳಲಾರದೇ ನನ್ನ ಮಾವ ಸತ್ತೇ ಹೋದರಲ್ಲ.'' ಭಾರ್ಗವ ಗದ್ಗದಿತನಾದ.

''ಸಾರಿ ಭಾರ್ಗವ, ಮಾತಾಡ್ತಾ ಮಾತಾಡ್ತಾ ನಿಮ್ಮ ಮನಸ್ಸಿಗೆ ವೇದನೆಯನ್ನುಂಟು ಮಾಡಿದೆ...''

''ಈ ವೇದನೆ ನನ್ನ ಜೀವನದುದ್ದಕ್ಕೂ ನನ್ನೊಂದಿಗೇ ಇರುತ್ತೆ. ಮಾವನ ಆತ್ಮಶಾಂತಿಗಾಗಿ, ಕೆಲವು ವಿಷಯಗಳನ್ನು ಸಹಿಸಿಕೊಳ್ಳುತ್ತಾ ಇದೀನಿ. ನನ್ನ ಮಾವ ತುಂಬಾ ಒಳ್ಳೆಯವರಾಗಿದ್ದರು. ನನ್ನ ಅಪ್ಪಾಜಿ... ಅಂದರೆ ನಿಮ್ಮ ಮಧುಕರನ ತಂದೆ ಅವರೂ

ಸಹ ತುಂಬಾ ಒಳ್ಳೆಯವರಾಗಿದ್ದರು. ನನ್ನನ್ನು ಒಳ್ಳೆಯವನನ್ನಾಗಿಯೇ ಬೆಳೆಸಿದರು. ಆ ಒಳ್ಳೇತನವನ್ನು ನಾನೀಗ ಕಾಪಾಡಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ನಾನೂ ಮನುಷ್ಯನೇ... ನನ್ನಲ್ಲೂ ಕೋಪ ತಾಪಗಳಿವೆ. ದ್ವೇಷ ಅಸೂಯೆಗಳಿವೆ. ಆದರೆ ಅವುಗಳನ್ನು ಹೊರಗೆಡವದಂತೆ ನನ್ನನ್ನು ನಾನೇ ಸಂಯಮದಿಂದ ರಕ್ಷಿಸಿಕೊಳ್ಳುತ್ತಿದೀನಿ.''

''ನಿಮ್ಮ ಈ ಆದರ್ಶದಿಂದ ನಿಮಗೆ ಏನು ಲಾಭ ಆಯ್ತು? ಬರೀ ನಷ್ಟ ಅವಮಾನ...''

''ಈಗ ನೀವು ಹೇಳಿ, ನೀವೂ ಯಾವುದೋ ಆದರ್ಶದ ನೆವದಲ್ಲಿ ನಿಮ್ಮ ಗೆಳತಿಯ ಅಣ್ಣನನ್ನು ಮದುವೆಯಾಗ್ತಿದೀರಿ... ನಿಮಗೆ ಲಾಭವೋ ನಷ್ಟವೋ ಅಂತ ಪ್ರಶ್ನೆ ಕೇಳಿದರೆ ಏನು ಉತ್ತರ ಹೇಳ್ತೀರಿ!''

''ಏನು ಆದರ್ಶವೋ ಏನೋ... ಎಲ್ಲರ ಜೀವನದಲ್ಲಿಯೂ ತಿರುವುಗಳು ಬರುತ್ತವೆ ಅನ್ನೋದು ಮಾತ್ರ ನಿಜ... ನಿಮಗೋಸ್ಕರ ಮಾಲಾ ತೆಗೆದುಕೊಂಡ ನಿರ್ಧಾರವೇ ಬೇರೆ... ಆ ಸ್ಟೆಪ್ ತಗೊಳ್ಳೋ ಮೊದಲು ಅವಳೆಷ್ಟು ಸಂಕಟಪಟ್ಟಿರ ಬಹುದು. ನೀವು ಊಹಿಸೋಕೆ ಆಗುತ್ತಾ?''

''ಏನು ಸ್ಟೆಪ್! ಸೂಯಿಸೈಡ್‌ಗೆ ಪ್ರಯತ್ನ ಪಟ್ಟಳಾ?''

''ಸೂಯಿಸೈಡ್ ಆಗಿದ್ದಿದ್ರೆ ಒಂದೇ ಏಟಿಗೆ ಮುಗಿದು ಹೋಗಿರುತ್ತಿತ್ತು. ಈಗ ಬಲೆಗೆ ಬಿದ್ದ ಪ್ರಾಣಿಯಾಗಿದ್ದಾಳೆ...''

''ಅಂದರೇ... ನೀವು ಏನು ಹೇಳ್ತಿದೀರೋ ನಂಗೆ ಅರ್ಥವಾಗ್ತಿಲ್ಲ...''

''ನಿಮ್ಮ ಬಿಡುಗಡೆಯಾದದ್ದು ಮಾಲಾಳಿಂದ... ಆದರೆ ಅವಳು ನಿಮಗೋಸ್ಕರ, ಧ್ರುವ ಹರಡಿದ್ದ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದಾಳೆ... ಅವಳು ಬಲವಂತವಾಗಿ ಧ್ರುವ ನನ್ನು ಮದುವೆಯಾಗಬೇಕಾಯ್ತು. ಈಗ ಅವಳು ಅವನ ಪತ್ನಿ...''

ಭಾರ್ಗವ ಎದ್ದು ನಿಂತ. ಕೋಪದಿಂದ ತರತರನೆ ನಡುಗಿದ.

''ಸುಳ್ಳು ಸುಳ್ಳು. ಮಾಲಾ ಎಂದೂ ನನಗೆ ಹೀಗೆ ಮೋಸ ಮಾಡಲು ಸಾಧ್ಯವಿಲ್ಲ. ನೀವೂ ಮಧುಕರನ ಜೊತೆಗೆ ಸೇರಿಕೊಂಡು, ನನಗೆ ಸುಳ್ಳು ಹೇಳ್ತಿದೀರಿ.''

''ನಾನೇ ನಮ್ಮ ಮನೆಗೆ ಕರೆದು ನಿಮಗೆ ಸುಳ್ಳು ಹೇಳುವ ಅಗತ್ಯವಿರಲಿಲ್ಲ ಭಾರ್ಗವ. ನಿಮ್ಮ ಮೇಲಿನ ಆಪಾದನೆಯನ್ನು ನೀಗಿಸಲು, ಅವಳು ತೆಗೆದುಕೊಂಡ ನಿರ್ಧಾರ ಇದು. ಮದುವೆಯಾದರೇನಂತೆ? ನೋಡೋರಿಗೆ ಪತಿಪತ್ನಿಯರು. ಆದರೆ ಯಾವ ಇಂಟಿಮೇಟ್ ಸಂಬಂಧ ಅವರಿಬ್ಬರ ನಡುವೆ ಇಲ್ಲ, ನಾನು ಅವಳ ಅತ್ತಿಗೆಯಾಗಿ ಅವಳಿಗೆ ಸಪೋರ್ಟ್ ಮಾಡ್ತೀನಿ. ಧ್ರುವನಿಂದ ಡೇವೋರ್ಸ್ ಕೊಡಿಸ್ತೀನಿ. ನಾನೇ ನಿಂತು ನಿಮ್ಮಿಬ್ಬರ ಮದುವೆಯನ್ನು ನೆರವೇರಿಸುತ್ತೀನಿ.''

ಭಾರ್ಗವ ಶಿಲೆಯಂತೆ ನಿಂತಿದ್ದ. ಮಾಲಾ ಧ್ರುವನನ್ನು ಮದುವೆಯಾದಳು.

ಇದಿಷ್ಟೇ ಅವನ ಕಿವಿಯಲ್ಲಿ ಗುಂಯ್‌ಗುಡುತ್ತಿತ್ತು. ವಸುಧಾ ಅವನ ಕೈ ಹಿಡಿದು ಅವನನ್ನು ಕುಳ್ಳಿರಿಸಿದಳು.

''ಸಮಾಧಾನ ಮಾಡ್ಕೊಳ್ಳಿ ಭಾರ್ಗವ. ಮಾಲಾನಿಂದ ಏನೂ ದ್ರೋಹವಾಗಿಲ್ಲ. ಧ್ರುವ ನಿಮಗೆ ಜಾಮೀನು ಕೊಡದೇ ಇದ್ದಿದ್ದರೆ, ನೀವು ಕೋರ್ಟಿನಿಂದ ಆಚೆ ಬರಲು ಸಾಧ್ಯವಿತ್ತಾ? ಹಾಗೇ ಜೈಲಿಗೆ ಕಳಿಸಿರುತ್ತಿದ್ದರು.''

''ನಾನು ಅಜ್ಞಾತನಾಗಿ ಜೈಲಿನಲ್ಲಿ ಇದ್ದಿದ್ದರೇ ಚೆನ್ನಾಗಿತ್ತೇನೋ... ಮಾಲಾ ನನ್ನನ್ನು ಹೊರತಂದು, ನನ್ನನ್ನು ಕೊಂದುಹಾಕಿಬಿಟ್ಟಳು.''

''ಹಾಗನ್ನಬೇಡಿ ಭಾರ್ಗವ, ಅವಳು ಮಾಡಿರುವುದೆಲ್ಲಾ ನಿಮ್ಮ ಒಳ್ಳೇದಕ್ಕೆ''

''ಇನ್ನು ನನಗೆ ಒಳ್ಳೆಯದು, ಕೆಟ್ಟದ್ದು ಎಲ್ಲಾ ಒಂದೇ... ಅವಳಿಗೆ ನನ್ನ ಮೇಲೆ ನಂಬಿಕೆ ಇರಲಿಲ್ವಾ? ನಾನು ಯಾವ ಅಪರಾಧವನ್ನೂ ಮಾಡಿರಲಿಲ್ಲ ಅಂತ ತಿಳಿದಿದ್ದೂ ಧ್ರುವನ ಮಾತಿಗೇಕೆ ಮಣಿದಳು? ಇದು ನನ್ನ ಸೋಲು. ಈ ಅವಮಾನವನ್ನು ಹೊತ್ತುಕೊಂಡು ನಾನು ಇನ್ನಾ ಬದುಕಿರಬಾರದು...''

''ನೋಡಿ, ನೀವು ಜೀವಕ್ಕೆ ಅಪಾಯ ಮಾಡಿಕೊಳ್ಳುವುದಿಲ್ಲ ಅಂತ ಮಾತುಕೊಡಿ. ಸದ್ಯದಲ್ಲೇ ಆದಷ್ಟು ಬೇಗ ನಿಮ್ಮಿಬ್ಬರನ್ನು ಒಂದುಗೂಡಿಸುವ ಕೆಲಸ ನನಗಿರಲಿ. ನಿಮ್ಮನ್ನೇ ನಂಬಿರುವ ಮಾಲಾಳ ಕೈ ಬಿಡಬೇಡಿ.''

''ನನಗೇ ಯಾವ ಆಧಾರವೂ ಇಲ್ಲ. ನಾನು ಮಾಲಾಳ ಕೈಯನ್ನು ಹಿಡಿದೇ ಇಲ್ಲ. ಇನ್ನು ಬಿಡುವ ಪ್ರಶ್ನೆ ಎಲ್ಲಿ? ಅಂತೂ ಅಣ್ಣತಂಗಿ ಸೇರಿ ನನ್ನನ್ನು ಪರಕೀಯನನ್ನಾಗಿ ಮಾಡಿಬಿಟ್ಟರು. ನಾನು ಯಾವುದೋ ಭ್ರಮೆಯಲ್ಲಿದ್ದೆ. ನನ್ನ ಕಣ್ಣು ತೆರೆಸಿದಿರಿ. ತುಂಬಾ ಥ್ಯಾಂಕ್ಸ್''

''ಪ್ಲೀಸ್ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಿ... ಇದರಲ್ಲಿ ಮಾಲಾಳ ಯಾವ ಸ್ವಾರ್ಥವೂ ಇಲ್ಲ...''

''ಸ್ವಾರ್ಥವೋ ನಿಸ್ವಾರ್ಥವೋ ನನಗೆ ತಿಳಿಯದು. ಆದರೆ ಸ್ವಾಭಿಮಾನವೇ ಇಲ್ಲದಿದ್ದ ಮೇಲೆ ಆ ಬದುಕಿಗೆ ಯಾವ ಅರ್ಥವೂ ಇಲ್ಲ. ಇನ್ನು ಅವಳ ಜೀವನದ ದಾರಿಯಲ್ಲಿ ನಾನು ಎಂದೂ ಬರುವುದಿಲ್ಲ. ಇದು ನನ್ನ ದೃಢ ನಿರ್ಧಾರ. ಹಾಗಂತ ನಿಮ್ಮ ಸ್ನೇಹಿತೆಗೆ ಹೇಳಿಬಿಡಿ.''

''ಹೀಗೆ ನಿರ್ಧಾರ ತಗೋಬೇಡಿ ಭಾರ್ಗವ. ಅವಳು ಧ್ರುವನೊಂದಿಗೆ ಬಾಳುವುದಂತೂ ಸುಳ್ಳು. ಇವೆಲ್ಲಾ ನಿಮ್ಮ ಬಿಡುಗಡೆಗಾಗಿ ಮಾಡಿದ ಡ್ರಾಮಾ.''

''ಈ ಅಣ್ಣತಂಗಿಯರ ಡ್ರಾಮಾದಲ್ಲಿ ನಾನು ಬಫೂನ್ ಆದದ್ದಂತೂ ನಿಜ. ಈ ಪಾಠವನ್ನು ನಾನು ಈ ಜನ್ಮದಲ್ಲಿ ಮರೆಯಲಾರೆ. ಇನ್ನು ಮುಂದೆ ಅವಳ ಜೀವನದ ನಾಟಕದಲ್ಲಿ ನನ್ನ ಪಾತ್ರ ಯಾವುದೂ ಇಲ್ಲ. ಈಗ ಅವಳ ಬದುಕು ಅವಳ ಕೈಲಿದೆ. ಅದನ್ನು ಬಂಗಾರ ಮಾಡಿಕೊಳ್ಳಲು ಹೇಳಿ. ಅವಳು ಎಲ್ಲೇ ಇದ್ದರೂ, ಹೇಗೇ ಇದ್ದರೂ ನನ್ನ ಹಾರೈಕೆಗಳು

ಅವಳ ತಲೆಯ ಮೇಲಿದೆ. ಹಾಗಂತ ಹೇಳಿಬಿಡಿ. ಇಷ್ಟು ಸಾಕು, ನಾನಿನ್ನು ಬರ್ತೀನಿ'' ಎಂದು ಕೈಮುಗಿದ.

''ನನ್ನ ಮದುವೆಗೆ ಬಂದು ಆಶೀರ್ವಾದ ಮಾಡಬೇಕು'' ಎಂದು ಹೇಳಿ, ಮದುವೆಯ ಆಹ್ವಾನಪತ್ರವನ್ನು ನೀಡಿದಳು.

''ದೂರದಿಂದಲೇ ಆಶೀರ್ವಾದ ಮಾಡ್ತೀನಿ. ಮದುವೆ ಮಂಟಪಕ್ಕೆ ನಾನು ಬರಲಾರೆ.''

''ನಿಮ್ಮ ಮನಸ್ಸಿಗೆ ನಾನು ನೋವನ್ನುಂಟು ಮಾಡಿದೆ. ಕ್ಷಮಿಸಿ'' ಎಂದು ಹೇಳಿ, ಬಾಗಿ ಅವನ ಕಾಲುಗಳಿಗೆ ನಮಸ್ಕರಿಸಿದಳು.

''ಛೆ ಛೆ ಇದೆಲ್ಲಾ ಏನು... ದೇವರು ನಿಮ್ಮನ್ನು ಸುಖವಾಗಿಟ್ಟಿರಲಿ. ಆದರೆ, ಈ ದಿನ ನಾನು ಬರಿಗೈಯಲ್ಲಿದೀನಿ. ನಿಮಗೆ ಯಾವುದೇ ಉಡುಗೊರೆಯನ್ನು ಕೊಡಲು ನಾನು ಅಸಮರ್ಥ.''

''ಆ ಮನೆಗೆ ನಾನು ಯಾವ ಉದ್ದೇಶದಿಂದ ಬಲಗಾಲನ್ನಿಟ್ಟು ಹೋಗ್ತಿದೇನೋ ಆ ಉದ್ದೇಶ ಸಫಲವಾಗಲಿ ಅಂತ ಆಶೀರ್ವಾದ ಮಾಡಿ. ಅದೇ ನನಗೆ ಭಾರೀ ಉಡುಗೊರೆ...'' ಭಾರ್ಗವ ಆತ್ಮೀಯತೆಯಿಂದ ಅವಳ ತಲೆಯ ಮೇಲೆ ಕೈಯಾಡಿಸಿ, ಮರುಕ್ಷಣವೇ ಅಲ್ಲಿ ನಿಲ್ಲದೇ ಮುಂಬಾಗಿಲನ್ನು ದಾಟಿದ್ದ. ವಸುಧಾ ಹಾಗೇ ಆಯಾಸಗೊಂಡವಳಂತೆ ಕುರ್ಚಿಯ ಮೇಲೆ ಕುಸಿದು ಕುಳಿತಳು.

* * * *

ಹಸೆಮಣೆಯನ್ನೇರಲು ಅಲಂಕರಿಸಿಕೊಂಡು ಸಿದ್ಧಳಾಗಿದ್ದ ವಸುಧಾಳಿಗೆ ಒಬ್ಬ ಹುಡುಗ ಬಂದು ಒಂದು ಪಾರ್ಸಲ್‌ನ್ನು ಕೈಗಿತ್ತ.

''ಅಕ್ಕಾ ನಿಮಗೇ ಅಂತ ಯಾರೋ ತಂದುಕೊಟ್ಟರು...'' ವಸುಧಾ ಹಿಂದೆ ಮುಂದೆ ತಿರುಗಿಸಿ ನೋಡಿದಳು. ಯಾರು ಕಳಿಸಿರಬಹುದೆಂದು ಗೊತ್ತಾಗಲಿಲ್ಲ. ಆ ಹುಡುಗನೂ ಅಲ್ಲಿಂದ ಓಡಿಹೋಗಿದ್ದ. ಪಾರ್ಸಲನ್ನು ಒಡೆದು ನೋಡಿದಳು. ಒಳಗೆ ಎರಡು ಜೊತೆ ಬೆಳ್ಳಿಯ ಅರಿಶಿನ-ಕುಂಕುಮದ ಬಟ್ಟಲುಗಳಿದ್ದವು. ಎರಡು ಬಟ್ಟಲುಗಳ ಮೇಲೆ ವಸುಧಾಳ ಹೆಸರನ್ನು, ಇನ್ನೆರಡು ಬಟ್ಟಲುಗಳ ಮೇಲೆ ಮಾಲಾಳ ಹೆಸರನ್ನು ಬರೆಸಲಾಗಿತ್ತು. ಇದನ್ನು ಭಾರ್ಗವನೇ ಕಳಿಸಿದ್ದಾನೆ ಎಂದು ಖಚಿತವಾಗಿತ್ತು. ಅವನೂ ಬಂದಿರಬಹುದೇನೋ ಎಂದುಕೊಂಡು ಸಂಭ್ರಮದಿಂದ ಹೊರಬಂದಳು. ಕೋಣೆಯ ಬಾಗಿಲ ಬಳಿ ಅತ್ತಿತ್ತ ಕಣ್ಣು ಹಾಯಿಸುವಾಗ ಮಧು ಅವಳ ಕಣ್ಣಿಗೆ ಬಿದ್ದ. ಅವಳು ತನ್ನನ್ನೇ ಅರಸುತ್ತಿದ್ದಾಳೆಂದು ಭ್ರಮಿಸಿ ಅವಳ ಬಳಿಗೆ ಬಂದ.

''ಏನು ಬೇಕಾಗಿತ್ತು? ಇಲ್ಯಾಕೆ ನಿಂತಿದೀಯ?''

''ಈ ಉಡುಗೊರೆಯನ್ನು ಕೊಟ್ಟವರು ಯಾರು ಅಂತ ಹುಡುಕುತ್ತಿದ್ದೆ. ಇದರಲ್ಲಿ ಯಾರ ಹೆಸರೂ, ಚೀಟಿ ಏನೂ ಇಲ್ಲ. ಒಂದು ಜೊತೆ ನನಗೆ, ಇನ್ನೊಂದು ಜೊತೆ ಮಾಲಾಳಿಗೆ... ಯಾರಿರಬಹುದು? ಆ ಹುಡುಗನೂ ಕಾಣ್ತಿಲ್ಲ''

''ಎಲ್ಲಾ ನಮ್ಮನ್ನೇ ನೋಡ್ತಿದಾರೆ. ನೀನು ಒಳಗೆ ಹೋಗು.''

''ನೀವ್ಯಾಕೆ ಬಂದ್ರಿ? ನಾನು ನಿಮ್ಮನ್ನು ಕರೆದ್ನಾ?''

''ನೀನೂ ಮಾಲಾಳ ತರಹ ಹಾದಿಸಬೇಡ. ಈಗ ಹೋಗು'' ಎಂದು ಹೇಳಿ ತನ್ನ ಜಾಗದಲ್ಲಿ ಬಂದು ಕುಳಿತ.

ನವಗ್ರಹಶಾಂತಿ, ಪೂಜೆ, ಹೋಮ ಮುಕ್ತಾಯದ ಹಂತದಲ್ಲಿತ್ತು. ಹಸೆಮಣೆಯ ಮೇಲೆ ಕುಳಿತಿದ್ದ ಮಾಲಾ ಆಗಾಗ್ಗೆ ಕಣ್ಣುಗಳನ್ನು ಒರೆಸಿಕೊಳ್ಳುತ್ತಿದ್ದಳು. ಹೋಮದ ಹೊಗೆ ಸುತ್ತುವರೆದಿತ್ತು. ಮಗನ ಮದುವೆ ಯಾವುದೋ ಸರಿಯಾದ ಮುಹೂರ್ತದಲ್ಲಿ ನೆರವೇರಿಲ್ಲ. ಆದುದರಿಂದಲೇ ಈ ಅಡಚಣೆ, ಅಡ್ಡಿಗಳು. ಮದುಮಕ್ಕಳಿಗೆ ಗೃಹ ಪ್ರವೇಶವೂ ಆಗಿಲ್ಲ. ಗ್ರಹಶಾಂತಿಯನ್ನು ನೆರವೇರಿಸಿ, ಶುಭಮುಹೂರ್ತದಲ್ಲಿ ಸೊಸೆಯನ್ನು ಮನೆ ತುಂಬಿಸಿಕೊಂಡರೆ, ಧ್ರುವನ ವೈವಾಹಿಕಜೀವನ ಸುಖವಾಗಿರುತ್ತದೆ ಎಂದುಕೊಂಡು ಸುಮಿತ್ರಾದೇವಿ ಈ ಪೂಜಾಕಾರ್ಯಗಳನ್ನು ನೆರವೇರಿಸಿದಳು. ಆದರೆ ನಿರುತ್ಸಾಹದಿಂದ ಹಸೆಮಣೆಯ ಮೇಲೆ ಕುಳಿತಿದ್ದ ಮಾಲಾಳನ್ನು ಕಂಡು, ಅವಳ ಪಕ್ಕದಲ್ಲೇ ಕುಳಿತಿದ್ದ ಧ್ರುವ ಅಸಹನೆಯಿಂದ ಕೆಂಪಾಗಿದ್ದ. ನಮ್ಮಿಬ್ಬರ ಮದುವೆಯಾಗಿ ಒಂದು ತಿಂಗಳ ಮೇಲಾಯಿತು. ನನ್ನ ಮನೆಯನ್ನೂ ತುಂಬಿಲ್ಲ, ಮನವನ್ನೂ ತುಂಬಿಲ್ಲ. ಎಲ್ಲೋ ಒಂದು ಕಲ್ಲು ಬೊಂಬೆ. ಇವಳನ್ನು ಕರಗಿಸುವುದು ಹೇಗೆ? ಯಾವ ಭಾವನೆಗಳೂ ಇಲ್ಲವೇ? ನನ್ನ ಸಹನೆಯನ್ನು ಪರೀಕ್ಷಿಸುತ್ತಿದ್ದಾಳೆ. ಈ ರಾತ್ರಿ ಒಂಟಿಯಾಗಿ ಸಿಗ್ತಾಳಲ್ಲ, ಆಗ ನೋಡ್ಕೋಳ್ತೀನಿ. ತನ್ನಲ್ಲೇ ಅಂದುಕೊಂಡ.

ಸ್ವಂತ ಅಣ್ಣನಿಗೆ ಮದುವೆಯಾಗುತ್ತಿದ್ದರೂ ಮಾಲಾಳಿಗೆ ಯಾವ ಆಸಕ್ತಿಯೂ ಇರಲಿಲ್ಲ. ವಸುಧಾ ಅತ್ತಿಗೆಯಾಗುತ್ತಿದ್ದಾಳೆ ಎನ್ನುವ ಸಂತೋಷಕ್ಕಿಂತ, ಸ್ನೇಹಿತೆ ಸದಾ ಜೊತೆಯಲ್ಲಿ ಇರುತ್ತಾಳೆ ಎನ್ನುವುದೇ ಸಮಾಧಾನ. ಆದರೂ, ಮದುವೆಯ ರಾತ್ರಿ ಅಣ್ಣನೊಡನೆ ವಸುಧಾ ಮಲಗುತ್ತಾಳೆ. ಪ್ರೀತಿಯಿಂದ ಒಂದಾಗುತ್ತಾರೆ. ಆದರೆ ತಾನು? ಪ್ರೀತಿಸಿದವನನ್ನು ಮದುವೆಯಾಗಲಿಲ್ಲ, ಮದುವೆಯಾದವನನ್ನು ಪ್ರೀತಿಸುವುದಂತೂ ಸಾಧ್ಯವಿಲ್ಲ. ಇವನಿಂದ ತಪ್ಪಿಸಿಕೊಳ್ಳುವುದು ಹೇಗೆ? ಈ ದಿನ ಹೋಮ, ಶಾಂತಿ ಎಲ್ಲಾ ಮಾಡಿಸಿರುವುದು ನಮ್ಮಿಬ್ಬರಿಗಾಗಿಯೇ... ನಮಗೂ ಇದು ಮೊದಲ ರಾತ್ರಿ... ಧ್ರುವ ಅವನ ಪಾಡಿಗೆ ಅವನು, ನನ್ನಿಂದ ದೂರ ದೂರವೇ ಇರುವಂತೆ ಏನಾದರೂ ಉಪಾಯವನ್ನು ಮಾಡಲೇಬೇಕು. ನನ್ನ ತೊಳಲಾಟ ವಸುಧಾಳಿಗೂ ಗೊತ್ತು. ಈ ವಿಷಯದಲ್ಲಿ ಅವಳು ನನಗೆ ಏನು ಸಹಾಯ ಮಾಡಬಲ್ಲಳು? ಇದು ಬರೀ ಈ ರಾತ್ರಿಯ ಮಾತಲ್ಲ. ಎಷ್ಟು ದಿನ, ಹೇಗೆ ಏನು ಕಾರಣ ಹೇಳಿ, ತಪ್ಪಿಸಿಕೊಳ್ಳಲು ಸಾಧ್ಯ? ಒಂದಲ್ಲ ಒಂದು ದಿನ

ಇವನು ನನ್ನನ್ನು ಬಲಾತ್ಕಾರ ಮಾಡುವುದು ಖಂಡಿತಾ.. ಹಾಗೇನಾದರೂ ಮಾಡಿದರೆ ನಾನು ಕೇಸು ಹಾಕ್ತೀನಿ ಅಂತ ಹೆದರಿಸಬೇಕು... ಅದೇ ಸರಿ ಎಂಬ ತೀರ್ಮಾನಕ್ಕೆ ಬಂದಳು. ಆದರೂ ಒಳಒಳಗೇ ಭಯದಿಂದ ನಡಗುತ್ತಿದ್ದಳು.

ಮದುವೆಯ ಶಾಸ್ತ್ರಗಳು ಮುಗಿದಿದ್ದವು. ವಧೂವರರು ಯಾವಾಗ ಪರಸ್ಪರ ಹಾರ ಬದಲಾಯಿಸಿಕೊಂಡರೋ, ಮಧು ವಸುಧಾಳ ಕುತ್ತಿಗೆಗೆ ಯಾವಾಗ ತಾಳಿಯನ್ನು ಕಟ್ಟಿದನೋ, ಇಬ್ಬರೂ ಯಾವಾಗ ಸಪ್ತಪದಿ ತುಳಿದರೋ ಯಾವ ಅರಿವೂ ಮಾಲಾಳಿಗೆ ಇರಲಿಲ್ಲ. ಭೂಮದ ಊಟಕ್ಕೆ ಕುಳಿತಾಗ ವಸುಧಾ ಮಾಲಾಳನ್ನು ಮಾತನಾಡಿಸಿ, ಧೈರ್ಯಗೆಡದಿರುವಂತೆ ಹೇಳಿದ್ದಳು. ವಸುಧಾ ಮಧು ಪರಸ್ಪರ ಎಂಜಲು ತಿನ್ನಿಸುವಾಗ, ಧ್ರುವ ಆಸೆ ಕಣ್ಣುಗಳಿಂದ ಮಾಲಾಳ ಕಡೆ ನೋಡಿದ. ಅವಳು ಯಾವುದೋ ಗಾಢವಾದ ಆಲೋಚನೆಯಲ್ಲಿ ಮುಳುಗಿದ್ದಳು. ಧ್ರುವ ಸಿಟ್ಟಿನಿಂದ ತನ್ನ ಎಲೆಗೆ ಬಡಿಸಿದುದನ್ನು ಗಬಗಬನೆ ತಿಂದ.

ರಾತ್ರಿಯ ಆರತಕ್ಷತೆಯ ನಂತರ, ನವದಂಪತಿಗಳೊಂದಿಗೆ ಧ್ರುವ, ಮಾಲಾ ಇಬ್ಬರೂ ಹೋಟೆಲ್ ''ಮಧುಚಂದ್ರ''ಕ್ಕೆ ಬಂದರು. ಇವರುಗಳಿಗಾಗಿ ಎರಡು ಡೀಲಕ್ಸ್ ರೂಮುಗಳನ್ನು ರಿಸರ್ವ್ ಮಾಡಿಸಲಾಗಿತ್ತು. ಮಾಲಾಳಿಗೆ ಈ ವ್ಯವಸ್ಥೆ ಇಷ್ಟವಾಗಿರಲಿಲ್ಲ. ಆದರೆ ವಿರೋಧಿಸಿ ಮನೆಗೆ ಹೋಗುವ ಧೈರ್ಯವೂ ಇಲ್ಲದೇ ಧ್ರುವನೊಡನೆ ಬಂದಿದ್ದಳು.

ವಸುಧಾ ಈ ವ್ಯವಸ್ಥೆಗೆ ಯಾಕೆ ಒಪ್ಪಿಕೊಂಡಳೋ... ಮನೆಯಲ್ಲಿಯೇ ಇದ್ದಿದ್ದರೆ ಹೇಗಾದರೂ ಉಪಾಯ ಮಾಡಿ, ತಾನು, ವಸುಧಾ ಒಂದು ರೂಮಿನಲ್ಲಿ ಮಲಗಬಹು ದಾಗಿತ್ತು ಅಂತೆನ್ನಿಸಿತ್ತು. ವಸುಧಾಳ ಉತ್ಸಾಹವನ್ನು ಕಂಡು ರೇಗಿತ್ತು. ಇವಳಿಗೆ ಗಂಡ ನೊಡನೆ ಮಲಗುವ ಆಸೆ. ನನ್ನ ಕಷ್ಟ ಏನೂಂತ ಅರ್ಥವೇ ಆಗಿಲ್ಲ... ಎಲ್ಲರೂ ಸ್ವಾರ್ಥಿಗಳು. ಅವರವರ ಸುಖವನ್ನು ಮಾತ್ರ ನೋಡಿಕೊಳ್ತಾರೆ... ನನಗೆ ಮಾತ್ರ ಯಾರೂ ಇಲ್ಲ ಅಂತಂದುಕೊಂಡಾಗ ಭಾರ್ಗವನ ನೆನಪಾಗಿತ್ತು. ಅವನೆಂತಹ ಪ್ರೇಮಿ ! ನನ್ನ ಕಷ್ಟದಲ್ಲಿ ನನ್ನ ಸಹಾಯಕ್ಕೆ ಬರಬಾರದೇ... ಧ್ರುವನಿಂದ ನನ್ನನ್ನು ಉಳಿಸಬಾರದೇ ಮನ ಹುಯಿಲಿಟ್ಟಿತು.

ರಿಸರ್ವ್ ಆಗಿದ್ದ ರೂಮಿನೊಳಕ್ಕೆ ಬಂದ ವಸುಧಾ, ಅತಿ ಉತ್ಸಾಹದಿಂದ, ''ವ್ಹಾವ್... ಹೋಟೆಲ್ ರೂಂ ಇಷ್ಟು ಅದ್ಭುತವಾಗಿರುತ್ತದೆ ಅಂತ ನಾನು ಅಂದು ಕೊಂಡಿರಲಿಲ್ಲ'' ಎನ್ನುತ್ತಾ ತಮಗಾಗಿಯೇ ಕಾಯುತ್ತಿದ್ದ ಮಂಚದ ಮೇಲೆ ಕುಳಿತಳು.

''ಇದು ಹೋಟೆಲ್ ಮಧುಚಂದ್ರದ ಡೀಲಕ್ಸ್ ರೂಂ.. ನಮ್ಮಂತಹ ನವದಂಪತಿ ಗಳಿಗೇ ಅಂತಲೇ ಇರುವ ಸ್ಪೆಷಲ್ ರೂಮು...'' ಎನ್ನುತ್ತಾ ಅವಳನ್ನು ತನ್ನ ಮಗ್ಗುಲಿಗೆ ಎಳೆದುಕೊಂಡ. ವಸುಧಾ ಅವನನ್ನು ದೂರ ತಳ್ಳಿದಳು. ಮಧು ಸಿಡಿದೆದ್ದ. ''ಈ ರಾತ್ರಿಗಾಗಿ ನಾನು ಕಾಯುತ್ತಿದ್ದೆ... ಎಕ್ಸಿಕಾ ಎಲ್ಲಾ ಬೇಡ. ಸುಮ್ಮನೇ ಬಾ...'' ಬಲವಂತವಾಗಿ ತಬ್ಬಿ ಕೊಂಡ. ಅವಳು ನಾಚಿದಳು.

''ಎಲ್ಲಾ ದೀಪಗಳನ್ನು ಆರಿಸಿಬಿಡಿ... ನನಗೆ ನಾಚಿಕೆ ಆಗುತ್ತೆ...''

''ಅಷ್ಟೇ ತಾನೇ... ಮೊದಲೇ ಹೇಳಬಾರದಾಗಿತ್ತಾ'' ಎನ್ನುತ್ತಾ ಬೆಡ್ ಪಕ್ಕದಲ್ಲಿದ್ದ ಟೇಬಲ್ ಲ್ಯಾಂಪನ್ನು ಆರಿಸಲು ಮುಂದಾದ. ಅಲ್ಲಿ ಇಟ್ಟಿದ್ದ ಗ್ರೀಟಿಂಗ್ ಕಾರ್ಡ್ ಅವನ ಕಣ್ಣಿಗೆ ಬಿದ್ದಿತು.

''ಗ್ರೀಟಿಂಗ್ಸ್'' ಎಂದು ಹೇಳಿಕೊಂಡು, ಕವರನ್ನು ಬಿಚ್ಚಿದ. ಒಳಗೆ ಒಂದು ಸೊಗಸಾದ ಒಂದು ಹನಿಮೂನ್ ಕಾರ್ಡ್ ದಪ್ಪ ದಪ್ಪ ಅಕ್ಷರಗಳಲ್ಲಿ ಬರೆದಿದುದನ್ನು ಓದಿಕೊಂಡ. ''ನವದಂಪತಿಗಳಿಗೆ ಶುಭರಾತ್ರಿ... ಆದರೆ ಏಡ್ಸ್ ಬಗ್ಗೆ ಎಚ್ಚರ ವಹಿಸಿ'' ಮತ್ತೊಂದು ಬಾರಿ ಓದಿದ. ಒಂದೇ ಬಾರಿಗೆ ಉತ್ಸಾಹವೆಲ್ಲಾ ಝುರ್ರನೆ ಇಳಿದಂತಾಯಿತು. ಸಣ್ಣಗೆ ಮೈ ಬೆವತಿತು...

''ಏನದು ? ಯಾರದ್ದು?...''

''ಯಾವುದೋ ಗ್ರೀಟಿಂಗ್ ಕಾರ್ಡ್... ವಿಷ್ ಮಾಡಿದಾರೆ ಯಾರೋ... ಹೋಟೆಲ್ಲಿನವರೇ ಇರಬೇಕು.''

''ಎಲ್ಲಿ ಕೊಡಿ ನೋಡೋಣ...''

''ಥೂ ಏನೇನೋ ಬರೆದಿದೆ. ನೀನು ನೋಡುವಂಥದಲ್ಲ...''

''ನೀವು ಮಾತ್ರ ನೋಡಬಹುದಾ?'' ಎನ್ನುತ್ತಾ ಅವನ ಕೈಯಿಂದ ಕಾರ್ಡನ್ನು ಕಿತ್ತುಕೊಂಡು ತಾನೂ ಓದಿದಳು, ಗೊಳ್ಳನೆ ನಕ್ಕಳು.

''ಇದರಲ್ಲಿ ನಗೋದೇನಿದೆ... ಯಾರಾದ್ರೂ ಇಂತಹ ಗ್ರೀಟಿಂಗ್ಸ್‌ನ ಇಡ್ತಾರಾ?''

''ಇದರಲ್ಲಿ ತಪ್ಪೇನಿದೆ? ನಮ್ಮಂತಹವರಿಗೆ ಎಚ್ಚರಿಕೆ ನೀಡಿದಾರೆ ಅಷ್ಟೇ. ಈಗ ಕಾಲ ಹಾಗಿದೆಯಲ್ಲ...''

''ನಿನಗೆ ನನ್ನ ಮೇಲೆ ನಂಬಿಕೆ ಇದೆ ತಾನೇ...?''

''ನಂಬಿಕೆ ಇದೆ. ಆದರೂ...''

''ಏನು ಆದರೂ... ಅಂತ ರಾಗ ಎಳಿತೀಯಲ್ಲ, ಬ್ಲಡ್ ಟೆಸ್ಟ್ ಮಾಡಿಸಿಕೊಂಡು ರಿಪೋರ್ಟ್ ತಂದು ತೋರಿಸಬೇಕಾ?''

''ನಾನೆಲ್ಲಿ ಹಾಗಂದೆ?... ಇಂಥದೇ ಕಾರ್ಡ್‌ನ್ನ ಮಾಲಾಳ ರೂಮಿನಲ್ಲಿಯೂ ಇಟ್ಟಿರಬಹುದಲ್ವಾ?''

''ಹೂಂ, ಇರಬಹುದು. ಅದನ್ನು ಅವರು ನೋಡಿಕೊಳ್ತಾರೆ. ನಮಗೇಕೆ! ನೀನು ಮಾಲಾಳನ್ನು ಕೇಳೋಕೆ ಹೋಗಬೇಡ.''

''ಕೇಳಿದ್ರೆ ಏನೀಗ? ನೀವು, ಧ್ರುವ ಇಂತಹ ವಿಚಾರಗಳನ್ನು ಮಾತೇ ಆಡಲ್ವಾ?''

''ಆಡದೇ ಏನು ಬೇಕಾದಷ್ಟು ಆಡಿದೀವಿ... ಆದರೆ ಈಗ ಹಾಗಲ್ಲ, ನಾವು ಮದುವೆಯಾಗಿದೀವಿ. ಹೆಂಡತಿಯರು ಬಿಡಬೇಕಲ್ಲ...'' ನಕ್ಕ.

''ನಾನೇನೂ ಬೇಡ ಅನ್ನಲ್ಲ. ನೀವು ಈಗಲೇ ಹೋಗಿ ಧ್ರುವನ ಹತ್ತಿರ ಏನು ಬೇಕಾದ್ರೂ ಮಾತನಾಡಿ. ನಾನು ಹಾಯಾಗಿ ಮಲಗ್ತೀನಿ.''

''ನಿನ್ನನ್ನು ಹಾಯಾಗಿ ಮಲಗೋಕೆ ಬಿಡ್ತೀನಾ ಇಲ್ಲಿ...'' ಎನ್ನುತ್ತಾ ಅವಳನ್ನು ಬಲವಂತವಾಗಿ ತಬ್ಬಿಕೊಂಡ. ಅವಳು ಕಿರುಚಿದಳು.

''ಸದ್ಯ ಇದು ಹೋಟೆಲ್ಲು. ನಿನ್ನ ಕೂಗು ಕೇಳಿ ಯಾರೂ ಓಡಿ ಬರಲ್ಲ. ಮನೆಯಾಗಿದ್ದಿದ್ದರೆ, ನನ್ನ ಮಾನ ಹರಾಜಾಗುತ್ತಿತ್ತು...'' ಎನ್ನುತ್ತಾ ಪ್ರೀತಿಯ ಮಾತುಗಳನ್ನಾಡುತ್ತಾ ಅವಳನ್ನು ತನ್ನ ಬಾಹು ಬಂಧನಗಳಲ್ಲಿ ಅಡಗಿಸಿಕೊಂಡ. ಪ್ರಥಮ ಸಮಾಗಮನದ ಸುಖಾನುಭವದಲ್ಲಿ ಇಬ್ಬರೂ ಮೈ ಮರೆತರು. ಮಾಲಾಳಿಗೆ ಕೊಟ್ಟ ಮಾತನ್ನು ವಸುಧಾ ಮರೆತಿದ್ದಳು.

ಮಾಲಾ ಯಾವುದೇ ಉತ್ಸಾಹವನ್ನೂ ತೋರುವುದಿಲ್ಲವೆಂದು ಧ್ರುವ ಬಲ್ಲ. ಆದರೆ ಬಲಾತ್ಕಾರ ಮಾಡಲು ಅವನು ಹಿಂಜರಿದಿದ್ದ. ಈ ರಾತ್ರಿ ಅವಳನ್ನು ಹೇಗೆ ಒಲಿಸಿಕೊಳ್ಳಬೇಕೆಂದು ಯೋಚಿಸುತ್ತಾ ರೂಮಿನ ಒಳಗೆ ಬಂದವನಿಗೆ ಮೊದಲಿಗೇ ಟೀಪಾಯ್ ಮೇಲಿದ್ದ ಗ್ರೀಟಿಂಗ್ ಕಾರ್ಡ್ ಕಣ್ಣಿಗೆ ಬಿತ್ತು. ಸುಮ್ನೇ ಎಂಬಂತೆ, ಸಮಯವನ್ನು ಕೊಲ್ಲಲು ಆ ಕಾರ್ಡ್ ತೆಗೆದು ಓದಿದ. ಮೈಯ ಶಕ್ತಿಯೆಲ್ಲಾ ಒಮ್ಮೆಗೇ ಸೋರಿಹೋದಂತೆನಿಸಿತು. ಸದ್ಯ ಮಾಲಾ ಈ ಕಾರ್ಡನ್ನು ಓದಿಲ್ಲ ಎಂದುಕೊಂಡು ಧೈರ್ಯದಿಂದ ಕಾರ್ಡ್‌ನ್ನು ಮಡಿಸಿ, ತನ್ನ ದಿಂಬಿನ ಕೆಳಗೆ ಇಟ್ಟುಕೊಂಡ. ಮಾಲಾ ಸುಸ್ತಾದವಳಂತೆ ಮಲಗಿಬಿಟ್ಟಿದ್ದಳು.

''ಮಾಲಾ...'' ಆದಷ್ಟು ಪ್ರೀತಿಯ ಜೇನನ್ನು ಧ್ವನಿಯಲ್ಲಿ ತುಂಬಿ ಕರೆದ. ಅವಳು ಉತ್ತರಿಸಲಿಲ್ಲ, ಮೆಲ್ಲನೆ ಅವಳ ಕೆನ್ನೆಯನ್ನು ಸವರಿದ. ಅವಳು ಹಾವನ್ನು ಮೆಟ್ಟಿದವಳಂತೆ ಬೆಚ್ಚಿ ಎದ್ದಳು.

''ಏನಾಯ್ತು? ನಾನೇ ನಾನೇ'' ಎಂದು ನಕ್ಕ.

''ನನಗೆ ನಿದ್ದೆ ಬಂದು ಬಿಟ್ಟಿತ್ತು...'' ಸುಳ್ಳು ಹೇಳಿದಳು.

''ಸದಾ... ನಿದ್ದೆ ಅಥವಾ ಸುಸ್ತು. ಇಲ್ಲಿಗೆ ನಾವು ಬಂದಿರೋದು ಬರೀ ನಿದ್ದೆ ಮಾಡೋಕೆ ಅಲ್ಲ...''

''ಸಾರಿ... ನಾನೇನ್ಮಾಡ್ಲೀ... ಯಾಕೋ ನನ್ನ ಹೆಲ್ತ್ ಇನ್ನೂ ಇಂಪ್ರೂವ್ ಆಗಿಯೇ ಇಲ್ಲ.''

''ನಿನಗೆ ಈ ಟಾನಿಕ್ ಬಿದ್ದರೆ ಎಲ್ಲಾ ಸರಿಹೋಗ್ತೀಯ... ಪ್ಲೀಸ್ ಇನ್ನೂ ಸತಾಯಿಸಬೇಡ... ನೀನು ಹೀಗೇ ಆಡ್ತಿದ್ದರೆ ನಾನು ರೇಪ್ ಮಾಡಿ ಬಿಡ್ತೀನಿ ಅಷ್ಟೇ...''

''ನಾನು ಸತ್ತೇ ಹೋಗ್ತೀನಿ... ನನಗೆ ಏನೋ ಭಯ... ನಾನು ನಿಮಗೆ ಮೋಸ ಮಾಡಿಬಿಟ್ಟೆ... ಕ್ಷಮಿಸಿ...'' ಅಳುವ ಧ್ವನಿ ಮಾಡಿದಳು. ಅವಳು ಮೋಸ ಮಾಡಿಬಿಟ್ಟೆ ಎಂದು ನುಡಿದಾಗ, ಅವನ ಚಿತ್ತ ಎತ್ತೆತ್ತಲೋ ಓಡಿತು.

''ನಾನೊಂದು ಮಾತು ಕೇಳ್ತೀನಿ. ನೀನು ನಿಜ ಹೇಳಬೇಕು...'' ಅವನು ಏನು ಕೇಳಬಹುದೆಂದು ಊಹಿಸಿ ಅವಳು ಉತ್ತರವನ್ನು ಸಿದ್ಧಮಾಡಿದಳು.

''ನೀನೂ ಭಾರ್ಗವ ದೇಹ ಸಂಬಂಧವನ್ನು ಇಟ್ಟುಕೊಂಡಿದ್ರಾ?'' ಕಿಡಿಗಣ್ಣಿನಿಂದ ಅವನನ್ನೇ ನೋಡಿದಳು.

''ಏನು ಕೇಳ್ತಿದೀರಾ.....? ನಿಮಗೆ ನಾಚಿಕೆಯಾಗಬೇಕು...''

''ನಾಚಿಕೆ ಯಾಕೆ? ಏನೋ ಅನುಮಾನ ಬಂತು ಕೇಳಿದೆ. ನೀವಿಬ್ರೂ ಪ್ರೀತಿಸ್ತಿದ್ರಿ... ಒಂದೇ ಮನೆಯಲ್ಲಿ ಇದ್ರಿ... ಅಟ್ರ್ಯಾಕ್ಷನ್... ಅಫೇರ್...''

''ನಮ್ಮ ಪ್ರೀತಿ ಹೇಗಿತ್ತು ಅಂತ ನಿಮಗೇನು ಗೊತ್ತು? ಅದನ್ನು ನಿಮಗೆ ಹೇಳಬೇಕೂಂತ ಏನೂ ಇಲ್ಲ...''

''ಹೋಗಲಿ ಬಿಡು... ಒಂದು ವೇಳೆ ನಿಮ್ಮಿಬ್ಬರ ನಡುವೆ ಯಾವುದೇ ಸಂಬಂಧ ವಿತ್ತು ಅಂತಾನೇ ಇಟ್ಕೋ... ಈಗ ಭಯ ಯಾಕೆ? ಅನುಭವವಿಗುವವಳು... ಇದರಿಂದ ನನಗೇನೂ ಬೇಸರವಿಲ್ಲ''

''ನಮ್ಮಿಬ್ಬರ ನಡುವೆ ಇಂತಹ ಸಂಬಂಧವಿರಲಿಲ್ಲ, ಭಾರ್ಗವ ಎಂದೂ ಅಂತಹ ಕೆಳಮಟ್ಟಕ್ಕೆ ಇಳಿದವನೇ ಅಲ್ಲ...''

''ನನಗೆ ಅವನ ಮೇಲೆ ನಂಬಿಕೆ ಇದೆ. ನಿನ್ನ ಮೇಲೇ ನಂಬಿಕೆ ಇಲ್ಲ... ನೀನಾಗಿಯೇ ನೀನು ನಿನ್ನ ಪ್ರೀತಿಯನ್ನು ಪ್ರಕಟಗೊಳಿಸಲು ನಿನ್ನ ದೇಹವನ್ನು ಒಪ್ಪಿಸಿರಬಹುದು ಅಲ್ವಾ?''

ಕೋಪದಿಂದ ಉದ್ರೇಕಗೊಂಡ ಮಾಲಾ ಅವನ ಕೆನ್ನೆಗೆ ಹೊಡೆಯಲೆಂದು ಕೈ ಎತ್ತಿದಳು. ಆದರೆ ಏನನ್ನೋ ಯೋಚಿಸಿ ಕೈ ಇಳಿಬಿಟ್ಟಳು.

''ಯಾಕೆ? ಈ ನೆವದಲ್ಲಿ ನನ್ನ ಕೆನ್ನೆಯನ್ನು ಮುಟ್ಟೋಕೂ ಇಷ್ಟವಿಲ್ವಾ. ಹೊಡೀ. ಎಷ್ಟು ಬೇಕಾದ್ರೂ ಹೊಡಿ... ನನಗೆ ಬೇಸರವಿಲ್ಲ. ನಾನು ನಿನಗೋಸ್ಕರ ನಿನ್ನ ಎಲ್ಲಾ ತಪ್ಪುಗಳನ್ನೂ ಕ್ಷಮಿಸ್ತೀನಿ.''

''ನೀವು ನನ್ನನ್ನು ಕ್ಷಮಿಸೋಕೆ ನಾನು ಯಾವ ತಪ್ಪನ್ನೂ ಮಾಡಿಲ್ಲ. ಇಂತಹ ಪ್ರಶ್ನೆಗಳನ್ನು ಕೇಳ್ತಿರೋ ನಿಮ್ಮ ಮೇಲೇ ನನಗೆ ನಂಬಿಕೆ ಇಲ್ಲ. ಈಗ ನಾನೂ ಇದೇ ಪ್ರಶ್ನೆಯನ್ನು ಕೇಳ್ತೀನಿ. ನೀವು ಎಷ್ಟೋ ಜನ ಹುಡುಗಿಯರ ಸಹನಾಸವನ್ನು ಮಾಡಿದೀರಿ ಅಲ್ವಾ?'' ಅವನ ಮುಖ ಕಪ್ಪಿಟ್ಟಿತು.

''ನಿನಗೆ ಯಾರು ಹೇಳಿದ್ರು...''

''ಯಾರು ಹೇಳಿದಾರೋ ಆ ಮಾತು ಬೇಡ. ನೀವು ನಿಜ ಹೇಳಿ. ನನಗೆ ಅಷ್ಟು ಸಾಕು.''

''ಇಂಗ್ಲೆಂಡ್‌ಗೆ ಹೋಗಿದ್ದಾಗ ಒಂದಿಬ್ಬರು ಹುಡುಗಿಯರ ಸಹವಾಸ ಮಾಡಿದ್ದೆ... ಆದರೆ ಪ್ರೀತಿಸಿದ್ದು ನಿನ್ನನ್ನು ಮಾತ್ರ...''

''ನಿಮ್ಮ ಈ ಪ್ರೀತಿಗೆ ಪವಿತ್ರತೆಯೇ ಇಲ್ಲ... ನನಗೆ ನಿಮ್ಮ ಪ್ರೀತಿಯೂ ಬೇಡ, ಸಂಬಂಧವೂ ಬೇಡ...''

''ನೀನು ಹೀಗಂದ್ರೆ ನಾನು ಬಿಡ್ತೀನಾ? ಮದುವೆಯಾದ ಮೇಲೆ ಈ ಸಂಬಂಧ ಬೇಡ ಅಂದ್ರೆ ನಗ್ತಾರೆ... ನೀನು ಹೆಣ್ಣೇ ಅಲ್ಲ... ಹೆಣ್ಣಿಗೆ ಇರಬೇಕಾದ ಭಾವನೆಗಳೇ ಇಲ್ಲ.''

''ಇಷ್ಟೆಲ್ಲಾ ನೀವು ನನ್ನನ್ನು ಅಂದಮೇಲೆ, ನಾನು ನಿಮ್ಮನ್ನು ಒಂದ್ಮಾತು ಕೇಳ್ತೀನಿ. ಒಂದು ವೇಳೆ ನನಗೆ ಏಡ್ಸ್ ಇದೆ ಅಂತ ತಿಳಿದರೂ ನನ್ನನ್ನು ಅಕ್ಸೆಪ್ಟ್ ಮಾಡಿಕೊಳ್ತೀರಾ?'' ಅವನು ಅವಳಿಂದ ಮಾರು ದೂರ ಸಿಡಿದು ಕೂತ.

ಅವಳು ನಕ್ಕಳು. ಆದರೆ ಅವನು ಬೆವರಿನಿಂದ ತೊಯ್ದು ಹೋಗಿದ್ದ. ಸದ್ಯ ತನ್ನನ್ನು ಈ ಪ್ರಶ್ನೆ ಕೇಳಲಿಲ್ಲವಲ್ಲ.

''ನಿನಗೆ... ಏಡ್ಸ್... ಬ್ಲಡ್ ಟೆಸ್ಟ್ ಮಾಡಿಸಿಕೊಂಡಿದೀಯಾ?''

''ಇಲ್ಲ, ಮಾಡಿಸಿಕೊಂಡಿಲ್ಲ. ಆದರೆ ಯಾಕೋ ಏನೋ ಅನುಮಾನ. ಅದಕ್ಕೇ ಹೇಳಿದ್ದು, ನಾನು ನಿಮಗೆ ಮೋಸ ಮಾಡಲಾರೆ ಅಂತ.''

''ಸುಳ್ಳು... ನನ್ನನ್ನು ದೂರ ಇಡೋಕೆ ಈ ನಾಟಕ.''

''ನಿಜವೂ ಇರಬಹುದು ಅಂತ ಯಾಕೆ ಯೋಚಿಸಲ್ಲ...?''

''ಹಾಗಾದ್ರೆ ಯಾವೋನ್ ಸಹವಾಸ ಮಾಡಿದ್ದೆ ನೀನು...?''

''ಇದಕ್ಕೆ ಅನೈತಿಕ ದೇಹ ಸಂಬಂಧವಿರಲೇ ಬೇಕೂಂತ ಏನಿಲ್ಲ... ನಿಮಗೂ ಗೊತ್ತು. ಓದಿರುತ್ತೀರಿ... ಆದರೆ ನೀವು ಒಂದಿಬ್ಬರು ಹುಡುಗಿಯರ ಸಹವಾಸ ಮಾಡಿದೀರಲ್ಲ. ನಿಮ್ಮ ಬ್ಲಡ್ ಟೆಸ್ಟ್ ಮಾಡಿಸಿಕೊಂಡಿದೀರಾ?''

ಅವನು ಕೈ ಎತ್ತಿ ಫಟ್ ಎಂದು ಅವಳ ಕೆನ್ನೆಗೆ ಬಾರಿಸಿದ. ಅವಳೂ ಅವನಿಗೆ ಒಂದೇಟು ಹಾಕಿದಳು.

''ಇದು ಏಟಿಗೆ ಎದಿರೇಟು... ನನಗೆ ಏಡ್ಸ್ ಇರಬಹುದು. ನಿಮಗೆ ಇಲ್ಲದೆಯೂ ಇರಬಹುದು. ಆದರೆ ನಿಮ್ಮ ಈ ಏಟನ್ನು ನಾನು ಈ ಜನ್ಮದಲ್ಲಿ ಮರೆಯುವುದಿಲ್ಲ. ನನ್ನ ಭಾವನೆಗಳನ್ನು ಸುಟ್ಟು ಬೂದಿ ಮಾಡಿ, ನಿಮ್ಮನ್ನು ಮದುವೆಯಾದೆ. ನಿಮಗೆ ಹೆಣ್ಣಿನ ಮನಸ್ಸು ಹೇಗಿರುತ್ತೆ ಅಂತ ತಿಳಿದೇ ಇಲ್ಲ. ಹೆಣ್ಣಿನ ಸಂಬಂಧ ಮಾತ್ರ ಬೇಕು. ಅದು ನೈತಿಕ ವಾದರೂ ಸರಿ, ಅನೈತಿಕವಾದರೂ ಸಂಬಂಧ ಬೆಳೆಸಿದ್ದವರು ನೀವು, ನಾನಲ್ಲ. ನೀವೇ ಒಪ್ಪಿಕೊಂಡಿದೀರಿ. ಮೊದಲು ನಿಮ್ಮ ಬ್ಲಡ್ ಟೆಸ್ಟ್ ಮಾಡಿಸಿಕೊಳ್ಳಿ. ಇನ್ನು ಮುಂದೆ ಬೇರೆ ಯಾವುದೇ ಹುಡುಗಿಯ ಸಂಬಂಧ ಬೆಳೆಸುವ ಮುಂಚೆ ನಾಲ್ಕು ಸಾರಿ ಯೋಚಿಸಿ. ಗುಡ್‌ನೈಟ್..'' ಎಂದು ಅತ್ತ ತಿರುಗಿ ಮಲಗಿದಳು.

ಕೋಪ, ಸಂಕೋಚ, ಅವಮಾನಗಳಿಂದ ತತ್ತರಿಸಿ ಹೋಗಿದ್ದ. ಅವಳನ್ನು ಕೆಣಕಲು

ಹೋಗಿ, ತಾನೇ ಪ್ರಪಾತಕ್ಕೆ ಬಿದ್ದಿದ್ದ. ಅವಳನ್ನು ಅನುಭವಿಸುವ ಆಸೆಯಿಂದ ನಿಜವನ್ನು ಹೇಳಿ ಮೂರ್ಖನಾಗಿದ್ದ. ಇದರ ಬದಲು ರೇಪ್ ಮಾಡಿ ತನ್ನ ಆಸೆಯನ್ನು ಪೂರೈಸಿ ಕೊಂಡಿದ್ದರೆ ಅವಳೂ ತೆಪ್ಪಗಾಗಿರುತ್ತಿದ್ದಳೇನೋ ಅಂತ ಅನ್ನಿಸಿತು. ಅವಳ ಕಡೆ ನೋಡಿದ. ಇದೆಲ್ಲಾ ಇವಳು ತನ್ನನ್ನು ದೂರವಿಡಲು ಮಾಡಿರುವ ಪ್ರಯತ್ನ ಎಂದುಕೊಂಡ. ಆದರೂ ಅವನ ಅಭಿಮಾನಕ್ಕೆ ಭಾರಿ ಪೆಟ್ಟು ಬಿದ್ದಿತ್ತು. ಬಹಳ ಗರ್ವ ಇವಳಿಗೆ... ಇವಳಿಗೆ ಡೈವೋರ್ಸ್‌ನ್ನು ಕೊಡಬಾರದು. ಇವಳ ಸಹವಾಸವನ್ನೂ ಮಾಡಬಾರದು... ಗಂಡಸಿನ ಸಹವಾಸಕ್ಕಾಗಿ ಹಾತೊರೆದು ಇವಳು ತಾನಾಗಿಯೇ ನನ್ನ ಬಳಿಗೆ ಬರಬೇಕು...

ನನಗೇನು? ಬೇಕೆನಿಸಿದಾಗ, ಹತ್ತಾರು ಹೆಣ್ಣುಗಳು ಎದುರಿಗೆಬಂದು ಬೆತ್ತಲೆ ನಿಲ್ಲುತ್ತವೆ. ಈ ಮಡಿ ಹೆಂಗಸನ್ನು ನಾನಾಗಿಯೇ ಮುಟ್ಟುವುದಿಲ್ಲ ಎಂದುಕೊಂಡು ಅವಳ ಬೆನ್ನಿಗೆ ಬೆನ್ನು ಮಾಡಿ ಮಲಗಿದ. ನಿದ್ದೆ ಹತ್ತಿರ ಸುಳಿಯಲಿಲ್ಲ. ದಿಂಬನ್ನು ಅತ್ತಿತ್ತ ಸರಿಸುವಾಗ ಗ್ರೀಟಿಂಗ್ ಕಾರ್ಡ್ ಕೈಗೆ ತಗುಲಿತು. ಥೂ ಈ ಗ್ರೀಟಿಂಗ್ ಕಾರ್ಡ್ ನನ್ನ ಆಸೆಗಳನ್ನೆಲ್ಲ ಚೂರು ಚೂರು ಮಾಡಿತು ಎಂದು ಸಿಟ್ಟಿನಿಂದ ಕಾರ್ಡನ್ನು ಹರಿದು ಚೂರು ಚೂರು ಮಾಡಿ ಎಸೆದ. ಪರಪರ ಸದ್ದಾದರೂ ಮಾಲಾ ತಿರುಗಿ ನೋಡಿರಲಿಲ್ಲ.

ಬೆಳಗಾಗುವುದನ್ನೇ ಕಾದಿದ್ದವನಂತೆ, ಆರು ಗಂಟೆಯಾಗುತ್ತಿದ್ದಂತೆಯೇ ಎದ್ದು ಹೇಳದೇ ರೂಮಿನಿಂದ ಹೊರಬಿದ್ದ. ಮಾಲಾ ಗಾಢವಾದ ನಿದ್ದೆಯಲ್ಲಿದ್ದಳು. ಅವನು ಹೋದದ್ದು ಅವಳಿಗೆ ಗೊತ್ತಾಗಲೇ ಇಲ್ಲ.

ಎಷ್ಟೋ ಹೊತ್ತಿನ ಮೇಲೆ ವಸುಧಾ ಬಂದು ಅವಳನ್ನು ಎಬ್ಬಿಸಿದಾಗಲೇ ಅವಳಿಗೆ ಎಚ್ಚರ. ''ಇದೇನೇ ಬಾಗಿಲು ತೆಗೆದೇ ಮಲಗಿದೀಯ... ಧ್ರುವ ಎಲ್ಲಿ ಹೋದರು, ಕಾಣ್ತಾ ಇಲ್ಲ''

''ಎಲ್ಲಿ ಹೋದನೋ ಯಾರಿಗೆ ಗೊತ್ತು?''

''ಯಾಕೆ? ರಾತ್ರಿಯ ಕತೆ ಏನಾಯ್ತು?''

''ಏನಾಗುತ್ತೆ? ಏನೂ ಇಲ್ಲ...'' ಸೊಟ್ಟ ಮೂತಿ ಮಾಡಿದಳು.

''ಅಂದ್ರೇ... ಅವನು...''

''ಚೆನ್ನಾಗಿ ಹೆದರಿಸಿದೆ. ತೆಪ್ಪಗೆ ಮಲಗಿದ... ಏನು ನಿಮ್ಮ ಸಮಾಚಾರ... ಮಧೂಗೆ ಡಿಸಪಾಯಿಂಟ್‌ಮೆಂಟಾ?.. ''

''ಇಲ್ಲ ಮಾಲಾ... ಸಾರಿ ಕಣೆ... ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲ. ಮಧುಕರನಿಗೆ ಸೋಲಲೇಬೇಕಾಯ್ತು...'' ಮಾಲಾ ಪೆಚ್ಚಾದಳು. ಮರುಗಳಿಗೆಯಲ್ಲೇ ಸರಿ ಮಾಡಿಕೊಂಡಳು.

''ಹೋಗಲಿಬಿಡು. ಅದು ನಿಮ್ಮ ಲೈಫ್, ನಿಮ್ಮ ಪರ್ಸನಲ್ ವಿಷಯ. ನನಗೋಸ್ಕರ ನೀನೂ ಸನ್ಯಾಸಿನಿ ತರಹ ಇರಬೇಕೂಂತ ಏನೂ ಇಲ್ಲ. ಆದರೆ ಮಧೂನ ಸ್ವಲ್ಪ ಸತಾಯಿಸಿ ದ್ದರೆ ನನಗೂ ಮಜಾ ಸಿಗುತ್ತಿತ್ತು.''

''ಸತಾಯಿಸೋಣ ಅಂತಲೇ ಅಂದುಕೊಂಡಿದ್ದೆ. ಆದರೆ ಏನಾಯ್ತು ಗೊತ್ತಾ...'' ಎನ್ನುತ್ತಾ ಗ್ರೀಟಿಂಗ್ ಕಾರ್ಡ್ ವಿಷಯವನ್ನು ಹೇಳಿದಳು. ''ನಾನೇನಾದರೂ ಸತಾಯಿಸಿದ್ದರೆ, ಮಧೂಗೆ ನನ್ನ ಮೇಲೆ ಸಂಶಯ ಬರುತ್ತಿರಲಿಲ್ವಾ!.. ನಿಮ್ಮ ರೂಂನಲ್ಲೂ ಗ್ರೀಟಿಂಗ್ ಕಾರ್ಡ್ ಸಿಗ್ತಾ?''

''ಏನೋ ನಂಗೊತ್ತಿಲ್ಲ. ಇದ್ದರೆ ಇಲ್ಲೇ ಇರಬಹುದು...'' ಎನ್ನುತ್ತಾ ಟೀಪಾಯಿ ಮೇಲೆ ಸುದುಕಿದಳು. ಟೀಪಾಯಿ ಕೆಳಗೆ ಹರಿದು ಬಿದ್ದ ಚೂರುಗಳನ್ನು ಕಂಡಳು. ''ನೋಡು ಇದೇ ಇರಬಹುದಾ?'' ಎನ್ನುತ್ತಾ ಒಂದೆರಡು ಚೂರುಗಳನ್ನು ಎತ್ತಿ ಜೋಡಿಸಿ ಓದಲು ಪ್ರಯತ್ನಿಸಿದಳು.

''ಹೂಂ... ಇದೇ...'' ವಸುಧಾ ಕಷ್ಟಪಟ್ಟು ಓದಿದಳು. ''ಆದರೆ ಯಾರು ಹರಿದಿದ್ದು?''

''ಇನ್ಯಾರು ? ಧ್ರುವನೇ ಇರಬೇಕು. ನಾನಂತೂ ನೋಡಲೇ ಇಲ್ಲ. ಅದಕ್ಕೇ ಏನೋ ತೆಪ್ಪಗೆ ಮಾತಿಲ್ಲದೇ ಮಲಗಿದ್ದು.''

''ಯಾಕೆ? ಅವರ ಮೇಲೆ ಅವರಿಗೆ ನಂಬಿಕೆ ಇರಲಿಲ್ವಾ?''

''ಇಲ್ಲ, ನನ್ನ ಮೇಲೆ ಅವನಿಗೆ ನಂಬಿಕೆ ಇರಲಿಲ್ಲ. ಭಾರ್ಗವನ ಜೊತೆ ಫಿಸಿಕಲ್ ಸಂಬಂಧ ಇಟ್ಟುಕೊಂಡಿದ್ಯಾ ಅಂತ ಕೇಳಿದ ರ್‍ಯಾಸ್ಕಲ್...''

''ನೀನೇನಂದೆ?...''

''ನಮ್ಮ ಪ್ರೀತಿ ಅಷ್ಟು ಕೆಳಮಟ್ಟದ್ದಲ್ಲ ಅಂತ ಬೈದೆ. ಅವನಿಗೆ ನಂಬಿಕೆ ಬರಲಿಲ್ಲ ಅಂತ ಕಾಣುತ್ತೆ. ತಾನು ಯಾವುದೋ ಕ್ಯಾಬರೇ ಹುಡುಗೀರ ಸಹವಾಸ ಮಾಡಿದ್ನಂತೆ. ಅದು ಸರೀನಾ?''

''ಹೀಗೇನೋ ಇದೆ ಅಂತ ನನಗೆ ಅನುಮಾನವಿದ್ದೇ ಇತ್ತು ಮಾಲಾ... ಧ್ರುವ ಷೋಕಿ ಮನುಷ್ಯ. ಆದರೆ ನಿನ್ನನ್ನ ಮುಟ್ಟಲೇ ಇಲ್ಲ ಅಂತಂದ್ರೆ ಆಶ್ಚರ್ಯವಾಗುತ್ತೆ.''

''ನಾನು ಹೆಂಡತಿ ಅಲ್ವಾ? ಯಾವತ್ತಿದ್ದರೂ ಅವನವಳೇ ಎನ್ನೋ ಭ್ರಮೆಯಲ್ಲಿದ್ದಾನೆ. ಅವನಾಗಿಯೇ ಡೈವೋರ್ಸ್ ಕೊಟ್ಟು ಬಿಡ್ತಾನೆ ನೋಡ್ತಿರು.''

''ಅವ್ನರಿ, ಈಗ ಎಲ್ಲಿ ಹೋದರೋ?''

''ಎಲ್ಲಿ ಹೋದ್ನೋ... ಪೀಡೆ ತೊಲಗಿತು ಅಂತ ಅಂದುಕೊಳ್ತೀನಿ...''

''ಆದರೆ ಇದು ಬಲವಂತದ ಮದುವೆ ಅಲ್ಲ, ನಿನ್ನ ಒಪ್ಪಿಗೇನೂ ಇತ್ತು ಅಲ್ವಾ?''

''ಅಂದರೆ, ಏನು ನಿನ್ನ ಮಾತಿನ ಅರ್ಥ... ಗಂಡನ ಅಪ್ಪುಗೆ ಸಿಕ್ಕಿದ ಕೂಡಲೇ ನನ್ನ ವಿಷಯವನ್ನೇ ತಿರುಗಮುರುಗ ಮಾಡ್ತಿದೀಯಲ್ಲ...''

''ಹಾಗಲ್ಲ ಮಾಲಾ... ಮೊದಲು ಭಾರ್ಗವನ ಹತ್ತಿರ ಮಾತನಾಡಬೇಕು

ಅಲ್ವಾ?... ನಿನ್ನ ಮದುವೆ ಧ್ರುವನೊಂದಿಗೆ ನಡೆದು ಹೋಗಿದೆ ಅಂತ ತಿಳಿದ್ರೆ ಏನಂತಾರೋ...''

''ಏನಂತಾನೆ? ಅವನಿಗೂ ನನ್ನ ಇಕ್ಕಟ್ಟಿನ ಸ್ಥಿತಿ ಅರ್ಥವಾಗದೇ ಏನಿಲ್ಲ. ಭಾರ್ಗವ ನನ್ನು ಕರೆಸಿ, ಅವನೊಂದಿಗೆ ಮದುವೆ ಮಾಡುವ ಜವಾಬ್ದಾರಿ ನಿನ್ನದು. ಹಾಗಂತ ಮಾತು ಕೊಟ್ಟಿದೀಯ. ಅಥವಾ ಅದನ್ನೂ ಮರೆತುಬಿಡ್ತೀಯೋ...?''

''ಇಲ್ಲ ಮಾಲಾ... ನಾನು ಮರೆತಿಲ್ಲ. ಆದರೆ ನಿನಗೆ ಒಂದು ವಿಷಯವನ್ನು ಹೇಳುವುದನ್ನು ಮರೆತೆ. ನೆನ್ನೆ ನಮ್ಮ ಮದುವೆಗೆ ಭಾರ್ಗವ ಬಂದಿದ್ದರು. ಆದರೆ ಅವರು ಯಾರೊಡನೆಯೂ ಮಾತನಾಡದೇ ಹೊರಟು ಹೋಗಿದಾರೆ. ಬಹುಶಃ...''

''ಏನು ಭಾರ್ಗವ ಬಂದಿದ್ನಾ? ನೀನ್ಯಾಕೆ ಆಗಲೇ ಹೇಳಲಿಲ್ಲ?''

''ನಾನು ಅವರನ್ನು ಕಾಣಲೇ ಇಲ್ಲ. ನೀವಿಬ್ಬರೂ ಹಸೆಮಣೆಯ ಮೇಲೆ ಕುಳಿತಿದು ದನ್ನು ನೋಡಿ ಹಾಗೇ ಹೊರಟುಹೋಗಿರಬಹುದು.''

''ಅವನು ಬಂದಿದ್ದ ಅಂತ ನಿನಗೆ ಹೇಗೆ ಗೊತ್ತಾಯ್ತು?''

''ಅವರು ನನಗೆ ಅರಿಶಿನ-ಕುಂಕುಮದ ಬೆಳ್ಳಿಬಟ್ಟಲನ್ನು ಒಬ್ಬ ಹುಡುಗನ ಕೈಯಲ್ಲಿ ಕೊಟ್ಟು ಕಳಿಸಿದಾರೆ... ಅವರೇ ಅಂತ ನನಗೆ ಅನ್ನಿಸ್ತು.''

''ನನ್ನ ಭಾರ್ಗವ ನನ್ನ ಹತ್ತಿರ ಮಾತನಾಡದೇ ಹಾಗೇ ಹೋಗಲು ಸಾಧ್ಯವಿಲ್ಲ. ನೀನು ಸುಳ್ಳು ಹೇಳ್ತಿದ್ದೀಯ. ನಿನ್ನ ಮದುವೆಗೆ ಕರೆದವರು ಯಾರು?''

''ನಾನೇ... ನಾನೇ ಕರೆದಿದ್ದೆ... ಆದರೆ ಅವರು ಬರಬಹುದು ಅಂತ ನಾನು ಅಂದುಕೊಂಡಿರಲಿಲ್ಲ.''

''ನನಗ್ಯಾಕೆ ಒಂದ್ಮಾತು ಹೇಳಲಿಲ್ಲ. ನೀನು ತಪ್ಪು ಮಾಡಿದೆ.''

''ಹೌದು, ನನ್ನಿಂದ ತಪ್ಪಾಗಿದೆ. ಅದನ್ನು ನಾನೇ ಸರಿ ಮಾಡ್ತೀನಿ. ನಾನು ಮಧುಕರ ಹತ್ತಿರ ಮಾತನಾಡ್ತೀನಿ.''

''ಮಧು ಸ್ವಾರ್ಥಿ. ಅವನ ಸುಖ ಅವನಿಗೆ ಸಾಕು. ನನ್ನ ಬಗ್ಗೆ ಯಾಕೆ ಚಿಂತಿಸುತ್ತಾನೆ?''

''ವಸೂ... ವಸೂ...'' ಎಂದು ಮಧು ರೂಮಿನ ಬಳಿಗೆ ಬಂದಾಗ ವಸುಧಾ ಮಾತಿನ ವಿಷಯವನ್ನು ಬದಲಾಯಿಸಿದಳು.

''ಗುಡ್‌ಮಾರ್ನಿಂಗ್ ಮಾಲಾ... ಹೇಗಿದೀಯ?''

''ಅದೇನು ಇದ್ದಕ್ಕಿದ್ದ ಹಾಗೆ ನಿನ್ನ ತಂಗಿಯ ಮೇಲೆ ಮಮತೆ, ಪ್ರೀತಿ''

''ಸದಾ ಇದ್ದೇ ಇತ್ತು. ನಿನಗೆ ಗೊತ್ತಾಗುತ್ತಿರಲಿಲ್ಲ.. ಬಿಡು. ಧ್ರುವ ಎಲ್ಲಿ ಕಾಣ್ತಿಲ್ಲ.''

''ಎಲ್ಲೋ ಹೋಗಿರಬೇಕು. ನನಗೇನೂ ಹೇಳಲಿಲ್ಲ.''

''ಹೌದಾ? ಎಲ್ಲಿಗೆ ಹೋದ? ನನಗೂ ಹೇಳಲಿಲ್ಲವಲ್ಲ.. ಮನೆಗೆ ಫೋನು ಮಾಡಿದ್ಯಾ?''

''ಇಲ್ಲ, ನಾನೇಕೆ ಮಾಡಲಿ?''

''ಇನ್ನೂ ಹೀಗೇ ಮಾತಾಡ್ತೀಯಲ್ಲ, ನೀನು ಬದಲಾಗುವುದು ಯಾವಾಗ?''

''ನಾನೇಕೆ ಬದಲಾಗಬೇಕು. ನನಗೆ ಅದರಅಗತ್ಯವಿಲ್ಲ.''

''ಈಗ ನಿನ್ನ ಸಪೋರ್ಟ್‌ಗೆ ಭಟ್ಟರಾಗಲೀ, ಭಾರ್ಗವನಾಗಲೀ ಇಲ್ಲ.''

''ಅವರಿಬ್ಬರನ್ನು ನನ್ನಿಂದ ದೂರ ಮಾಡಿದವನು ನೀನೇ''

''ಬಿಡಿ... ಈಗ ಆ ಮಾತೇಕೆ. ಮಾಲಾ ಎದ್ದು ಬಾ, ಲೌಂಜ್‌ನಲ್ಲಿ ಕೂತು ಕಾಫಿ ಕುಡಿಯೋಣ.''

''ನನಗೆ ಮನೆಗೆ ಹೋಗೋಣ ಅಂತ ಅನ್ನಿಸ್ತಿದೆ.''

''ಇಲ್ಲಿ ಮೂರು ದಿನಕ್ಕೆ ರಿಸರ್ವ್ ಮಾಡಿಸಿದೀನಿ. ಮನೆ ಎಲ್ಲಿಯೂ ಓಡಿ ಹೋಗಲ್ಲ. ಅದ್ಯಾಕೆ ಹಾಗಾಡ್ತೀಯ...''

''ನೀವಿಬ್ರೂ ಬೇಕಾದ್ರೆ ಮೂರು ದಿನವಲ್ಲ, ಮೂರು ವಾರ ಇದ್ದು ಬನ್ನಿ. ನನಗ್ಯಾಕೋ ಇಲ್ಲಿಯ ಅಟ್ಮಾಸ್ಫಿಯರ್ ಹಿಡಿಸ್ತಾ ಇಲ್ಲ.''

''ನಾವು ಮಾಲಾನ್ನ ಮನೇಗೆ ಬಿಟ್ಟುಬರೋಣ. ಅವಳ ಮನಸ್ಸಿಗೆ ಬೇಜಾರು ಮಾಡುವುದು ಬೇಡ.''

''ಸರಿ, ನಿನ್ನಿಷ್ಟ.'' ಕಾಫಿ ಕುಡಿದ ನಂತರ, ಮೂರು ಜನವೂ ಮನೆಗೆ ಬಂದರು. ಧ್ರುವ ಅಲ್ಲಿಗೂ ಬಂದಿಲ್ಲವೆಂದು ತಿಳಿಯಿತು. ಸುಮಿತ್ರಾದೇವಿ ಆತಂಕಗೊಂಡು ಮಾಲಾಳನ್ನೇ ದೂಷಿಸಿದರು.

''ನೆನ್ನೆ ರಾತ್ರಿ ನಿಮ್ಮಿಬ್ಬರ ಮಧ್ಯೆ ಏನು ಮಾತು ನಡೆಯಿತು ಹೇಳು. ಅವನು ಬೇಸರಗೊಂಡು ಹೋಗಿರಬೇಕು.''

''ಬೇಸರವಾಗುವಂಥಾದ್ದು ಏನೂ ನಡೆದಿಲ್ಲ, ನನಗೆ ಒಂದು ಮಾತೂ ಹೇಳದೇ ಎಲ್ಲಿ ಹೋದರೋ... ಬೇಸರವಾಗಿರುವುದು ನಮಗೆ.''

''ಮಧು, ಎಲ್ಲಿ ಏನು ಅಪಾಯವಾಯಿತೋ, ಪೋಲಿಸ್ ಕಂಪ್ಲೇಂಟ್ ಕೊಡು...'' ಆಕೆ ಗಾಬರಿಯಾಗಿದ್ದಳು.

''ನೀವು ಗಾಬರಿಯಾಗಬೇಡಿ. ಈ ಮುಂಚೆ ಎಂದಾದ್ರೂ ಹೀಗೆ ಯಾರಿಗೂ ಹೇಳದೇ ಮನೆ ಬಿಟ್ಟು ಹೋಗಿದ್ನಾ?''

''ಅವನಿಗೆ ತುಂಬಾ ಬೇಸರವಾದರೆ ಹೀಗೆ ಮಾಡ್ತಾನೆ. ಒಂದೆರಡು ಗಂಟೆಯೊಳಗೆ ವಾಪಸ್ಸು ಬಂದುಬಿಡ್ತಾನೆ. ಆದರೆ ಅವನು ಯಾವಾಗ ಹೋದ ಅಂತ ಗೊತ್ತಿಲ್ಲ ಅಂತಾಳಲ್ಲ.''

''ಮದುವೆಯಾದ ಹೆಂಡತಿಯನ್ನು ಹೇಳದೇ ಕೇಳದೇ ಬಿಟ್ಟು ಹೋಗುವಂತಹ ಪ್ರಮೇಯ ಏನು ಬಂದಿರುತ್ತೆ. ಮಾಲಾ ತುಂಬಾ ಅಪ್ಸೆಟ್ ಆಗಿದ್ದಳು. ನಾನು ಸಾಕಷ್ಟು ಸಮಾಧಾನ ಹೇಳಿ ಕರೆದುಕೊಂಡು ಬಂದಿದೀನಿ. ಮಾಲಾ ನೀನು ರೆಸ್ಟ್ ತಗೋ. ನಾನು ಆಮೇಲೆ ಫೋನ್ ಮಾಡ್ತೀನಿ... ಬನ್ರೀ ಹೋಗೋಣ'' ಅಂತ ವಸು ಹೊರಟಾಗ ಮಾಲಾ ಅವಳ ಕೈ ಹಿಡಿದಳು.

''ಪ್ಲೀಸ್ ವಸುಧಾ, ನನ್ನನ್ನು ಒಬ್ಬಳನ್ನೇ ಬಿಟ್ಟು ಹೋಗಬೇಡ''

''ನಾನು ಗೆಸ್ಟ್‌ಹೌಸಿಗೆ ಫೋನು ಮಾಡಿ ಕೇಳ್ತೀನಿ'' ಎನ್ನುತ್ತಾ ಮಧು ವಿಚಾರಿಸಿದ. ಅಲ್ಲಿಗೂ ಯಾರೂ ಬಂದಿಲ್ಲವೆಂದು ತಿಳಿಯಿತು. ಸುಮಿತ್ರಾದೇವಿ ಅಳುತ್ತಾ ಕೂತಳು. ''ನನ್ನ ಮಗನಿಗೆ ಏನೋ ಅಪಾಯವಾಗಿದೆ'' ಅಂತ. ವಸುಧಾಗೆ ಆಕೆಯನ್ನು ಸಮಾಧಾನ ಮಾಡುವುದೇ ಕಷ್ಟವೆನಿಸಿತ್ತು. ಮಾಲಾ ಹಾಯಾಗಿ ಕುಳಿತಿದ್ದಳು.

ಅಷ್ಟರಲ್ಲಿ ಫೋನು ರಿಂಗಾಯಿತು. ವಸುಧಾ ಎತ್ತಿಕೊಂಡಳು. ಅತ್ತಲಿಂದ ಭಾರ್ಗವ ಫೋನು ಮಾಡಿದ್ದ. ''ಧ್ರುವನಿಗೆ ಆಕ್ಸಿಡೆಂಟ್ ಆಗಿದೆ. ಕ್ಷೇಮ ನರ್ಸಿಂಗ್‌ಹೋಂನಲ್ಲಿದಾನೆ...'' ಅಂತ.

''ಏನಾಯ್ತು? ಈಗ ಹೇಗಿದಾರೆ'' ಅಂತ ಕೇಳಿದಾಗ ಉತ್ತರಿಸದೇ ಲೈನ್ ಕಟ್ ಮಾಡಿದ್ದ. ಎಲ್ಲರೂ ನರ್ಸಿಂಗ್ ಹೋಂಗೆ ಧಾವಿಸಿದರು. ಭಾರ್ಗವನನ್ನು ಕಂಡ ಕೂಡಲೇ ಮಾಲಾ ಪರವಶಳಾದವಳಂತೆ ಓಡಿ ಹೋಗಿ ಅವನನ್ನು ತಬ್ಬಿ ಕೊಂಡಳು. ವಸುಧಾ ಅವಳ ಹಿಂದೆ ಓಡಿದಳು. ಭಾರ್ಗವ ಅವಳನ್ನು ಸರಿಸಿದ.

''ಪ್ಲೀಸ್... ಮಾಲಾ...''

''ಭಾರ್ಗವ ನನ್ನನ್ನು ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗು... ನಾನು ಇಲ್ಲಿ ಇವರುಗಳ ಜೊತೆಯಲ್ಲಿ ಇರಲಾರೆ.''

''ಅದು ಸಾಧ್ಯವಿಲ್ಲ, ಈಗ ನೀನು ಧ್ರುವನ ಪತ್ನಿ...''

''ನಿನಗೆ ನನ್ನ ಮೇಲೆ ಕೋಪಾನ ? ನಾನು ಡೈವೋರ್ಸ್ ತೆಗೆದುಕೊಳ್ತೀನಿ''

''ಡೈವೋರ್ಸಿ ನನ್ನ ಪತ್ನಿಯಾಗುವುದು ನನಗೆ ಬೇಕಿಲ್ಲ...'' ಎಂದ ಅವಳ ಕಡೆಗೆ ನೋಡದೇ.

''ಆಂ ಏನಂದೆ?... ನಾನು ಇದನ್ನೆಲ್ಲ ಮಾಡಿದ್ದು ನಿನಗಾಗಿ... ಭಾರ್ಗವ''

''ಹೀಗೆ ಮಾಡು ಅಂತ ನಾನು ನಿನ್ನನ್ನು ಕೇಳಿಕೊಂಡಿರಲಿಲ್ಲ, ನನಗೆ ಯಾರ ಹಂಗೂ ಬೇಡ.''

''ನೀನು ಹೀಗೆಲ್ಲಾ ಆಡಿದರೆ ನಾನು ಬದುಕುವುದಿಲ್ಲ...''

''ನನಗೆ ಹಾಗೇ ಅನ್ನಿಸಿತ್ತು, ಆದರೆ ಈಗ ನಾನು ನನಗಾಗಿ ಬದುಕುತ್ತೇನೆ. ಹಾಗೇ

ನೀನೂ ನಿನಗಾಗಿ ಬದುಕುವುದನ್ನು ಕಲಿ. ಆತ್ಮಹತ್ಯೆ ಮಾಡಿಕೊಂಡರೆ ಹೇಡಿ ಅಂತ ನಗ್ತಾರೆ.''

''ನಿನಗೆ ಕೃತಜ್ಞತೆಯೇ ಇಲ್ಲವಾ?...''

''ಕೃತಜ್ಞತೆ? ಯಾರ್‍ಯಾರ ಮೇಲೆ ಕೃತಜ್ಞತೆಯನ್ನು ತೋರಿಸಲಿ? ನೀನು, ಧ್ರುವ, ಮಧು ಎಲ್ಲರೂ ನನಗೆ ಸಹಾಯ ಮಾಡಿದೀರಿ... ನಾನ್ಯಾರು, ನನ್ನ ಅಂತಸ್ತೇನು ಅಂತ ತೋರಿಸಿಕೊಟ್ಟಿದೀರಿ...'' ವ್ಯಂಗ್ಯದ ಮಾತುಗಳನ್ನಾಡಿದ.

''ನೀನೂ ಇಷ್ಟು ಸ್ವಾರ್ಥಿ ಅಂತ ನಾನು ತಿಳಿದಿರಲಿಲ್ಲ.''

''ನಾನ್ಯಾಕೆ ಸ್ವಾರ್ಥಿಯಾಗಬಾರದು? ಜೀವನ ಹಾಗೆ ಪಾಠ ಕಲಿಸಿತು... ಈಗ ನಾನು ಜಾಣನಾಗಿದೀನಿ... ಇನ್ನು ಮುಂದೆ ನನ್ನ ದಾರಿ ನನಗೆ, ನಿನ್ನ ದಾರಿ ನಿನಗೆ...''

''ಇಲ್ಲ ಭಾರ್ಗವ... ಹೀಗೆ ಹೇಳಬೇಡ'' ಮಾಲಾ ಅಳತೊಡಗಿದಳು. ಭಾರ್ಗವ ಅಲ್ಲಿಂದ ಸರಿದುಹೋದ. ವಸುಧಾ ಅವನ ಹಿಂದೆ ನಡೆದಳು.

''ಇದೆಲ್ಲಾ ಏನು ಭಾರ್ಗವ? ಧ್ರುವ ನಿಮಗೆಲ್ಲಿ ಸಿಕ್ಕಿದ?''

''ಅವನು ನಮ್ಮ ಮನೆಗೆ ಬಂದಿದ್ದ. ಮಾಲಾ ಅವನನ್ನು ದೂರವಿಟ್ಟಿರುವುದಕ್ಕೆ ನಾನೇ ಕಾರಣ ಅಂತ ಆರೋಪವನ್ನು ಹೊರಿಸಿದ. ಅವಳಿಗೆ ಬುದ್ಧಿ ಹೇಳಬೇಕೆಂದು ಕೇಳಿಕೊಂಡ. ನಾನು ಹೇಳದಿದ್ದರೆ, ಅವಳ ಜೀವನವನ್ನು ನರಕ ಮಾಡಿಬಿಡುತ್ತೇನೆಂದು ಹೆದರಿಸಿದ. ತಾನು ಆತ್ಮಹತ್ಯೆ ಮಾಡಿಕೊಂಡು ನನ್ನ ಮೇಲೆ ಕೊಲೆಯ ಆರೋಪ ಹೊರಿಸುವುದಾಗಿ ಬೆದರಿಕೆ ಹಾಕಿದ. ಇದಕ್ಕೆಲ್ಲಾ ಕೊನೆ ಎಂದು? ನಾನು ಆ ದಿನವೇ ನಿಮಗೆ, 'ನನಗೂ ಮಾಲಾಳಿಗೂ ಇನ್ನು ಮುಂದೆ ಯಾವ ಸಂಬಂಧ ಇಲ್ಲ' ಅಂತ ತಿಳಿಸಿದ್ದೆ. ನೀವು ಮಾಲಾಳಿಗೆ ಹೇಳಿಬಿಟ್ಟಿದ್ದರೆ ಚೆನ್ನಾಗಿತ್ತು.''

''ನನಗೆ ಹೇಳಲಾಗಲಿಲ್ಲ. ನಿಮ್ಮಿಬ್ಬರನ್ನು ಒಂದುಗೂಡಿಸುವುದಾಗಿ ಅವಳಿಗೆ ಮಾತು ಕೊಟ್ಟಿದ್ದೆ.''

''ಮಾಲಾ ನನ್ನ ಅದೃಷ್ಟದಲ್ಲಿ ಇಲ್ಲ ಎನ್ನುವ ಸತ್ಯವನ್ನು ನಾನು ಅರಿತು ಕೊಂಡಿದೀನಿ... ಒಂದು ಹೆಣ್ಣಿಗಾಗಿ ಕೋಲಾಹಲವನ್ನು ಎಬ್ಬಿಸುವ ಪ್ರವೃತ್ತಿಯವನಲ್ಲ ನಾನು. ಇದರಿಂದ ನಾನು ಬೆಳೆದ ಮನೆಗೆ ಯಾವ ಗೌರವ, ಮರ್ಯಾದೆ ಉಳಿಯುವು ದಿಲ್ಲ. ನಾನು ಹೇಡಿಯಲ್ಲ. ಆದರೆ ಮರ್ಯಾದೆಗೆ ಹೆದರಿ, ಹಿಂದೆ ಸರಿಯುತ್ತಿದ್ದೇನೆ.''

ಅವರಿಬ್ಬರಿಗೆ ಸಮೀಪದಲ್ಲಿ ನಿಂತು ಅವರಿಬ್ಬರ ಸಂಭಾಷಣೆಗಳನ್ನು ಕೇಳಿಸಿಕೊಂಡ ಮಾಲಾ ಓಡಿಬಂದು ಅವನ ಕೆನ್ನೆಗೆ ಹೊಡೆದಳು.

''ಇದು ಮರ್ಯಾದೆಯ ಮಾತಂತೂ ಅಲ್ಲ. ಸ್ವಾರ್ಥಿಯಾಗಿದೀಯ ನೀನು''

''ಮಾಲಾ ಸುಮ್ಮನಿರು... ಭಾರ್ಗವನದು ಏನೂ ತಪ್ಪಿ '' ವಸುಧಾ ಸಮಾಧಾನಿಸಲು ಪ್ರಯತ್ನಿಸಿದಳು.

''ನೀನು ಸುಮ್ಮನಿರು. ನೀವಿಬ್ಬರೂ ಸೇರಿ ಚೆನ್ನಾಗಿ ನಾಟಕವನ್ನು ಆಡಿದೀರಿ. ನೀವೆಲ್ಲರೂ ದ್ರೋಹಿಗಳು, ಮೋಸಗಾರರು, ಸ್ವಾರ್ಥಿಗಳು. ನಾನು ಸುಮ್ಮನೇ ಬಿಡುವುದಿಲ್ಲ. ನಿಮ್ಮೆಲ್ಲರಿಗೂ ಬುದ್ಧಿ ಕಲಿಸ್ತೀನಿ... ಖಂಡಿತಾ ಬುದ್ಧಿ ಕಲಿಸ್ತೀನಿ'' ಮಾಲಾ ಅಲ್ಲಿಂದ ಹಿಂದಕ್ಕೆ ಸರಿದಳು. ವಸುಧಾ ಅವಳ ಹಿಂದೆ ಹಿಂದೆ ನಡೆದಳು. ಭಾರ್ಗವ ಕಣ್ಣುಗಳನ್ನು ಒರೆಸಿಕೊಂಡು ದೂರ ಹೋಗಿ ನಿಂತ. ತನ್ನ ಕರ್ತವ್ಯವನ್ನು ಮಾಡಿದ್ದಾಗಿದೆ. ಧ್ರುವನನ್ನು ನೋಡಿಕೊಳ್ಳಲು ಅವರುಗಳಿದ್ದಾರೆ. ಇಲ್ಲಿ ನನಗೇನು ಕೆಲಸ ಎಂದುಕೊಂಡು ಎರಡು ಹೆಜ್ಜೆ ಮುಂದೆ ಇಟ್ಟವನನ್ನು ಮಧು ಹಿಂದಿನಿಂದ ಕರೆದು ನಿಲ್ಲಿಸಿದ.

''ಭಾರ್ಗವ, ನನ್ನನ್ನು ಕ್ಷಮಿಸಿಬಿಡು. ವಸು ಎಲ್ಲಾ ಹೇಳಿದಳು. ನಿನ್ನಿಂದ ಧ್ರುವನ ಪ್ರಾಣ ಉಳಿಯಿತು. ನಿನಗೆ ಥ್ಯಾಂಕ್ಸ್'' ಭಾರ್ಗವ ಮಾತಾಡಲಿಲ್ಲ.

''ನಿನ್ನಿಂದ ನಮ್ಮ ಮನೆತನದ ಮರ್ಯಾದೆ ಉಳಿಯಿತು. ನಿನ್ನನ್ನು ನಾನು ತಪ್ಪಾಗಿ ತಿಳಿದುಕೊಂಡಿದ್ದೆ. ಐ ಆಮ್ ವೆರಿ ಸಾರಿ...''

''ಈ ಸಾರಿ, ಈ ಥ್ಯಾಂಕ್ಸ್‌ನಿಂದ ಹಿಂದೆ ನಡೆದ ಅನಾಹುತಗಳೆಲ್ಲ ಸರಿಹೋಗುವುದಿಲ್ಲ. ನಾನೇನೋ ಹೊರಗಿನವನು. ಆದರೆ ಮಾಲಾ ನಿನ್ನ ಒಡಹುಟ್ಟಿದ ತಂಗಿ. ಅವಳಿಗೆ ಅನ್ಯಾಯ ಮಾಡಬೇಡ. ಅವಳ ಪಾಲಿಗೆ ಬಂದಿರುವ ಮನೆಯನ್ನು ಅವಳಿಗೇ ಕೊಟ್ಟುಬಿಡು. ಅದು ಅವಳಿಗೆ ತವರುಮನೆಯ ಕಾಣಿಕೆ.''

ಮಧುಗೆ ಆ ಮಾತು ಇಷ್ಟವಾಗಲಿಲ್ಲ. ''ನಿನ್ನ ಸಲಹೆಗೆ ಥ್ಯಾಂಕ್ಸ್... ನನಗೆ ಸಾಕಷ್ಟು ಕಂಪೆನಿಯಲ್ಲಿ ಇನ್‌ಫ್ಲೂಯೆನ್ಸ್ ಇದೆ. ನಿನಗೆ ಕೆಲಸ ಕೊಡಿಸ್ತೀನಿ. ನೀನು ನಮಗೆ ಮಾಡಿರುವ ಉಪಕಾರಕ್ಕೆ. ಅಷ್ಟಾದರೂ ಮಾಡದಿದ್ದರೆ ಹೇಗೆ?''

''ಏನೂ ಬೇಡ. ನನ್ನ ಅನ್ನವನ್ನು ನಾನೇ ಸಂಪಾದಿಸಿಕೊಳ್ಳುವ ಯೋಗ್ಯತೆ ನನಗಿದೆ. ನನಗೆ ಯಾರ ಮುಲಾಜೂ ಬೇಡ...''

''ಹಾಗೆನ್ನಬೇಡ. ನಿನಗೆ ಯಾವ ಸಹಾಯ ಬೇಕೋ ಕೇಳು. ಆದಷ್ಟು ಬೇಗ ಮದುವೆಯನ್ನು ಮಾಡ್ಕೋ. ನಾನೇ ನಿಂತು ಮದುವೆ ನಡೆಸಿಕೊಡ್ತೀನಿ.''

''ನನಗೆ ಮದುವೆ? ಈ ಜನ್ಮದಲ್ಲಿ ನಾನು ಮದುವೆಯಾಗಲಾರೆ. ಬ್ರಹ್ಮಚಾರಿಯಾಗಿಯೇ ಇರ್ತೀನಿ. ಇದರಿಂದ ಮಾಲಾಳ ಮನಸ್ಸಿಗೆ ಸ್ವಲ್ಪವಾದರೂ ನೆಮ್ಮದಿ ಸಿಗಬಹುದು. ನನಗೆ ಅಷ್ಟೇ ಸಾಕು...'' ಭಾರ್ಗವ ಅಲ್ಲಿಂದ ಸರಿದಿದ್ದ. ಮಧು ಭಾವುಕನಾಗಿದ್ದ.

ಭಾರ್ಗವ ಬಾಡಿಗೆಗೆ ಇದ್ದ ರೂಮನ್ನು ಹುಡುಕಿ, ಅವನೊಡನೆ ಮಾತನಾಡಿ, ಹೊರಬಿದ್ದ ಧ್ರುವ ಆ ರಸ್ತೆಯ ಮೂಲೆಯಲ್ಲಿ ಅಪಾಘಾತಕ್ಕೆ ಈಡಾಗಿದ್ದ. ಯಾರೋ ಬಂದು ತಿಳಿಸಿದ ಕೂಡಲೇ ಭಾರ್ಗವ ತನ್ನ ಕರ್ತವ್ಯವನ್ನು ಮಾಡಿದ್ದ. ಜ್ಞಾನವಿಲ್ಲದೆ ಬಿದ್ದಿದ್ದ ಧ್ರುವನನ್ನು ಸಮೀಪದ ಆಸ್ಪತ್ರೆಗೆ ಸೇರಿಸಿ ವಸುಧಾಳಿಗೆ ಫೋನು ಮಾಡಿದ್ದ. ಈ ವಿಷಯ

ತಿಳಿದ ಮಧು ಧ್ರುವನ ಮೇಲೆ ಸಿಟ್ಟಾಗಿದ್ದ. ಇದಕ್ಕೆಲ್ಲಾ ಮಾಲಾಳೇ ಕಾರಣ ಎಂದು ಅವಳ ಮೇಲೂ ಕೋಪಗೊಂಡಿದ್ದ. ಆದರೆ ವಸುಧಾ ಉಳಿದ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿ, ಭಾರ್ಗವನ ಹಿರಿಮೆಯನ್ನು ಹೊಗಳಿದ್ದಳು. ನಿಮ್ಮ ನಿಮ್ಮ ದ್ವೇಷ ಏನೇ ಇರಲಿ, ಈಗ ಅದನ್ನೆಲ್ಲ ಮರೆತುಬಿಡಿ. ನಿಮ್ಮ ಮನೆಯಲ್ಲಿ ಬೆಳೆದ ಭಾರ್ಗವ ನಿಮ್ಮವರೇ... ನಿಮ್ಮ ಸಮಯಕ್ಕೆ ನಿಮ್ಮವರೇ ಆಗಿಬರುವವರು. ಧ್ರುವನನ್ನು ಆಸ್ಪತ್ರೆಗೆ ಸೇರಿಸಿ ನಿಮಗೆ ಉಪಕಾರ ಮಾಡಿರುವವರಿಗೆ ಒಂದು ಕೃತಜ್ಞತೆಯನ್ನೂ ಹೇಳದಿದ್ದರೆ, ನೀವು ನಿಮಗೆ ನೀವೇ ಮೋಸ ಮಾಡಿಕೊಂಡಂತೆ ಎಂದು ಉಪದೇಶ ಹೇಳಿ, ಅವನನ್ನು ಭಾರ್ಗವ ಇದ್ದಲ್ಲಿಗೆ ಕಳಿಸಿದ್ದಳು. ಇನ್ನು ತನ್ನ ಕರ್ತವ್ಯ ಮುಗಿಯಿತು ಎಂಬಂತೆ ಭಾರ್ಗವ ಅಲ್ಲಿಂದ ಸರಿದಾಗ ಮಧುಕರನಿಗೆ ನಿರಾಳವೆನಿಸಿತ್ತು. ಭಾರ್ಗವ ಮಾತಿಗೆ ತಪ್ಪುವವನಲ್ಲ. ಇನ್ನು ಮಾಲಾಳ ಬಾಳಿನಲ್ಲಿ ಪ್ರವೇಶ ಮಾಡಲಾರ. ಒಂದು ಅಧ್ಯಾಯ ಮುಗಿಯಿತು ಎಂದು ನೆಮ್ಮದಿಗೊಂಡ.

ಧ್ರುವ ಪೂರ್ಣ ಗುಣಮುಖನಾಗಿ ಡಿಸ್ಚಾರ್ಜ್ ಆಗಿ ಮನೆಗೆ ಬರಲು ಐದಾರು ವಾರಗಳೇ ಹಿಡಿದವು. ಬೆನ್ನಿನ ಮೂಳೆ ಫ್ರಾಕ್ಚರ್ ಆಗಿತ್ತು. ಸ್ವಲ್ಪ ಎದ್ದು ನಡೆಯುವಂತೆ ಆಗುವವರೆಗೂ ಅವನು ನರ್ಸಿಂಗ್ ಹೋಂನಲ್ಲಿರುವುದೇ ಸರಿ ಎಂದು ಡಾಕ್ಟರುಗಳು ಅಭಿಪ್ರಾಯಪಟ್ಟಿದ್ದರು.

ಇದಕ್ಕೆಲ್ಲ ಮಾಲಾಳೇ ಕಾರಣ ಎಂಬಂತೆ ಸುಮಿತ್ರಾದೇವಿ ಅಸಮಾಧಾನ ಗೊಂಡಿದ್ದಳು. ಪ್ರತಾಪ ಧ್ರುವನ ಜೊತೆಗೇ ಇದ್ದುಕೊಂಡು ಅವನ ಯೋಗಕ್ಷೇಮಗಳನ್ನು ಚೆನ್ನಾಗಿ ನೋಡಿಕೊಂಡ.

''ನೀನೂ ಇಲ್ಲದೇ ಇದ್ದಿದ್ದರೆ ಈ ಹೊಸಜಾಗದಲ್ಲಿ ನಾವು ಏನು ಮಾಡುತ್ತಿದ್ದೆವು. ನೀನು ನನ್ನ ಮಗನಿಗಿಂತ ಹೆಚ್ಚು'' ಎಂದು ಸುಮಿತ್ರಾದೇವಿ ಪ್ರತಾಪನನ್ನು ಹೊಗಳಿ ಅಟ್ಟಕ್ಕೇರಿಸಿದ್ದಳು.

ಮಾಲಾ ಎಲ್ಲರ ಬಲವಂತಕ್ಕೆ ಒಮ್ಮೆ ಹೋಗಿ ಧ್ರುವನನ್ನು ನೋಡಿ ಮಾತನಾಡಿಸಿ ಕೊಂಡು ಬಂದಿದ್ದಳು. ಅವನು ಕೇಳಿದ್ದಕ್ಕೆ ಮಾತ್ರ ಉತ್ತರಿಸಿದ್ದಳು. ಧ್ರುವ ಮೆತ್ತಗಾಗಿ ಹೋಗಿದ್ದ. ಮುಖದಲ್ಲಿ ಯಾವುದೋ ಹೆದರಿಕೆಯ ಕಳೆ ಮನೆಮಾಡಿತ್ತು.

''ಧ್ರುವನಿಗೆ ಭಯ. ತಾನು ಹಿಂದಿನಂತೆ ಓಡಾಡಲು ಆಗುತ್ತೋ ಇಲ್ಲವೋ ಅಂತ'' ವಸುಧಾಳೊಡನೆ ಮಧು ಹೇಳಿದ್ದನ್ನು ಕೇಳಿಸಿಕೊಂಡಿದ್ದಳು. ಇನ್ನು ಇವನು ಮುಂದೆ ಹೇಗಿದ್ದರೆ ನನಗೇನು ಎನ್ನುವಂತೆ ಉದಾಸೀನದಿಂದ ಇದ್ದಳು. ಆದರೆ, ಪ್ರತಾಪನ ಸಹಾಯ, ಸಹಕಾರದಿಂದ ಧ್ರುವ ಬಹಳ ಬೇಗ ಚೇತರಿಸಿಕೊಂಡ.

''ಇನ್ನು ನಾವು ಇಲ್ಲಿರುವುದು ಬೇಡ. ನಮ್ಮೂರಿಗೆ ಹೊರಟು ಹೋಗೋಣ'' ಸುಮಿತ್ರಾದೇವಿ ಒತ್ತಾಯ ಮಾಡುತ್ತಿದ್ದಳು.

''ಇನ್ನೊಂದು ವಾರ ಕಳೆದ ನಂತರ, ಹೋಗಬಹುದು ಅಂತ ಡಾಕ್ಟರು ಹೇಳಿದಾರೆ. ಅಲ್ಲಿಯವರೆಗೆ ಇಲ್ಲಿರಲೇ ಬೇಕು'' ಪ್ರತಾಪ ನುಡಿದಿದ್ದ.

ಈಗ ಮನೆ ತುಂಬಾ ಜನ. ಪ್ರತಾಪ, ಧ್ರುವ ಒಂದು ರೂಮಿನಲ್ಲಿ ಮಲಗುತ್ತಿದ್ದರು. ಮಾಲಾ ಒಂಟಿಯಾಗಿಯೇ ಮಲಗುತ್ತಿದ್ದಳು. ಮಧುಗೆ ಒಮ್ಮೊಮ್ಮೆ ಬೇಸರವೂ ಆಗುತ್ತಿತ್ತು. ಮನೆಯ ಜವಾಬ್ದಾರಿಗಳನ್ನೆಲ್ಲಾ ವಸುಧಾ ವಹಿಸಿಕೊಂಡಿದ್ದರೂ, ಮಧು ಈಗ ಪೂರ್ಣ ಯಜಮಾನನಾಗಿದ್ದ. ಆಫೀಸಿನ ವ್ಯವಹಾರವೆಲ್ಲಾ ಈಗ ಅವನದೇ. ಒಮ್ಮೊಮ್ಮೆ ಪ್ರತಾಪನೂ ಬರುತ್ತಿದ್ದ.

ಇದನ್ನೆಲ್ಲ ಗಮನಿಸಿ, ವಸುಧಾ ಮಾಲಾಳಿಗೆ ಉತ್ತಮ ಸಲಹೆಯನ್ನಿತ್ತಳು.

''ಮನೆಯಲ್ಲಿ ಸುಮ್ಮನೇ ಕಾಲ ಕಳೆಯುವ ಬದಲು, ನಿನ್ನಣ್ಣನ ಜೊತೆಯಲ್ಲಿ ಆಫೀಸಿಗೆ ಹೋಗಿ ಬಿಸಿನೆಸ್ ವ್ಯವಹಾರಗಳನ್ನು ನೋಡ್ಕೋ. ನಿನಗೇ ಅನುಕೂಲವಾಗುತ್ತದೆ'' ಎಂದು ಹುರಿದುಂಬಿಸಿದ್ದಳು.

ಒಂದೆರಡು ದಿನಗಳು ಸುಮ್ಮನಿದ್ದು ನಂತರ ಮಧು ತರಲೆ ತೆಗೆದ.

''ನಿನಗೆ ಯಾವ ಕೆಲಸವೂ ಗೊತ್ತಿಲ್ಲ, ಬಂದು ಏನ್ಮಾಡ್ತೀಯ? ಹೇಗೂ ನೀನು ಸದಾಕಾಲಕ್ಕೂ ಇಲ್ಲಿ ಇರುವವಳಲ್ಲ. ಧ್ರುವನ್ನ ನೋಡ್ಕೋ ಅಷ್ಟೇ ಸಾಕು.''

''ಧ್ರುವನ್ನ ನೋಡ್ಕೊಳ್ಳೋಕೆ, ಹುಡುಗ ಇದಾನೆ. ಅವನ ಫ್ರೆಂಡ್ ಪ್ರತಾಪ ಇದಾನೆ. ಅಲ್ಲದೇ ನಾನು ಈ ಮನೆಯನ್ನು ಬಿಟ್ಟು ಎಲ್ಲಿಗೂ ಹೋಗುವವಳಲ್ಲ. ನಾನು ಆಫೀಸಿಗೆ ಬಂದೇ ಬರ್ತೀನಿ. ತಡೆಯೋಕೆ ನಿನಗೆ ಹಕ್ಕು ಇಲ್ಲ.''

''ನೀನಂತೂ ಈ ಜನ್ಮದಲ್ಲಿ ಬದಲಾಗಲ್ಲ. ನಿನ್ನ ಗಂಡನ ಮನೆಗೆ ಹೋಗದೇ ಇಲ್ಲೇ ಇರೋಕೆ ಆಗುತ್ತಾ?''

''ಈ ಮನೆ ನನ್ನದು. ನಾನು ಇಲ್ಲೇ ಇರುವವಳು. ನಿನಗೆ ನನ್ನ ಜೊತೆ ಇರೋಕೆ ಇಷ್ಟವಿಲ್ಲದಿದ್ದರೆ, ನೀನೇ ಬೇರೆ ಹೋಗಬಹುದು.''

ಮಧು ಬೆಚ್ಚಿದ. ಈ ಮನೆ ಅವಳ ಹೆಸರಿನಲ್ಲಿಲ್ಲ ಅಂತ ತಿಳಿದರೆ ರಂಪರಾದ್ಧಾಂತ ಮಾಡದೇ ಬಿಡುವವಳಲ್ಲ ಅಂತಂದುಕೊಂಡು ಸುಮ್ಮನಾದ.

''ಸರಿ, ನಮ್ಮ ಆಫೀಸಿನಲ್ಲಿ ನಿನಗೋಸ್ಕರ ಒಂದು ಪೋಸ್ಟಿಂಗ್ ಕ್ರಿಯೇಟ್ ಮಾಡಬೇಕಾಗುತ್ತದೆ. ಭಾರ್ಗವನ ಜಾಗಕ್ಕೆ ಒಬ್ಬರನ್ನು ನೇಮಿಸಿಕೊಂಡಿದೀವಿ. ಅವನ ಹೆಸರು ಭಾಸ್ಕರ ಅಂತ. ನೀನು ಅವನ ಗೈಡೆನ್ಸ್‌ಗಳಲ್ಲಿ ಆಫೀಸಿನ ಆಡಳಿತಕ್ಕೆ ಸಂಬಂಧಿಸಿದ ಕೆಲವು ವ್ಯವಹಾರಗಳನ್ನು ನೋಡ್ಕೋ. ನಾನು ಅವನ ಹತ್ತಿರ ಮಾತನಾಡ್ತೀನಿ.''

ಮಾಲಾ ಒಪ್ಪಿದಳು. ಅವಳಿಗೆ ಮನೆಯಲ್ಲೇ ಕೂತು ಸುಮಿತ್ರಾದೇವಿಯ ಗೊಣಗಾಟ, ಧ್ರುವನ ಅಸಹಾಯಕತೆ ಎಲ್ಲಾ ಬೇಸರವನ್ನುಂಟು ಮಾಡಿತ್ತು. ಪ್ರತಾಪನ ಓಡಾಟ ಮುಜುಗರವನ್ನುಂಟು ಮಾಡುತ್ತಿತ್ತು. ವಸುಧಾಳಂತೆ ಮನೆಗೆಲಸವನ್ನು ಮಾಡಲು ಕಲಿತಿರಲಿಲ್ಲ. ಮನೆಯಿಂದ ಹೊರಗೆ ಇರುವುದೇ ಸರಿ ಎನಿಸಿತ್ತು...

ವಸುಧಾಳನ್ನು ತಬ್ಬಿಕೊಂಡು ಮುದ್ದಾಡಿದಳು. ''ನನ್ನ ತಲೆಯೇ ಓಡುತ್ತಿರಲಿಲ್ಲ.

ಹಾಗೆ ಡಲ್ ಆಗಿಬಿಟ್ಟಿದ್ದೆ. ನಿನ್ನ ಸಲಹೆಯಿಂದ ನಾನು ಇಂಡಿಪೆಂಡೆಂಟಾಗಿ ಯಾರ ಹಂಗೂ ಇಲ್ಲದೇ ಇರುವಂತಾದರೆ ಅಷ್ಟು ಸಾಕು...''

''ನೀನು ಸದಾ ನಗುನಗುತ್ತಾ ಇರಬೇಕೆನ್ನುವುದೇ ನನ್ನ ಆಸೆ. ನಿನಗೆ ಹೇಗೆ ಬೇಕೋ ಹಾಗೇ ಇರು. ಆದರೆ ನನ್ನನ್ನು ಮಾತ್ರ ಮರೆಯಬೇಡ.''

''ನಿನ್ನನ್ನೂ ಮರೆತುಬಿಟ್ಟರೆ, ಈ ಮನೆಯಲ್ಲಿ ನಾನು ಹೇಗಿರಲಿ?'' ಮಾಲಾ ಪಟಪಟನೆ ಕಣ್ಣೀರನ್ನು ಉದುರಿಸಿದಳು.

''ಮಾಲಾ, ಈ ಮನೆ ನಿನ್ನದಲ್ವಾ? ನಾವು ಸದಾಕಾಲ ಇಲ್ಲೇ ಹೇಗೆ ಇರುಕ್ಕೆ ಆಗುತ್ತೆ? ಧ್ರುವ ಏನಂದುಕೊಳ್ತಾರೆ?''

''ಅವನು ಏನಾದ್ರು ಅಂದುಕೊಳ್ಳಲಿ. ಬೇಡದಿದ್ದರೆ ಅವನೇ ಈ ಮನೆಯಿಂದ ಹೊರಹೋಗಲಿ. ಐ ಡೋಂಟ್ ಕೇರ್''

''ಇಲ್ಲ ಮಾಲಾ, ಮುಂದೆ ಎಂದೂ ಯಾವ ಮಾತೂ ಬರಬಾರದು. ನಾನು ಇವತ್ತೇ ನಿನ್ನ ಅಣ್ಣನ ಹತ್ತಿರ ಮಾತನಾಡ್ತೀನಿ...''

''ಇದು ನನ್ನ ಡ್ಯಾಡಿಯ ಮನೆ. ಇದರಲ್ಲಿ ನನಗೆ ಎಷ್ಟು ಹಕ್ಕಿದೆಯೋ ಅಷ್ಟೇ ಹಕ್ಕನ್ನು ನಾನು ನಿನಗೆ ಕೊಡ್ತೀನಿ... ಇದರಲ್ಲಿ ಧ್ರುವನಿಗೆ ಹಕ್ಕೇ ಇಲ್ಲ.''

''ಹಕ್ಕಿನ ಪ್ರಶ್ನೆ ಅಲ್ಲ...''

''ಮತ್ತೆ ಹಾಗಾದ್ರೆ ಸುಮ್ಮನಿರು...'' ವಸುಧಾ ಸುಮ್ಮನಾದಳು. ಆದರೂ ಮನದಲ್ಲಿ ಏನೋ ವ್ಯಥೆ. ಅಣ್ಣ ತನಗೆ ಮೋಸ ಮಾಡಿದಾನೆ ಅಂತ ಗೊತ್ತಾದ್ರೆ ಮಾಲಾಳಿಗೆ ಏನನ್ನಿಸಬಹುದು. ಮಧೂಗೆ ಹೇಳಿ, ಮಾಲಾಳಿಗೇ ಈ ಮನೆಯನ್ನು ಬರೆಸಿಬಿಡಬೇಕು.

ಅದೇ ವಿಷಯವನ್ನು ರಾತ್ರಿ ಗಂಡನೊಡನೆ ಪ್ರಸ್ತಾಪಿಸಿದಳು. ''ನಾವು ಬೇರೆ ಮನೆ ಮಾಡಿಕೊಂಡು ಹೋಗೋಣ. ಇದು ಮಾಲಾಳ ಮನೆ. ಅವಳು ಬೇರೆ ಹೋಗಿ ಅಂತ ಹೇಳುವ ಮೊದಲೇ ಹೋಗಿ ಬಿಡುವುದು ಮರ್ಯಾದೆ.''

''ಇದು ನನ್ನ ಮನೆ. ಅವಳೇ ಬೇಕಾದ್ರೆ ಹೋಗಲಿ... ಹೇಗೂ ಗಂಡನ ಮನೆ ಇದೆಯಲ್ಲ. ತವರು ಮನೇಲಿ ಎಷ್ಟು ದಿನಾಂತ ಇರ್ತಾಳೆ?''

''ಇದ್ಯಾಕೆ ಸುಳ್ಳು ಹೇಳ್ತೀರಿ ಮಧು? ವಿಲ್ ಪ್ರಕಾರ, ನಿಮ್ಮ ತಂದೆ ಮಗಳಿಗೆ ಮನೆಯನ್ನು ಕೊಟ್ಟಿದಾರೆ ಅಂತ ಕೇಳಿದ್ದೆ.''

''ಅದು ಆಗಿನ ಮಾತು. ಭಾರ್ಗವ ತನ್ನ ಭಾಗದ ಹಕ್ಕನ್ನು ನನಗೆ ವಾಪಸ್ಸು ಕೊಟ್ಟಾಗ ಇವಳೂ ಬರೆದುಕೊಟ್ಟಳು.''

''ಸುಳ್ಳು, ನಾನು ಈ ಮಾತನ್ನು ನಂಬಲ್ಲ. ನಮಗೆ ಹುಟ್ಟಲಿರುವ ಮಗುವಿನ ಮೇಲಾಣೆ... ನಿಜ ಏನೂಂತ ಹೇಳಿ. ನಾನು ನಿಮ್ಮ ಬಾಯಿಂದಲೇ ಕೇಳಬೇಕು.''

''ನಿನಗೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲ. ಆಣೆ ಗೀಣೇನ ನಾನು ನಂಬಲ್ಲ.''

''ಅಣ್ಣನ ಸಮಾನನಾಗಿದ್ದ ಭಾರ್ಗವ ನಿಮ್ಮಿಂದ ದೂರವಾದರು. ಹಾಗೇ ಮಾಲಾಳನ್ನೂ ದೂರ ಮಾಡಿಕೊಳ್ತೀರಿ. ನನ್ನ ಹೊಟ್ಟೆಯಲ್ಲಿರುವ ಮಗುವಿಗೆ ಏನಾದರೂ ಆದರೆ, ನಾನೂ ನಿಮ್ಮಿಂದ ದೂರ ಹೊರಟುಹೋಗ್ತೀನಿ. ಆಮೇಲೆ ಒಂಟಿಯಾಗಿ ಅದೇನೇನು ಸುಖವನ್ನು ಅನುಭವಿಸ್ತೀರೋ ಅನುಭವಿಸಿ.''

''ವಸೂ... ವಸೂ... ನಿನಗೆಲ್ಲೋ ತಪ್ಪು ಕಲ್ಪನೆ. . ಭಾರ್ಗವ ಏನೋ ಹೇಳಿ ನಿನ್ನ ತಲೆ ಕೆಡಿಸಿರಬೇಕು. ನಾನು ಹಾಗೆ ಸ್ವಾರ್ಥಿ ಅನ್ನೋ ಅನುಮಾನವಿದ್ದಿದ್ದರೆ, ನನ್ನನ್ನೇಕೆ ಮದುವೆಯಾದೆ?''

''ನಿಮ್ಮ ಮನೆಯ ಅವ್ಯವಸ್ಥೆಯನ್ನು ಸರಿ ಮಾಡಲು...''

''ವಸೂ... ಸುಮ್ಮನಿದೀನಿ ಅಂತ ಏನೇನೋ ಒದರಬೇಡ. ನಾನು ಸುಮ್ಮನಿರಲ್ಲ''

''ಇನ್ನೇನು ಮಾಡ್ತೀರಿ? ಡೈವೋರ್ಸ್ ಕೊಡ್ತೀರಿ ತಾನೇ...''

''ನೀನು ಮಾಲಾಳ ಸ್ನೇಹಿತೆ ಅಂತ ತಿಳಿದೂ ನಾನು ನಿನ್ನನ್ನು ಮದುವೆಯಾದದ್ದು ದೊಡ್ಡತಪ್ಪು. ಈ ಮನೆಗೆ ನಾನು ಯಜಮಾನ. ಯಾರು ಏನು ಬೇಕಾದ್ರೂ ಮಾಡಿಕೊಳ್ಳಿ. ನಾನು ಹೆದರಲ್ಲ'' ಎಂದು ಹೇಳಿ ಬಿರುಗಾಳಿಯಂತೆ ಎದ್ದು ಹೊರಗೆಬಂದ. ಸರ್ರನೆ ಯಾರೋ ಅಲ್ಲಿಂದ ಸರಿದಂತಾಯಿತು. ಆದರೆ ಯಾರು ಎಂದು ತಿಳಿದುಕೊಳ್ಳುವ ಕಾತರ ತೋರದೆ ಬಾಲ್ಕನಿಗೆ ಬಂದು ನಿಂತ.

* * * *

ಮಾಲಾ ಭಾಸ್ಕರನ ಛೇಂಬರ್ರಿಗೆ ಬಂದಳು. ಯಾವುದೋ ಫೈಲನ್ನು ನೋಡುತ್ತಾ ಕುಳಿತಿದ್ದ ಭಾಸ್ಕರ ಕತ್ತೆತ್ತಿರಲಿಲ್ಲ. ''ಗುಡ್‌ಮಾರ್ನಿಂಗ್ ಸಾರ್'' ಎಂದಳು. ಅವನು ಕತ್ತೆತ್ತಿ ಅವಳನ್ನು ನೋಡಿದ. ಅವಳು ಮುಗುಳ್ನಕ್ಕಳು. ಅವನೂ ಮುಗುಳ್ನಕ್ಕು ''ವೆರಿ ಗುಡ್ ಮಾರ್ನಿಂಗ್'' ಎಂದ ತದೇಕವಾಗಿ ಅವಳನ್ನೇ ನೋಡುತ್ತಾ. ಅವಳು ಅವನ ಬಲಗೆನ್ನೆಯ ಮೇಲೆ ಮೂಡಿದ ಗುಳಿಯನ್ನೇ ಮತ್ತೆ ಮತ್ತೆ ನೋಡಿ ಮೋಹಕವಾಗಿ ನಕ್ಕಳು.

''ಎಸ್... ನೀವು?'' ಎಂದು ಹೇಳಿ ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿದ.

''ನಾನು ವನಮಾಲಾ... ಮಧುಕರ ನಿಮಗೆ ಹೇಳಿರಬೇಕಲ್ವಾ...''

''ಎಸ್. ಎಸ್. ಹೇಳಿದ್ರು. ನಿಮ್ಮ ಬಯೋಡೇಟಾ ತಂದಿದೀರಾ? ನಿಮಗೆ ಕಂಪ್ಯೂಟರ್ ನಾಲೆಡ್ಜ್ ಇದೆ ಅಲ್ವಾ ?''

''ಇಲ್ಲ, ಕಂಪ್ಯೂಟರ್ ವಿಷಯ ಏನೂ ಗೊತ್ತಿಲ್ಲ. ಗ್ರಾಜುಯೇಟ್ ಅಷ್ಟೇ. ಬಯೋಡೇಟಾ ನಾಳೆ ತಂದುಕೊಡ್ತೀನಿ.''

''ಪರವಾಗಿಲ್ಲ ಬಿಡಿ. ನಿಧಾನವಾಗಿ ತಂದುಕೊಡಿ. ಈಗ ಏನು ಕೆಲಸ ಮಾಡಬಲ್ಲಿರಿ?''

''ನೀವು ಏನು ಹೇಳಿದ್ರೂ ಸರಿ, ಐ ಆಮ್ ರೆಡಿ...''

''ಹಾಗಾದ್ರೆ ಈಗ ಮೊದಲಿಗೆ ಕಾಫಿ ತರಿಸ್ತೀನಿ. ಕಾಫಿ ಕುಡಿಯೋಣ''

''ಓ..ಕೇ.'' ಅವಳು ತಲೆಯಾಡಿಸುತ್ತಾ ಮಾದಕವಾಗಿ ನಕ್ಕಳು. ಅವಳ ಮುಂಗುರುಳು ಕುಣಿದಾಡಿತು. ಅವನು ಅವಳ ಚೆಲುವನ್ನೇ ಆಸ್ವಾದಿಸಿದ. ಬೆಲ್ ಮಾಡಿ ಎರಡು ಕಾಫಿಗೆ ಆರ್ಡರ್ ಮಾಡಿದ. ಮಾಲಾ ಅವನನ್ನೇ ಗಮನಿಸುತ್ತಿದ್ದಳು. ಎಷ್ಟು ಆಕರ್ಷಕವಾಗಿದಾನೆ... ಎತ್ತರದ ನಿಲುವು. ಒಳ್ಳೆಯ ಮೈಕಟ್ಟು, ಮುಖಕ್ಕೆ ಒಪ್ಪುವ ಕನ್ನಡಕ... ನಕ್ಕರೆ ಕೆನ್ನೆಯ ಮೇಲೆ ಮೂಡುವ ಗುಳಿ. ಎಂತಹ ಮೋಹಕ ರೂಪ! ಇವನನ್ನೇ ನೋಡುತ್ತಿದ್ದರೆ ನನ್ನ ದುಃಖ ದುಮ್ಮಾನಗಳೆಲ್ಲ ಮರೆತುಹೋಗುತ್ತದೆ. ನಾನು ಮತ್ತೆ ಕಾಲೇಜಿಗೆ ಹೋಗುವ ಹುಡುಗಿಯಾಗುತ್ತೇನೆ. ನನಗೂ ಲೈಫ್‌ನಲ್ಲಿ ಉಲ್ಲಾಸವಿರುತ್ತದೆ. ಥ್ಯಾಂಕ್ ಯೂ ವಸುಧಾ, ನನ್ನ ಬಾಳಿಗೆ ಒಂದು ಹೊಸ ತಿರುವನ್ನು ಕೊಟ್ಟಿದೀಯ... ಇಲ್ಲದಿದ್ದರೆ ನಾಲ್ಕು ಗೋಡೆಗಳ ಮಧ್ಯೆ ಧ್ರುವನನ್ನು ದ್ವೇಷಿಸುತ್ತಾ ನನ್ನ ಜೀವನವನ್ನು ನಾನೇ ಕೂಪಕ್ಕೆ ತಳ್ಳಿಬಿಡುತ್ತಿದ್ದೆ. ಥ್ಯಾಂಕ್ ಯೂ ವಸುಧಾ...

''ಏನು ಯೋಚಿಸ್ತಿದೀರಾ? ಕಾಫಿ ತಗೊಳ್ಳಿ ಆರಿ ಹೋಗುತ್ತೆ'' ಮಾಲಾ ಎಚ್ಚೆತ್ತಳು. ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾ ಕಾಫಿ ಕುಡಿದರು.

ಒಂದು ವಾರ ಕಳೆಯುವಷ್ಟರಲ್ಲಿ ಇಬ್ಬರೂ ಸ್ನೇಹಿತರಾಗಿದ್ದರು. ಒಡನಾಟ ಪ್ರಿಯವಾಗಿತ್ತು. ಮಾಲಾ ಅಲಂಕಾರದ ಕಡೆ ಹೆಚ್ಚು ಹೆಚ್ಚು ಗಮನವನ್ನು ಕೊಡ ಲಾರಂಭಿಸಿದ್ದಳು. ಬೀರುವಿನಲ್ಲಿ ಗಾಳಿ ಬೆಳಕು ಕಾಣದೆ ಅನಾಥವಾಗಿ ಬಿದ್ದಿದ್ದ ಸೀರೆ, ರವಿಕೆಗಳು, ಚೂಡಿದಾರ್ ಸೆಟ್ಟುಗಳು ಹೊರಬಂದವು. ಭಾಸ್ಕರ ಮರೆಯದೇ ಮೆಚ್ಚುಗೆ ಯನ್ನು ಸೂಸುತ್ತಿದ್ದ. ನಿಮಗೆ ಈ ಡ್ರೆಸ್ಸು ತುಂಬಾ ಚೆನ್ನಾಗಿ ಕಾಣುತ್ತದೆ. ನೀವು ಈ ಅಲಂಕಾರ ದಲ್ಲಿ ತುಂಬಾ ಚೆನ್ನಾಗಿ ಕಾಣುತ್ತೀರಿ ಎಂದು ಹೊಗಳಿ ಅವಳ ಕೆನ್ನೆಗಳು ರಂಗೇರುವಂತೆ ಮಾಡುತ್ತಿದ್ದ. ತನ್ನನ್ನು ಮೆಚ್ಚುವ ಹೊಗಳುವ ಭಾಸ್ಕರ ಬಹಳ ಆತ್ಮೀಯ ಗೆಳೆಯನಾದ.

ಆಫೀಸಿಗೆ ಮಾಲಾ ಹೋಗಿಬರುತ್ತಿದ್ದಾಳೆಂಬ ವಿಷಯ ತಿಳಿದ ಧ್ರುವ ಕೆರಳಿ, ಅವಳನ್ನು ಹುಡುಕಿಕೊಂಡು ಬಂದ.

''ಏನು, ಒಳ್ಳೆಯ ಮೂಡ್‌ನಲ್ಲಿರುವಂತಿದೆ... ನನಗೂ ಹೇಳು, ನನಗೂ ಬೋರ್ ಆಗ್ತಿದೆ.''

''ನಿಮಗ್ಯಾಕೆ ಬೋರ್... ನಿಮ್ಮ ಗೆಳೆಯ ನಿಮ್ಮ ಜೊತೆಗಿದಾರಲ್ಲ''

''ಅವನು ಇರೋದ್ರಿಂದ ನಾನಿನ್ನೂ ಬದುಕಿದೀನಿ. ಇಲ್ಲದಿದ್ದರೆ, ನನ್ನನ್ನು ಈ ಮನೇಲಿ ಕೇಳೋರು ಯಾರು? ನಿನಗೆ ನಾನು ಬೇಕಿಲ್ಲ, ನಿನ್ನ ಅಣ್ಣನಿಗೆ ಅವನ ಬಿಸಿನೆಸ್ಸು, ಅವನ ಹೆಂಡತಿ, ಅಷ್ಟೇ ಅವನ ಪ್ರಪಂಚ. ಮದುವೆಯಾದ ಮೇಲೆ ಅವನು ನನ್ನನ್ನು ಮರೆತೇ ಬಿಟ್ಟಿದಾನೆ.''

''ಅದನ್ನು ಅವನಿಗೆ ಹೇಳಿ, ನನಗ್ಯಾಕೆ ಹೇಳ್ತೀರಿ''

''ನಿನಗೆ ನಿಮ್ಮ ಅಣ್ಣಅತ್ತಿಗೆಯರನ್ನು ಒಟ್ಟೊಟ್ಟಿಗೆ ನೋಡಿದರೂ ಏನೂ ಅನ್ನಿಸುಲ್ವಾ?''

''ಇಲ್ಲ, ಅನ್ನಿಸೋಲ್ಲ...'' ಎಂದು ಮುಖಕ್ಕೆ ಹೊಡೆದವಳಂತೆ ಹೇಳಬೇಕೆಂದುಕೊಂಡವಳು ಏನನ್ನೋ ಯೋಚಿಸಿ ಸುಮ್ಮನಾದಳು.

''ಈಗ ನೀವು ಹೇಗಿಬೇರಿ? ಊರಿಗೆ ಯಾವಾಗ ಹೋಗ್ತೀರಿ?''

''ನೀನು ಯಾವಾಗ ಹೋಗೋಣ ಅಂತ ಹೇಳಿದರೆ ಆವಾಗ... ನನಗೂ ಇಲ್ಲಿ ಬೇಸರವಾಗ್ತಿದೆ. ಅಮ್ಮನ ಜೊತೆಯಲ್ಲಿ ಇರೋಣ ಅಂತ ಆಸೆಯಾಗ್ತಿದೆ.''

''ಇಲ್ಲ, ನಾನು ಬರೋಕ್ಕಾಗಲ್ಲ. ಈಗ ನಾನೂ ದಿನಾ ಆಫೀಸಿಗೆ ಹೋಗ್ತಾ ಇದೀನಿ. ಮಧೂಗೆ ಪಾರ್ಟನರ್ ಆಗಿದೀನಿ.''

''ನನಗೆ ಯಾರೂ ಹೇಳಲೇ ಇಲ್ಲ'' ಧ್ವನಿಯಲ್ಲಿ ಅಸಮಾಧಾನವಿತ್ತು.

''ಯಾಕೆ? ನಿಮ್ಮ ಪ್ರತಾಪ ಹೇಳಲಿಲ್ವಾ? ಅವರಿಗೆ ಗೊತ್ತಿತ್ತಲ್ಲ...''

''ಇಲ್ಲ, ಹೇಳಲಿಲ್ಲ. ನೀನು ಸೀರಿಯಸ್ಸಾಗಿ ಆಫೀಸಿಗೆ ಹೋಗುತ್ತಿರಬಹುದು ಅಂತ ಅಂದುಕೊಂಡಿಲ್ಲವೇನೋ... ಎನಿವೇ... ಹೊಸ ಅನುಭವ ಹೇಗಿದೆ?''

''ತುಂಬಾ ಚೆನ್ನಾಗಿದೆ'' ಅವಳು ಉತ್ಸಾಹದಿಂದ ಹೇಳಿದಾಗ ಅವನು ಅಸೂಯೆಗೊಂಡ. ಹೇಗಾದರೂ ಸರಿ ಅವಳನ್ನು ಈ ಪರಿಸರದಿಂದ ದೂರ ಕರೆದೊಯ್ಯಬೇಕೆನ್ನಿಸಿತ್ತು. ತಾನು ಮೊದಲು ಊರಿಗೆ ಹೋಗಿ, ಮಮ್ಮಿಯೊಡನೆ ಮಾತನಾಡಿ ಇವಳನ್ನು ಕರೆಸಿಕೊಳ್ಳಬೇಕೆಂದುಕೊಂಡ.

ಕಡೆಯ ಬಾರಿ ಡಾಕ್ಟರ ಬಳಿ ಮಾತನಾಡಿ, ಚೆಕಪ್ ಮಾಡಿಸಿಕೊಂಡು ಸಲಹೆಗಳನ್ನು ಪಡೆಯಲೆಂದು ಧ್ರುವ ನರ್ಸಿಂಗ್ ಹೋಂಗೆ ಬಂದ. ಅವನೊಂದಿಗೆ ಪ್ರತಾಪನೂ ಇದ್ದ. ಧ್ರುವನ ಬೆನ್ನು ಮೂಳೆ ಕೂಡಿಕೊಂಡಿತ್ತು. ತಲೆಗೆ ಹಾಕಿದ್ದ ಹೊಲಿಗೆಯ ಗಾಯ ಮಾಗಿತ್ತು. ಆದರೂ ಎಲ್ಲಾ ನಿಧಾನವೇ...

''ಯಾಕೆ ಎಲ್ಲಾ ಇಷ್ಟು ನಿಧಾನವಾಯಿತು. ನಾವು ಎಷ್ಟು ದುಡ್ಡು ಖರ್ಚು ಮಾಡಿದೀವಿ. ಎಷ್ಟೆಷ್ಟು ಔಷಧಿ ಮಾತ್ರೆಗಳನ್ನು ಕೊಟ್ಟಿದೀರಿ... ಆದರೂ ಇನ್ನೂ ಪೂರ್ಣವಾಸಿಯಾಗಿಲ್ಲವಲ್ಲ ಏಕೆ?'' ಪ್ರತಾಪ ಡಾಕ್ಟರೊಡನೆ ಮಾತನಾಡಿ ಕೇಳಿದ.

''ಕೆಲವರಿಗೆ ನಿಧಾನವಾಗುತ್ತೆ. ಅವರವರ ಶರೀರ ಪ್ರಕೃತಿ ಹಾಗಿರುತ್ತೆ. ಇನ್ನೊಂದು ವಿಷಯವನ್ನು ನಾನು ನಿಮಗೆ ತಿಳಿಸಿಲ್ಲ. ಈ ವಿಷಯವನ್ನು ನಿಮ್ಮ ಸ್ನೇಹಿತರಿಗೆ ನೀವೇ ತಿಳಿಸಿಬಿಡಿ. ವಿಷಯ ಬಹಳ ಸೂಕ್ಷ್ಮ.''

''ಯಾಕೆ ಡಾಕ್ಟ್ರೇ... ವಿಷಯವನ್ನು ಇದುವರೆಗೆ ಹೇಳಿರಲಿಲ್ಲ?''

"ಮೊದಲೇ ಅವರು ಡಿಪ್ರೆಸ್ಡ್ ಆಗಿದ್ದರು."

"ನಾನು ಅವನಿಗೆ ತುಂಬಾ ಬೇಕಾದವನು. ಏನೇ ಪ್ರಾಬ್ಲಂ ಇದ್ದರೂ ನಾನು ಅವನನ್ನು ಸರಿ ಮಾಡ್ತೀನಿ... ಪರವಾಗಿಲ್ಲ ಹೇಳಿ"

"ಮಿ|| ಧ್ರುವ ಅವರು ಎಚ್.ಐ.ವಿ. ಪಾಸಿಟಿವ್ ಅಂತ ಅವರ ರಿಪೋರ್ಟ್‌ಗಳು ಹೇಳುತ್ತವೆ... ಅಂದರೆ ಅವರು ಏಡ್ಸ್ ರೋಗಿಯಾಗಲಿದ್ದಾರೆ..."

ಪ್ರತಾಪ ಎದ್ದು ನಿಂತ. ಹೃದಯಚಲನೆಯೇ ನಿಂತು ಹೋಯ್ತೇನೋ ಅನ್ನುವಂತಾಗಿತ್ತು. "ಏನು ಹೇಳ್ತಿದೀರಿ ನೀವು ? ರಿಪೋರ್ಟ್ ಸರಿಯಾಗಿದೆಯಾ?"

"ನೋಡಿ, ನೀವೇ ಈ ರೆಕಾರ್ಡ್ಸ್‌ಗಳನ್ನು ನೋಡಿ. ಗೊತ್ತಾಗದಿದ್ದರೆ ಬೇರೆ ಡಾಕ್ಟರ್‌ಗಳನ್ನು ಕನ್ಸಲ್ಟ್ ಮಾಡಬಹುದು. ನೋ ಡೌಟ್ ಅಟ್ ಆಲ್..."

ಅವನು ಭಯದಿಂದ ತತ್ತರಿಸಿದ. ಇವನಿಗೆ ಹೇಗೆ ಬಂತು ಈ ಕಾಯಿಲೆ? ಸಿಂಗಾಪೂರ್‌ನಲ್ಲಿ ಯಾವುದೋ ಹುಡುಗಿಯರ ಸಹವಾಸ ಮಾಡಿದ್ದೆ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದ. ಆಗ ನಾನೂ ಅವನ ಜೊತೆ ಹೋಗಿದ್ದರೆ ಹೀಗಾಗುತ್ತಿರಲಿಲ್ಲ.

"ಅವರಿಗೆ ಮದುವೆಯಾಗಿದೆ ಅಲ್ವಾ?"

"ಹೂಂ. ಈಚೆಗೆ ಮದುವೆಯಾಯ್ತು..."

"ಅವರ ಬ್ಲಡನ್ನೂ ಟೆಸ್ಟ್ ಮಾಡಿಸಬೇಕಾಗುತ್ತದೆ" ಪ್ರತಾಪ ಎದ್ದು ನಿಂತ. ಇನ್ನೊಂದು ರೂಮಿನಲ್ಲಿದ್ದ ಧ್ರುವ ನಿಧಾನವಾಗಿ ನಡೆದು ಬಂದ. ಅವನನ್ನು ಕಂಡೊಡನೆ ಇವನ ಆತಂಕ ಗಾಬರಿ ಇಮ್ಮಡಿಯಾಗಿತ್ತು. ಆದರೆ, ತನ್ನ ಭಾವನೆಗಳನ್ನು ಅದುಮಿಟ್ಟುಕೊಂಡ. ಈಗ ಧ್ರುವನಿಗೆ ನನ್ನನ್ನು ಬಿಟ್ಟರೆ ಬೇರೆ ಯಾರ ಸಪೋರ್ಟ್ ಇಲ್ಲ. ಏನೇ ಆಗಲಿ ಈ ವಿಷಯ ಇವನ ಹೆಂಡತಿಗೂ, ತಾಯಿಗೂ ತಿಳಿಯಬಾರದು. ತಿಳಿದರೆ ಮಾಲಾ ಬಿಟ್ಟು ಹೋಗುವುದು ಖಂಡಿತಾ. ಆಮೇಲೆ ಇವನನ್ನು ಯಾರು ಮದುವೆಯಾಗ್ತಾರೆ? ಆಂಟಿಯ ಹೃದಯ ಒಡೆದುಹೋಗುತ್ತದೆ. ಹೀಗೆಲ್ಲಾ ಆಲೋಚಿಸಿದ.

* * * *

ಇದು ನನ್ನ ಮನೆ. ನಾನು ಈ ಮನೆಯನ್ನು ಬಿಟ್ಟು ಎಲ್ಲಿಗೂ ಬರುವುದಿಲ್ಲವೆಂದು ಮಾಲಾ ಆಗ ಈಗ ಹೇಳಿದ್ದನ್ನು ಧ್ರುವ ಪ್ರತಾಪನಿಗೆ ಹೇಳಿದ್ದ. ಆದರೆ ಮನೆ ಮಧುಕರನ ಹೆಸರಿನಲ್ಲಿರುವುದನ್ನು ಪ್ರತಾಪ ನೋಡಿದ್ದ. ಅಂದರೆ ಮಾಲಾಳಿಗೆ ತಿಳಿಯದಂತೆ ಮಧುಕರ ತನ್ನ ಹೆಸರಿಗೆ ಮಾಡಿಸಿಕೊಂಡಿದ್ದಾನೆ. ಈಗ ಮಾಲಾಳ ಪಾಲಿನಲ್ಲಿ ಏನೂ ಇಲ್ಲ. ಧ್ರುವನಿಗೆ ಮಾಲಾಳೂ ಇಲ್ಲ, ಆಸ್ತಿಯೂ ಇಲ್ಲ ಎಂದರೆ ಏನರ್ಥ... ಮಧುಕರನ ಹತ್ತಿರ ಮಾತನಾಡಿ, ಬೆದರಿಸಬೇಕೆಂದುಕೊಂಡ. ಮೊದಲು ಧ್ರುವನನ್ನು ಬಾಂಬೆಗೆ ಕರೆದುಕೊಂಡು ಹೋಗಬೇಕು ಎಂದುಕೊಂಡ.

ಧ್ರುವ, ಪ್ರತಾಪ ಪ್ರಯಾಣ ಹೊರಟಿದ್ದಾರೆಂದು ತಿಳಿದೂ ಮಾಲಾ ಆಫೀಸಿಗೆ ಹೊರಟುಹೋಗಿದ್ದಳು. ಮಧು ತಾನು ಬರುವಾಗ ಅವಳನ್ನು ಕರೆದುಕೊಂಡು ಬರುವುದಾಗಿ ಹೇಳಿದ್ದ. ಆದರೆ ಮಾಲಾ ಆಫೀಸಿನಲ್ಲಿರಲಿಲ್ಲ. ಯಾವುದೋ ಫೀಲ್ಡ್‌ವರ್ಕ್ ಮೇಲೆ ಭಾಸ್ಕರನ ಜೊತೆ ಹೊರಟುಹೋಗಿದ್ದಳು. ಇವನು ಭಾಸ್ಕರನ ಮೊಬೈಲ್‌ಗೆ ಫೋನು ಮಾಡಿ ತಕ್ಷಣವೇ ಆಫೀಸಿಗೆ ಬರಬೇಕೆಂದು ತಿಳಿಸಿದ. ಡ್ರೈವರ್ರು ಕಾರನ್ನು ಆಫೀಸಿನ ದಿಕ್ಕಿಗೆ ತಿರುಗಿಸಿದ.

''ನನಗೆ ಏರ್‌ಪೋರ್ಟ್‌ಗೆ ಹೋಗಕ್ಕೆ ಇಷ್ಟವಿಲ್ಲ. ಸುಮ್ಮನೇ ಬಲವಂತ ಮಾಡ್ತಾನೆ'' ಎಂದು ಗೊಣಗಿಕೊಂಡಾಗ ಭಾಸ್ಕರ ನಕ್ಕ.

''ಎನಿ ಪ್ರಾಬ್ಲಂ? ಮೇ ಐ ಹೆಲ್ಪ್ ಯೂ...''

''ನನ್ನ ಪ್ರಾಬ್ಲಂನ ಯಾರೂ ಸಾಲ್ವ್ ಮಾಡಕ್ಕಾಗಲ್ಲ...'' ಅವನ ಬಲಗೆನ್ನೆಯ ಗುಳಿಯನ್ನೇ ಆಳವಾಗಿ ನೋಡಿದಳು.

''ಅಂಥಾ ಬಿಗ್ ಪ್ರಾಬ್ಲಂ ಏನಪ್ಪಾ...'' ತಮಾಷೆಯಾಗಿ ಕೇಳಿದ.

''ಬಿಗ್ಗೂ ಅಂದರೆ ಬಿಗ್ಗೂ... ಬೆಟ್ಟದಷ್ಟು ಬಿಗ್ಗೂ... '' ಎನ್ನುತ್ತಾ ಕೈಗಳನ್ನು ಅಗಲ ಮಾಡಿದಳು. ಬಲಗೈ ಅವನ ಕೆನ್ನೆಗೆ ತಗುಲಿತು. ಮೈಪುಳಕಗೊಂಡಿತು. ಅವನ ಕಡೆ ಓರೆನೋಟ ಬೀರಿದಳು. ಅವನು ರಸ್ತೆಯ ಕಡೆ ನೋಡುತ್ತಿದ್ದ.

''ಐಸೀ... ಬೆಟ್ಟದಂತಹ ಪ್ರಾಬ್ಲಂ ಈ ಬ್ಯೂಟೀಗೆ... ಐ ಕಾಂಟ್ ಬಿಲೀವ್ ಇಟ್...''

''ನಾನು ಸುಳ್ಳು ಹೇಳ್ತಿಲ್ಲ ಭಾಸ್ಕರ್'' ಎನ್ನುತ್ತಾ ಅವನ ಭುಜಕ್ಕೆ ತನ್ನ ತಲೆಯನ್ನು ಒರಗಿಸಿದಳು. ಅವನು ಇತ್ತ ತಿರುಗಿದ. ಅವನು ಅವಳಿಂದ ಸರಿದು ಕುಳಿತ. ಸಾರಿ ಎಂದಳು ಅವಳೂ ಅತ್ತ ಸರಿಯುತ್ತಾ. ಆನಂತರ ಇಬ್ಬರೂ ಏನೂ ಮಾತಾಡಲಿಲ್ಲ. ಅವನ ಅಂತರಂಗದಲ್ಲಿ ಸುಂದರ ಅಲೆಗಳು ಎದ್ದಿದ್ದವು. ಆದರೆ ಇದು ಸಮಯವಲ್ಲ ಎನ್ನುವುದು ಅವನು ಬಲ್ಲ.

ಅವನಿಂದ ಕೆಲಸವನ್ನು ಕಲಿಯುವ ನೆವದಲ್ಲಿ ಮಾಲಾ ಅವನಿಗೆ ಪ್ರಿಯಳಾದಳು. ಸ್ನೇಹ ಬೆಳೆಯಿತು. ಸಲುಗೆಯಲ್ಲಿ ಮಾತುಕತೆಗಳನ್ನಾಡುತ್ತಿದ್ದರು. ಒಟ್ಟೊಟ್ಟಿಗೆ ತಿರುಗಾಡುತ್ತಿದ್ದರು. ಅವನಿಗೂ ಅವಳ ಒಡನಾಟ ಹಿತವಾಗಿತ್ತು. ಆದರೆ ಯಾವ ಆತುರವನ್ನೂ ತೋರಿರಲಿಲ್ಲ.

ಮಾಲಾ ಬಾಸ್‌ನ ತಂಗಿಯೆಂದು ಬಲ್ಲ. ಅಣ್ಣತಂಗಿಯರಲ್ಲಿ ಆಗಾಗ್ಗೆ ನಡೆಯುತ್ತಿದ್ದ ವಾಗ್ವಾದವನ್ನು ಗಮನಿಸಿದ್ದ. ಮಾಲಾಳಿಗೆ ಮದುವೆಯಾಗಿದೆ ಎನ್ನುವ ವಿಷಯ ತಿಳಿದಿದ್ದರೂ ಆ ಬಗ್ಗೆ ಕೇಳಿರಲಿಲ್ಲ. ಅವಳೂ ಹೇಳಿರಲಿಲ್ಲ. ಧ್ರುವನೇ ಅವಳ ಪತಿ ಎನ್ನುವುದನ್ನೂ ತಿಳಿದಿದ್ದ. ಅವರಿಬ್ಬರ ನಡುವೆ ಅನ್ಯೋನ್ಯತೆಯಿಲ್ಲ ಎನ್ನುವುದನ್ನು ಊಹಿಸಿದ್ದ.

ಆದರೆ ಇದೆಲ್ಲಾ ಮಾಲಾಳ ವೈಯಕ್ತಿಕ ವಿಷಯಗಳು. ಅದನ್ನು ತಾನು ತಿಳಿದುಕೊಂಡು ಏನು ಮಾಡಬೇಕಾಗಿದೆ ಎಂದು ಉದಾಸೀನವಾಗಿಯೇ ಇದ್ದ. ಆದರೆ ಮಾಲಾ ಅವಳಾಗಿಯೇ ಹೇಳಿಕೊಳ್ಳುವುದಾದರೆ ಇವನಿಗೆ ಯಾವ ತೊಂದರೆಯೂ ಇಲ್ಲ. ಎಷ್ಟಾಗಲೀ ಅವಳು ಈಗ ನನ್ನ ಕಲೀಗ್... ಅದು ಸಹಜ... ಅಲ್ಲದೇ ಅವಳ ಮಾತುಗಳನ್ನು ಕೇಳುವುದೆಂದರೆ, ಅವಳನ್ನೇ ಆಗಾಗ ನೋಡುತ್ತಿದ್ದರೆ, ನನ್ನ ಬಾಳಿನಲ್ಲೂ ಚೈತನ್ಯ ಬರುತ್ತದೆ ಎಂದೆನಿಸಿತ್ತು.

ಇವರುಗಳಿಗಾಗಿಯೇ ಕಾಯುತ್ತಿದ್ದ ಮಧುಕರ ತಂಗಿಯ ಮೇಲೆ ಸಿಡುಕಿದ.

''ಏರ್‌ಪೋರ್ಟ್‌ಗೆ ಹೋಗಬೇಕು, ಆಫೀಸಿಗೆ ಹೋಗಬೇಕು ಅಂತ ನಾನು ಹೇಳಿರಲಿಲ್ವಾ?''

''ಏರ್‌ಪೋರ್ಟ್‌ಗೆ ಹೋಗಿಬರುವುದೆಂದರೆ ಎಷ್ಟು ಟೈಂ ವೇಸ್ಟು. ಇವತ್ತು ನನಗೆ ಫೀಲ್ಡ್‌ವರ್ಕ್ ಇತ್ತು.''

''ಅದನ್ನೆಲ್ಲಾ ನೋಡಿಕೊಳ್ಳೋಕೆ ಭಾಸ್ಕರ ಇಲ್ವಾ? ನೀನ್ಯಾಕೆ ಹೋಗಬೇಕು?''

''ಅದು ನನಗೆ ಇಷ್ಟವಾಗುತ್ತೆ. ನನ್ನ ಇಷ್ಟಕ್ಕೆಲ್ಲ ನೀನು ಬಾಯಿ ಹಾಕಬೇಡ. ನನಗಿಷ್ಟವಾಗಲ್ಲ.''

''ನಡೀ ಮನೆಗೆ ಹೋಗೋಣ''

''ನಾನು ಬೆಳಿಗ್ಗೇನೇ ಧ್ರುವನಿಗೆ ಬೈಬೈ ಹೇಳಿಯಾಗಿತ್ತು. ಮತ್ತೆ ಮತ್ತೆ ಏನು ಹೇಳೋದು?''

''ಇವತ್ತು ಎಲ್ಲರೂ ಒಟ್ಟಿಗೇ ಕುಳಿತು ಊಟ ಮಾಡೋಣ. ನಡೀ, ಅವರೆಲ್ಲಾ ನಮಗೋಸ್ಕರ ಕಾಯ್ತಾ ಇರ್ತಾರೆ'' ಅವಳು ಮುಂದೆ ಮಾತನಾಡಲು ಅವಕಾಶವಾಗದಂತೆ ಕಾರಿನ ಬಳಿಗೆ ನಡೆದ.

''ಒಂದ್ನಿಮಿಷ ಬಂದೆ ತಡಿ'' ಎನ್ನುತ್ತಾ ತನ್ನ ಆಫೀಸ್ ರೂಮಿಗೆ ಬಂದ. ಭಾಸ್ಕರ ಅವಳನ್ನು ನೋಡಿ ಕುಹಕವಾಗಿ ನಕ್ಕ.

''ಪ್ಲೀಸ್ ನಗಬೇಡಿ. ಈಗ ಮನೆಗೆ ಹೋಗಲೋ ಬೇಡವೋ ಅಂತ ಯೋಚಿಸ್ತಿದೀನಿ.''

''ಹೋಗ್ಬನ್ನಿ...'' ಕೂಲ್ ಆಗಿ ಹೇಳಿದ.

''ಓ..ಕೇ. ನೀವು ಹೇಳಿದಿರಿ ಅಂತ ಹೋಗ್ತಾ ಇದೀನಿ''

''ನನಗೂ ನಿಮ್ಮನ್ನು ಕೇಳಿಸೋಕೆ ಇಷ್ಟವಿಲ್ಲ...'' ಅಂತ ಹೇಳಬೇಕೆಂದುಕೊಂಡರೂ ಹೇಳಲಾಗದೇ ಸುಮ್ಮನಾದ. ಅವಳು ಅವನನ್ನೇ ಗಮನಿಸಿದಳು. ಅಷ್ಟರಲ್ಲಿ ಮಧು ಕಾರಿನ ಬಳಿಗೆ ಹಿಂತಿರುಗಿದ್ದ.

''ಹೊರಡಿ ಮೇಡಂ... ಹೊತ್ತಾಗುತ್ತೆ. ನಿಮ್ಮ ಬ್ರದರ್ ಕಾಯ್ತಾ ಇದಾರೆ...''

ಮಾಲಾ ಅವನಿಗೆ ಉತ್ತರಿಸದೇ ತನ್ನ ಹ್ಯಾಂಡ್‌ಬ್ಯಾಗ್ ಹಿಡಿದು ಹೊರಬಂದಳು.

ಅವಳ ನಡಿಗೆಗೆ ತಕ್ಕಂತೆ ತೊಯ್ದಾಡುವ ಜಡೆಯನ್ನೇ ನೋಡಿದ. ಬಲು ಜೋರಿನ ಹೆಣ್ಣು... ಎಂದು ಮೆಚ್ಚುಗೆಯನ್ನು ಸೂಸಿದ.

* * * *

ಭಾಸ್ಕರ ನಂಜನಗೂಡಿನವನು. ಅವನ ತಂದೆ ಒಂದು ಸಣ್ಣ ದೇವಸ್ಥಾನದಲ್ಲಿ ಅರ್ಚಕರಾಗಿದ್ದರು. ಅವರಿಗೆ ಇಬ್ಬರು ಮಕ್ಕಳು. ಹಿರಿಯವಳು ಮಗಳು. ಅವಳಿಗಿಂತ ಹನ್ನೆರಡು ವರ್ಷ ಚಿಕ್ಕವನು ಭಾಸ್ಕರ. ಹದಿನಾರನೇ ವಯಸ್ಸಿಗೆ ಮದುವೆಯಾದ ಅಕ್ಕ, ಒಂದು ವರ್ಷದೊಳಗೆ ಗಂಡನನ್ನು ಕಳೆದುಕೊಂಡು ತವರುಮನೆಯನ್ನು ಸೇರಿ ಕೊಂಡಿದ್ದಳು. ಅವಳು ಆಗ ಗರ್ಭಿಣಿಯಾಗಿದ್ದಳು. ಎರಡು ತಿಂಗಳ ನಂತರ ಹುಟ್ಟಿದವಳೇ ಭಾರತಿ. ಅವಳು ಹುಟ್ಟಿದಾಗಿನಿಂದಲೇ ಅವಳು ಭಾಸ್ಕರನ ಹೆಂಡತಿ ಎಂದು ತೀರ್ಮಾನಿಸಿ ಬಿಟ್ಟಿದ್ದರು. ಮೊದಮೊದಲು ನಾಚಿಕೆಯಿಂದ ಭಾಸ್ಕರ ಓಡಿಹೋಗುತ್ತಿದ್ದ.

ಕಾಲೇಜಿಗೆ ಓದಲು ಅವನು ಮೈಸೂರಿಗೆ ಬಂದು ಸೇರಿಕೊಂಡಿದ್ದ. ಹಾಸ್ಟೆಲ್ಲಿನಲ್ಲಿದ್ದು ಕೊಂಡು ಓದುತ್ತಿದ್ದ. ರಜಕ್ಕೆ ಊರಿಗೆ ಹೋದರೆ, ಅವನು ಮೊದಲಿನಂತೆ ಭಾರತಿಯನ್ನು ಕೀಟಲೆ ಮಾಡುತ್ತಿರಲಿಲ್ಲ. ಅವಳೊಡನೆ ಮಾತನಾಡುವುದನ್ನೇ ಬಿಟ್ಟುಬಿಟ್ಟಿದ್ದ. ಅವಳ ಕಡೆ ನೋಡುತ್ತಿರಲೂ ಇರಲಿಲ್ಲ.

''ಯಾಕೋ ಮಾವ, ನಾನೇನ್ಮಾಡ್ದೆ? ನನ್ನ ಹತ್ತಿರ ಮೊದಲಿನಂತೆ ಮಾತನ್ನೇ ಆಡುವುದಿಲ್ಲ.''

''ನಿನ್ನ ಹತ್ತಿರ ಮಾತನಾಡುಕ್ಕೆ ನನಗೆ ಸಮಯವಿಲ್ಲ. ಸುಮ್ಮನೇ ಹೋಗು...''

''ಅಮ್ಮಾ'' ಎಂದು ಅಳುತ್ತಾ ಅವಳು ಅವನ ಮೇಲೆ ಚಾಡಿ ಹೇಳುತ್ತಿದ್ದಳು.

''ಯಾಕೋ ಭಾಸ್ಕರ... ನೀನು ಊರಿಗೆ ಬಂದರೆ ಸಾಕು ಅಂತ ಕಾಯ್ತಾ ಇರುತ್ತೆ. ನಾಲ್ಕು ಮಾತನ್ನಾಡಬಾರದೇನೋ...'' ತಾಯಿಯೂ ಮೊಮ್ಮಗಳ ಪರವಹಿಸಿ ಅವನನ್ನೇ ಗದರಿಸುತ್ತಿದ್ದಳು.

''ಅವಳೇನು ಚಿಕ್ಕವಳಲ್ಲ. ಅವಳಿಗೆ ಬೇಕಾದಷ್ಟು ಸ್ನೇಹಿತೆಯರಿದಾರೆ. ಮಾತಿಗೆ ನಾನೇ ಬೇಕಾ?''

''ಹೋಗೇ ಬಂದೂ ಬಂದೂ ಚಾಡಿ ಹೇಳಬೇಡ. ಮೈಸೂರಿಗೆ ಹೋದ ಮೇಲೆ ನಿನ್ನ ಮಗನಿಗೆ ಜಂಭ ಬಂದುಬಿಟ್ಟಿದೆ. ಅವನಿಗೆ ನಾವುಗಳು ಬೇಡವಾಗಿದೀವಿ'' ಅಕ್ಕ ತಮಾಷೆಯಿಂದ ದೂಷಿಸುತ್ತಿದ್ದಳು.

''ಇವನ ಓದು ಮುಗಿಯುತ್ತಿದ್ದ ಹಾಗೇ ಇವನಿಗೆ ಮೂಗುದಾರ ಹಾಕಿಬಿಡೋಣ. ಆಮೇಲೆ ಅವರವರ ಪಾಡು...'' ಭಾಸ್ಕರ ಅಲ್ಲಿಂದ ಎದ್ದು ಹೋಗಿ ಬೇರೆ ಕಡೆ

ಕೂತ್ಕೊಳ್ಳುತ್ತಿದ್ದ. ಇಂಜಿನಿಯರಿಂಗ್ ಕೋರ್ಸ್ ಮುಗಿಸಿದ್ದರೂ ಅವನಿಗೆ ತಕ್ಷಣಕ್ಕೆ ಕೆಲಸ ಸಿಕ್ಕಿರಲಿಲ್ಲ. ಹತ್ತಿರದಲ್ಲೇ ಸಣ್ಣಪುಟ್ಟ ಕೆಲಸಗಳಿಗೆ ಸೇರಿಕೊಂಡು ಹಾಗೇ ಕಂಪ್ಯೂಟರ್ ಕೋರ್ಸ್‌ಗಳನ್ನೂ ಮಾಡಿಕೊಂಡ.

ಅದೇ ಸಮಯದಲ್ಲಿ ತಂದೆ ಅನಾರೋಗ್ಯದಿಂದ ಮಲಗಿದ್ದಾಗ, ಸಾಯುವ ಮೊದಲು ಭಾಸ್ಕರನ ಮದುವೆಯನ್ನು ಕಣ್ತುಂಬಾ ನೋಡಬೇಕೆಂದು ಬಯಸಿದರು. ತಂದೆಯ ಸಂತೋಷಕ್ಕಾಗಿ, ಭಾಸ್ಕರ ಭಾರತಿಯನ್ನು ಮದುವೆಯಾಗಬೇಕಾಯಿತು. ಆದರೆ ಅವಳು ಪತ್ನಿಯೆಂಬ ಭಾವನೆ ಅವನಲ್ಲಿ ಬೆಳೆಯಲಿಲ್ಲ. ಅವಳನ್ನು ತನ್ನ ಹತ್ತಿರಕ್ಕೆ ಸೇರಿಸಿರಲಿಲ್ಲ. ಯಾವಾಗಲೂ ''ನನ್ನನ್ನು ಮಾತನಾಡಿಸಬೇಡ, ನನ್ನನ್ನು ಪೀಡಿಸಬೇಡ, ನಿನ್ನ ಅಮ್ಮನ್ನೋ ಅಜ್ಜೀನ್ನೋ ಕೇಳ್ಕೋ ಹೋಗು'' ಎಂದು ಗದರಿಸಿ ಕಳಿಸುತ್ತಿದ್ದ.

''ನಿಮ್ಮಗಳ ಮಾತು ಕೇಳಿ ನಮ್ಮ ಭಾರತಿಗೆ ಅನ್ಯಾಯ ಮಾಡಿಬಿಟ್ವೆ. ನಿನ್ನ ಮಗನಿಗೆ ಹೆಂಡತಿಯ ಮೇಲೆ ಪ್ರೀತಿಯೇ ಇಲ್ಲ. ನನ್ನ ಮಗಳು ಯಾವುದರಲ್ಲಿ ಕಡಿಮೆಯಾಗಿದಾಳೆ? ನಿನ್ನ ಮಗ ಸೊಗಸುಗಾರನಾಗಿದ್ದಾನೆ.'' ಅಕ್ಕ ಆಡುವ ಈ ಮಾತುಗಳು ಭಾಸ್ಕರನ ಕಿವಿಗೆ ಬೀಳದೇ ಏನಿರಲಿಲ್ಲ. ಒಂದು ಬಾರಿ ಇದೇ ವಿಷಯದಲ್ಲಿ ಅಕ್ಕ ತಮ್ಮನಿಗೆ ಭಾರೀ ಜಗಳವಾಯಿತು.

''ಭಾರತೀ ನಿನಗೆ ಇಷ್ಟವಿಲ್ಲದೆ ಇದ್ದಿದ್ದರೆ ಬಾಯಿಬಿಟ್ಟು ಹೇಳಿ ಬಿಡಬೇಕಾಗಿತ್ತು. ಈಗೇಕೆ ಅವಳನ್ನು ಗೋಳು ಹೊಯ್ದುಕೊಳ್ಳುತ್ತೀಯ...?''

''ಅಯ್ಯೋ ರಾಮಾ... ನಾನೆಲ್ಲಿ ಗೋಳು ಹೊಯ್ದುಕೊಳ್ಳುತ್ತಿದ್ದೀನೆಯೇ ಅಕ್ಕಾ. ನಿನ್ನ ಮಗಳೇ ನನ್ನನ್ನ ಪೀಡಿಸುತ್ತಾ ಇರೋಳು.''

''ಹೌದು ಮತ್ತೆ. ಹೆಂಡತಿ ಅಂತ ಪ್ರೀತಿಯಿಂದ ಹೊರಗೆಲ್ಲಾದರೂ ಕರೆದು ಕೊಂಡು ಹೋಗಿದೀಯ ? ವಾಕಿಂಗ್, ನಾಟಕ, ಸಿನಿಮಾ ಅಂತ ಎಲ್ಲಾದ್ರೂ ಹೋಗಿದೀರಾ?''

''ಈ ಅಗ್ರಹಾರದಲ್ಲಿ ನಾನು ಅವಳ ಕೈಕೈ ಹಿಡಿದುಕೊಂಡು ವಾಕಿಂಗ್ ಹೋದರೆ, ನನಗೆ ಬಹಿಷ್ಕಾರ ಹಾಕಿಬಿಡ್ತಾರೆ ಅಷ್ಟೇ... ಮನೇಲಿ ಟಿ.ವಿ. ಇದೆ. ಇಪ್ಪತ್ನಾಲ್ಕು ಗಂಟೆ ಏನಾದ್ರೂ ಪ್ರೋಗ್ರಾಂ ಇದ್ದೇ ಇರುತ್ತೆ. ನೋಡಲಿ...''

''ಹೋಗಲಿ ಎಂದಾದ್ರೂ ಹೂವು, ಬಳೆ, ಸೀರೆ, ರವಿಕೆ ಅಂತ ಏನಾದ್ರೂ ತಂದು ಕೊಟ್ಟಿದೀಯ?''

''ಮನೆಯ ತೋಟದಲ್ಲೇ ಬೇಕಾದಷ್ಟು ಹೂ ಬಿಡುತ್ತೆ. ಕಟ್ಟಿ ಮುಡಿದುಕೊಳ್ಳಲಿ. ಬಳೆ, ರಿಬ್ಬನ್ನು ಮನೆ ಮುಂದೆ ಮಾರೋಕೆ ಬರುತ್ತೆ. ತೆಗೆದುಕೊಡಿ. ಇನ್ನು ಈ ಡ್ರಮ್ಮಿಗೆ ಎಷ್ಟು ಗಜದ ಸೀರೆ, ರವಿಕೆ ಬೇಕೋ ನನಗಂತೂ ಅದೆಲ್ಲಾ ತಿಳಿಯಲ್ಲ.''

''ನೋಡಮ್ಮ ಮಾವಾ ನನ್ನನ್ನು ಡ್ರಮ್ಮು ಅಂತಾನೆ.''

"ಡ್ರಮ್ಮೋ ಪೀಪಾಯಿನೋ, ಈಗ ಇವಳು ನಿನ್ನ ಪತ್ನಿ. ಅವಳ ಜೊತೆ ಸಂಸ ಮಾಡಬೇಕಾದುದು ನಿನ್ನ ಧರ್ಮ."

"ಏನು ಸಂಸಾರ ಅಂದರೇ... ನನಗೋಸ್ಕರ ಬಾವಿಯಿಂದ ನೀರು ಸೇದಿ ತಂದ ನೀರು ಕಾಯಿಸಿಡ್ತಾಳಾ? ತಿಂಡಿಕಾಫಿ, ಅಡಿಗೆ ಏನಾದ್ರೂ ಮಾಡ್ತಾಳಾ? ಎಲ್ಲಾ ನೀ ಮಾಡ್ತೀರಿ. ಇವಳಿಗೇನು ಕೆಲಸ ಬರುತ್ತೆ! ಕೂತು ಕೂತು ಮೈ ಬೆಳೆಸಿದ್ದಾಳೆ. ಇವಳ ಜೊ ಏನು ಸಂಸಾರ ಮಾಡೋದು?"

"ಏನೋ ಇನ್ನೂ ಚಿಕ್ಕೋಳು. ಜವಾಬ್ದಾರಿ ಬಂದ ಮೇಲೆ ಎಲ್ಲಾ ಕಲಿತುಕೊಳ್ತಾಳೆ."

"ಏನು ಚಿಕ್ಕೋಳು? ಹಾಗಾದ್ರೆ ಅವಳಿಗೇಕೆ ಮದುವೆ ಮಾಡಿದ್ರಿ. ನಾನು ಚಿಕ್ಕೋನೇ ಅಲ್ವಾ ? ನನ್ನ ಮಾತನ್ನು ಕೇಳಿದ್ರಾ? ನಿನ್ನ ಮಗಳಿಗೆ ಬೇರೆ ಎಲ್ಲೂ ಗಂಡ ಸಿಗುತ್ತಿರಲಿಲ್ಲ. ನನ್ನ ಕೊರಳಿಗೆ ಕಟ್ಟಿ ನನ್ನ ಕನಸುಗಳನ್ನೇ ಹಾಳು ಮಾಡಿದಿರಿ. ನನಗೆ ಯಾ ಉಪದೇಶವೂ ಬೇಕಿಲ್ಲ"

"ಏನೋ ಹೀಗೆಲ್ಲಾ ಮಾತಾಡ್ತೀಯ! ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾ ಅಷ್ಟೇ... ನಾನು, ನಿನ್ನ ಅಕ್ಕ, ಎಲ್ಲಾ ಚಿಕ್ಕವಯಸ್ಸಿನಲ್ಲೇ ಗಂಡನ ಮನೆಯನ್ನು ಸೇ ಕೊಂಡೆವು. ಈಗ ನಾವುಗಳು ಮನೆಕೆಲಸ ಮಾಡುತ್ತಿಲ್ವಾ? ಇದು ಆಡಿ ನಲಿಯುವ ವಯಸ್ಸು. ಮುಂದೆ ಇದ್ದೇ ಇದೆಯಲ್ಲಾ. ಮಕ್ಕಳು ಮರಿಗಳನ್ನು ಸಾಕಿ ಬೆಳೆಸ್ತಾ ಬೆಳೆಸ ಎಲ್ಲಾ ತಾನಾಗಿಯೇ ಬರುತ್ತೆ."

ಭಾಸ್ಕರ ಎಲ್ಲರನ್ನೂ ಕೆಕ್ಕರಿಸಿ ನೋಡಿದ. ಇವರೆಲ್ಲಾ ಈ ಅಗ್ರಹಾರದಲ್ಲಿ ಇರೋಕೆ ಲಾಯಕ್ಕು. ಹೊರಗಿನ ಪ್ರಪಂಚ ತಿಳಿಯದು. ಹೆಂಡತಿ ಅಂತ ಹೇಳಿಕೊಳ್ಳೋಕೆ ಹೀನಾಯ ವಾಗುತ್ತೆ. ಇದೆಂತಹ ಅಲಂಕಾರ, ಇದೆಂತಹ ನಡಿಗೆ... ಭಾರತಿ ನಾಚಿ ಕೆಂಪಾಗಿದ್ದಳು ಇವನಿಗೆ ಅಸಹ್ಯವೆನಿಸಿತ್ತು.

ಅಂದು ರಾತ್ರಿ ಅವನನ್ನು ಪೀಡಿಸಿದಳು. "ಮಾವಾ... ನನಗೆ ಮಗು ಯಾವಾ ಆಗುತ್ತೆ?" ಅಂತ.

"ನಿನಗೇಕೆ ಮಗು. ನೀನೇ ಮಗು. ಹೋಗಿ ನಿಮ್ಮಮ್ಮನ ಪಕ್ಕ ಮಲಕ್ಕೋ. ನನ್ನನ ಮುಟ್ಟಬೇಡ."

"ನಿನ್ನನ್ನು ಮುಟ್ಟಿದರೆ ನನಗೆ ಮಗುವಾಗುತ್ತೆ ಅಂತ ಹೇಳಿದಾಳೆ. ನನಗೆ ಮಗ ಬೇಕು" ಅವಳು ಅವನ ಕೈ ಮುಟ್ಟಿದಳು.

"ಛಿ... ದೂರ ಹೋಗು. ನಿನಗೆ ಮಗು ಬೇರೆ ಕೇಡು... ನಿನ್ನನ್ನು ನೀನು ನೋಡಿ ಕೊಳ್ಳೋ ಯೋಗ್ಯತೆಯಿಲ್ಲ. ಮಗು ಬೇಕಂತೆ ಮಗು..." ಅವಳು ಅಳುತ್ತಾ ತಾಯಿಯ ಬಳಿಗೆ ಹೋಗಿದ್ದಳು.

"ಅಂತೂ ನಿನ್ನ ಮಗ, ನನ್ನ ಮಗಳಿಗೆ ಅನ್ಯಾಯ ಮಾಡಿದ."

"ಅವನು ನಿನಗೂ ತಮ್ಮ... ಅವನನ್ನು ಹುಟ್ಟಿದಾರಭ್ಯ ನೋಡಿದ್ದೆಯಲ್ಲ. ಸರಿ
ಲ್ಲ ಅಂತ ಅನ್ನಿಸಿದ್ದರೆ ನಿನ್ನ ಮಗಳಿಗೆ ಬೇರೆ ವರನನ್ನು ನೋಡಬೇಕಾಗಿತ್ತು. ನನ್ನ
ಗನೂ ಸುಖವಾಗಿರುತ್ತಿದ್ದ."

"ಸರಿ, ನಾಳೆ ದಿನ ಒಂದು ಇತ್ಯರ್ಥ ಮಾಡಿಬಿಡ್ತೀನಿ. ಅವನಿಗೆ ಹೆಂಡತಿ ಬೇಡ
ದರೆ ಇವಳಿಗೂ ಗಂಡ ಬೇಡ. ಗಂಡನಿಲ್ಲದೇ ನಾನು ಜೀವನ ಸಾಗಿಸುತ್ತಿಲ್ಲವೇ?
ಗೇ ನನ್ನ ಮಗಳು ಗಂಡನಿದ್ದೂ ವಿಧವೆಯಂತೆ ಬಾಳಲಿ. ಅವಳ ಹಣೇಬರಹ
ದ್ದಂತಾಗುತ್ತೆ."

"ಹೀಗೆಲ್ಲಾ ಹೊಟ್ಟೆಯುರಿವ ಮಾತನ್ನಾಡಬೇಡ ಸರಸೂ. ನಿನಗೆ ಎಂದಾದರೂ
ೀವಾಗುವಂತಹ ಮಾತನ್ನಾಡಿದೀವಾ ನಾವು... ನಿನಗಾಗಿ ಕೊರಗಿದ ದಿನಗಳೇ ಜಾಸ್ತಿ.
ಗ ನಿಮ್ಮ ಅಪ್ಪನೂ ಬದುಕಿಲ್ಲ. ನಮಗೆ ಭಾಸ್ಕರನೇ ಆಸರೆ. ಅವನನ್ನು ದೂರ
ಡಿಕೊಂಡರೆ ನಮಗೇ ಕಷ್ಟ. ಅವನೂ ಚಿಕ್ಕವನೇ... ನಿನ್ನ ಮಗಳಿಗೆ ಸ್ವಲ್ಪ ಇರಸರಿಕೆ
ಸು. ಮಾವಾ ಮಾವಾ... ಅಂತ ಹೋಗಿ ಮೈಮೇಲೆ ಬೀಳುತ್ತೆ. ಅವನಿಗೂ ಅಸಹ್ಯ
ಗಬಹುದು. ಸ್ವಲ್ಪ ನಯ, ನಾಜೂಕು, ನಾಚಿಕೆ, ಸಂಕೋಚ ಏನೂಂತ ತಿಳಿಸಿಕೊಡು.
ನಾಗಿಯೇ ಇವಳ ಕಡೆ ವಾಲುತ್ತಾನೆ."

"ಏನು ವಾಲುತ್ತಾನೋ... ಮದುವೆಯಾಗಿ ಆರು ತಿಂಗಳಾಗ್ತಾ ಬಂದಿದೆ. ಹೆಣ್ಣಿನ
ಲೆ ಆಸೆಯೇ ಬರದಿದ್ದರೆ ನನ್ನ ಮಗಳು ಬರಡಾಗಿರಲಿ ಅಂತ ಸುಮ್ಮನಿರೋಕೆ
ತ್ತಾ?"

"ನಾಳೆಯೇ ಶ್ರೀಕಂಠೇಶ್ವರನಿಗೆ ಹರಕೆ ಕಟ್ಟಿಡ್ತೀನಿ. ಈ ವರ್ಷದೊಳಗೆ ನನಗೆ ಮರಿ
ಗನನ್ನು ಕರುಣಿಸಪ್ಪಾ ನಂಜುಂಡೇಶ್ವರ ಅಂತ.."

"ನಾವು ಗಿರಿಜಾಕಲ್ಯಾಣೋತ್ಸವವನ್ನು ಮಾಡಿಸೋಣ. ಅಪ್ಪನ ಆತುರಕ್ಕೆ ಮದುವೆ
ಡಿದೆವು. ಲಗ್ನ ಮುಹೂರ್ತ ಸರಿಯಾಗಿತ್ತೋ ಇಲ್ಲವೋ..." ತಾಯಿ-ಮಗಳು ರಾಜಿ
ಡಿಕೊಂಡು ದೇವರ ಮೊರೆ ಹೊಕ್ಕರು.

ಭಾಸ್ಕರನ ಚಿಂತೆಯೇ ಬೇರೆ. ಮೊದಲಿಗೆ ನಂಜನಗೂಡು ಬೇಸರವಾಗ
ಡಗಿತ್ತು. ತಾನು ಮಾಡುತ್ತಿದ್ದ ಕೆಲಸದಲ್ಲಿ ತೃಪ್ತಿ ಇರಲಿಲ್ಲ. ಸಂಪಾದನೆ ಯಾತಕ್ಕೂ
ದು ಎಂಬ ಧೋರಣೆ ಬೇರೆ. ಬೆಂಗಳೂರಿಗೆ ಹೋಗಿ ಕೆಲಸಕ್ಕೆ ಸೇರಬೇಕೆಂದು
ಸುತ್ತಿದ್ದ. ಮೊದಲು, ತಂದೆ ಖಾಯಿಲೆ ಮಲಗಿದ್ದಾಗ, ಆಗಿರಲಿಲ್ಲ. ಈಗ ಮನೆಯಲ್ಲಿ
ಹೆಂಗಸರೇ. ಹೋದರೆ ಎಲ್ಲರೂ ಹೋಗಬೇಕು. ಎಲ್ಲರೂ ಈ ಮನೆಯವರೇ
ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದ್ದಾಗ, ಅವನು ಹೋಗುತ್ತಿದ್ದ ಕಂಪೆನಿಯನ್ನು ಮುಚ್ಚಿಬಿಟ್ಟರು.
ರ ಮತ್ತೆ ನಿರುದ್ಯೋಗಿಯಾದ. ಮನೆಯ ವಾತಾವರಣವೇ ಸರಿ ಎನಿಸುತ್ತಿರಲಿಲ್ಲ.
ರೂ ಬೆಂಗಳೂರಿನಲ್ಲಿಯೇ ಕೆಲಸವನ್ನು ಹುಡುಕುತ್ತಿದ್ದ. ಆಗ ಅವನ ಪರಿಚಯ
ನಿಂದ ಭಾರ್ಗವನ ಜಾಗ ಖಾಲಿಯಾಗಿರುವುದು ತಿಳಿದು, ಮಧುಕರನನ್ನು

ಭೆಟ್ಟಿಯಾದ. ಮಧು ಅವನ ಅನುಭವಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಆ ಜಾಗ
ತುಂಬಿಕೊಂಡ.

ಭಾಸ್ಕರ ತಾಯಿಯನ್ನು ಒಪ್ಪಿಸಿ ಬೆಂಗಳೂರಿಗೆ ಬಂದ. ಶನಿವಾರದ ದಿನ ಹೋಗಿ
ಸೋಮವಾರದ ಬೆಳಿಗ್ಗೆ ವಾಪಸ್ಸು ಬಂದುಬಿಡುತ್ತಿದ್ದ. ಆ ಎರಡು ರಾತ್ರಿಯೂ ಒಮ್ಮೊಮ್ಮೆ
ಅವನಿಗೆ ಬೇಸರವೆನಿಸುತ್ತಿತ್ತು. ತಾಯಿ-ಮಗಳ ವಾಗ್ವಾದ, ಹೆಂಡತಿಯ ಸೋಮಾರಿತನ
ಅನನಿಗೆ ಜಿಗುಪ್ಸೆಯನ್ನುಂಟುಮಾಡುತ್ತಿತ್ತು. ಈ ಜನ್ಮದಲ್ಲಿ ಇವರುಗಳನ್ನು ಬದಲಾಯಿಸಲು
ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದ. ಇದರ ಜೊತೆಗೆ ಆಗಾಗ್ಗೆ ''ಮನೆ
ಸಿಕ್ಕಿತೇನೋ... ಹೆಂಡತಿಯನ್ನು ಯಾವಾಗ ಕರೆಸಿಕೊಳ್ತೀಯ'' ಎಂದು ಕೇಳುವ ತಾಯಿ

''ಅಮ್ಮಾ... ಇಷ್ಟು ಬೇಗ ಬೆಂಗಳೂರಿನಲ್ಲಿ ಮನೆ ಸಿಗಲ್ಲ. ಪ್ರತೀವಾರ ನಾನೆ
ಬರ್ತೀನಲ್ಲ. ನಿಮ್ಮಗಳಿಗೆಲ್ಲಾ ಇದೇ ಊರು ಸರಿ. ಇಲ್ಲೇ ಇರಿ. ಅಲ್ಲಿಗೆ ಬಂದರೆ ನಿಮಗ
ಸರಿಹೋಗಲ್ಲ.'' ಒಪ್ಪಿಸುವಂತೆ ನುಡಿಯುತ್ತಿದ್ದ.

''ಯಾಕೆ ಸರಿ ಹೋಗಲ್ಲ? ಅದೂ ಊರೇ. ನಾವೂ ಮನುಷ್ಯರೇ.''

''ಏನು ಮನುಷ್ಯರೋ... ಹಳ್ಳೀಗೊಡ್ಡುಗಳು.'' ಸ್ವಲ್ಪ ಜೋರಾಗಿಯೆ
ಗೊಣಗಿದ್ದ. ಅಕ್ಕ ತಕ್ಷಣ ನುಡಿದಳು.

''ನೋಡಿದ್ಯೇನಮ್ಮ ನಿನ್ನ ಮಗನ ದೊಡ್ಡ ಸ್ಥಿಕೇನಾ? ಅವನು ಹುಟ್ಟಿ ಬೆಳೆದಿದ
ಇಲ್ಲೇ... ನಮ್ಮ ಜೊತೆಯಲ್ಲೇ... ಈಗ ಇದು ಹಳ್ಳಿ... ನಾವು ಗೊಡ್ಡುಗಳು...''

''ಮತ್ತಿನ್ನೇನು? ಅಲ್ಲಿ ಬಂದು ನೋಡಿ. ನೀವುಗಳು ಮ್ಯೂಸಿಯಂನಲ್ಲಿ ಇಟ್ಟಿರುವ
ವಿಚಿತ್ರ ಪ್ರಾಣಿಗಳಂತೆ ನೋಡ್ತಾರೆ ನಿಮ್ಮನ್ನ...''

''ಹೌದಪ್ಪಾ ಹೌದು. ನಾವು ವಿಚಿತ್ರಪ್ರಾಣಿಗಳೇ. ನಿನ್ನ ತಲೆ ತಿರುಗಿಹೋಗಿದೆ
ಅಮ್ಮ ಹುಶಾರಾಗಿಮ್ಮ... ಇನ್ನು ನಿನ್ನ ಮಗ ಕೈ ಬಿಟ್ಟ ಹಾಗೇನೇ...''

''ಸುಮ್ಮನಿರೇ ಏನೇನೋ ಆಡಬೇಡ. ಗಂಡುಹುಡುಗ, ಸಂಪಾದಿಸ್ತಾನೆ. ದೊಡ
ಷಹರು ಮನಸ್ಸಿಗೆ ಆಕರ್ಷಕವಾಗಿ ಕಂಡಿದೆ. ಕ್ರಮೇಣ ಅದೂ ಬೇಜಾರಾಗುತ್ತೆ
ವಯಸ್ಸಾಗ್ತಾ ಆಗ್ತಾ ಜ್ಞಾನೋದಯವಾಗುತ್ತೆ.''

''ನಿನ್ನ ಮಗನಿಗೆ ಜ್ಞಾನೋದಯವಾಗುವ ಹೊತ್ತಿಗೆ, ನಾನೂ ನೀನೂ ಇಬ್ಬರು
ಬದುಕಿರೋಲ್ಲ. ಭಾರತಿ ಮುದುಕಿಯಾಗಿರುತ್ತಾಳೆ. ಏನು ಪ್ರಯೋಜನ?''

''ನನ್ನ ಮರಿಮಗನ ಮುಖವನ್ನು ನೋಡದೇ ಇಲ್ಲಿಂದ ಕದಲುವವಳಲ್ಲ. ನೀನ
ನಿನ್ನ ಮಗಳ ಬಾಣಂತನವನ್ನು ಮಾಡಬೇಡವೇ...?''

''ನನ್ನ ಮಗಳು ಗೊಡ್ಡು ಹೆಂಗಸಾಗಿಯೇ ಉಳಿದುಬಿಡ್ತಾಳೆ ಅನ್ನೋ ಸಂಶಯ
ಬಂದಿದೆ ನನಗೆ. ನಿನಗಾದ್ರೂ ಇನ್ನೊಂದೆರಡು ಗಂಡುಮಕ್ಕಳು ಇರಬಾರದಾಗಿತ್ತೇ. ನಿ
ವಂಶ ಇಲ್ಲಿಗೇ ನಿಂತು ಹೋಗುತ್ತಲ್ಲ...'' ಹೆದರಿಸಿದಳು.

"ನೀವಿಬ್ರೂ ಸ್ವಲ್ಪ ಸುಮ್ಮನಿರ್ತೀರಾ? ವಂಶವಂತೆ ವಂಶ... ದೊಡ್ಡ ರಾಜವಂಶ! ರಾಜ್ಯ ಆಳೋಕೆ ವಾರಸುದಾರ ಬೇರೆ ಬೇಕಾ? ಬೇಕಾದ್ರೆ ಒಂದು ಮಗೂನ ದತ್ತು ತೆಗೆದುಕೊಂಡು ಸಾಕಿಕೊಳ್ಳಿ. ನನಗೆ ಈ ಹೆಂಡತಿ, ಮಕ್ಕಳು, ಈ ಸಂಸಾರದಲ್ಲಿ ಯಾವ ಆಸಕ್ತಿಯೂ ಇಲ್ಲ." ಭಾಸ್ಕರ ಕಿರುಚಿದ.

ತಾಯಿ ಮಗಳು ತೆಪ್ಪಗಾದರು. ಇರೋನೊಬ್ಬ ಮಗ. ಹೀಗಾಡಿದರೆ ಏನು ಗತಿ ಎಂದು ಆಕೆಗೆ ಚಿಂತೆ. ಮಗಳನ್ನು ತಮ್ಮನಿಗೇ ಕೊಟ್ಟು ಅವಳ ಬಾಳು ಹಾಳು ಮಾಡಿದೆನೇನೋ ಎಂಬ ಕೊರಗು ಅಕ್ಕನಿಗೆ. ಯಾವ ಚಿಂತೆಯೂ ಇಲ್ಲದೇ ಭಾರತಿ ಟಿ.ವಿಯ ಎದುರಿಗೆ ಕುಳಿತು ನಗುತ್ತಿದ್ದಳು.

* * * *

ಮೊಟ್ಟ ಮೊದಲಬಾರಿಗೆ ಮಾಲಾಳನ್ನು ಅವನು ಕಂಡಾಗ ಅವನಿಗೆ ತಂಗಾಳಿ ಬೀಸಿದಂತಾಗಿತ್ತು. ಎಂಥಾ ಮನೋಹರವಾದ ರೂಪ... ಎಂಥಾ ಆಕರ್ಷಣೆ... ಹೆಣ್ಣು ಎಂದರೆ ಹೀಗಿರಬೇಕು ಎಂದುಕೊಂಡಿದ್ದ. ಆದರೆ ಅವಳು ಪರಸ್ತ್ರೀ. ಅವಳನ್ನು ತಾನು ಹಾಗೆ ನೋಡುವುದೇ ಸರಿಯಲ್ಲ ಅಂತಂದುಕೊಂಡು ಮನಸ್ಸನ್ನು ಬಿಗಿ ಹಿಡಿದ. ಮನಸ್ಸು ದಿಕ್ಕು ತಪ್ಪಿದ ಕುದುರೆಯಂತೆ. ಕಡಿವಾಣವಿಲ್ಲದಿದ್ದರೆ ಅದು ಓಡುತ್ತಲೇ ಇರುತ್ತದೆ.

ಕೆಲವೇ ದಿನಗಳಲ್ಲಿ ಮಾಲಾ ಸ್ನೇಹಿತೆಯಾದಳು. ಆತ್ಮೀಯಳಾದಳು. ಅವಳ ಒಡನಾಟ ಆಪ್ಯಾಯಮಾನವೆನಿಸತೊಡಗಿತ್ತು. ಅವಳ ಹಿತಮಿತವಾದ ಅಲಂಕಾರ, ಅವಳ ವೇಷಭೂಷಣ ಎಲ್ಲಾ ನಯನ ಮನೋಹರವಾಗಿ ಕಾಣಲಾರಂಭಿಸಿತು. ಆದರೆ, ಮಾಲಾ ಬಾಸ್‌ನ ತಂಗಿ, ಮದುವೆಯಾದವಳು ಅಂತ ನೆನಪಾದಾಗ, ಮನಸ್ಸಿಗೆ ಮೋಡ ಕವಿದಂತಾಗಿತ್ತು. ಆದರೆ ಅವಳು ಮದುವೆಯಾದವಳಂತೆ ಅಥವಾ ಅಣ್ಣನಿಗೆ ಹೆದರುವ ತಂಗಿಯಂತೆ ವರ್ತಿಸಿದರೇ, ಫ್ರೀಯಾಗಿ ತನಗಿಷ್ಟ ಬಂದಂತೆ ಮಾತನಾಡುವ, ವರ್ತಿಸುವ ಸ್ವಭಾವದವಳು ಅಂತ ತಿಳಿದಾಗ, ಒಂದು ತರಹ ನೆಮ್ಮದಿ ಉಂಟಾಗಿತ್ತು.

* * * *

ಎಲ್ಲರೂ ಒಟ್ಟಿಗೇ ಊಟಕ್ಕೆ ಕುಳಿತರೂ, ಒಬ್ಬರಿಗೊಬ್ಬರು ಏನಾದರೂ ಕೇಳಲು ಹಿಂಜರಿಯುತ್ತಿದ್ದರು. ಮಾತನ್ನು ಹೇಗೆ ಪ್ರಾರಂಭಿಸಬೇಕೆಂದು ಗೊತ್ತಾಗಿರಲಿಲ್ಲ, ಪ್ರತಾಪನಿಗೆ ಧ್ರುವನ ಚಿಂತೆ. ಧ್ರುವ ಇವಳನ್ನು ಮದುವೆಯಾಗಿಯೂ ಹ್ಯಾಪಿಯಾಗಿಲ್ಲ, ಇವಳಿಗೋ ಗಂಡನ ಮೇಲೆ ಯಾವ ಆಸಕ್ತಿಯೂ ಇಲ್ಲ, ಇನ್ನು ಎಚ್.ಐ.ವಿ. ವೈರಸ್ ಪೀಡಿತ ಅಂತ ತಿಳಿದ್ರೆ ಅವನನ್ನು ನೇರವಾಗಿ ನೋಡಲೂ ಹೆದರಬಹುದು, ಕಾಲಕಸ ಮಾಡಬಹುದು. ಈ ವಿಷಯವನ್ನು ಧ್ರುವನಿಗೆ ಹೇಳುವುದು ಹೇಗೆ ? ಹೇಳದೇ ಇರುವುದು ಹೇಗೆ?

ಧ್ರುವ ಮಾಲಾಳ ಬಗ್ಗೆ ಚಿಂತಿಸುತ್ತಿದ್ದ. ನಾನು ಅವಳ ಪತಿ. ನನ್ನ ಮೇಲೆ ಪ್ರೀತಿ, ಗೌರವ ಒಂದೂ ಇಲ್ಲ. ಎಲ್ಲಾ ರೀತಿಯಿಂದಲೂ ಒಲಿಸಿಕೊಳ್ಳಲು ನೋಡಿದ್ದಾಯಿತು. ಭಾವನೆಗಳ ಕೆತ್ತನೆಯೇ ಇಲ್ಲದ ಗುಂಡುಕಲ್ಲು. ಆದರೆ ಈಗೀಗ ಅವಳ ಮುಖದ ಕಳೆ ಬದಲಾಗಿದೆ. ಆಫೀಸಿಗೆ ಹೋಗಲಾರಂಭಿಸಿದ ಮೇಲೆ, ತನ್ನಿಂದಲೇ ಎಲ್ಲಾ ಅನ್ನೋ ಗರ್ವ ಇರಬಹುದು. ನನ್ನನ್ನಂತೂ ಮಾತನಾಡಿಸುವುದಿರಲಿ, ನೋಡಲೂ ಇಷ್ಟಪಡುವುದಿಲ್ಲ. ಹೀಗೇ ಮುಂದುವರೆದರೆ, ನಾನ್ಯಾರೋ ಅವಳ್ಯಾರೋ ಎಂಬಂತೆ ಅಪರಿಚಿತರಾಗಿಬಿಡುತ್ತೇವೆ. ಹಾಗಾಗದಂತೆ ಯಾವುದಾದರೂ ಬಲವಾದ ಉಪಾಯವನ್ನು ಹುಡುಕಬೇಕು.

ಈ ಧ್ರುವನಿಂದ ನನಗೆಂದು ಬಿಡುಗಡೆಯೋ. ಭಾರ್ಗವನೂ ಕೈಕೊಟ್ಟ. ಅವನಿಗಾಗಿ ನಾನು ಈ ಧ್ರುವನ ಮುಖವನ್ನು ದಿನಾ ನೋಡಬೇಕಾಯ್ತು. ಯಾರನ್ನೂ ನೋಡುವುದು ಬೇಡ, ಮಾತನಾಡಿಸುವುದೂ ಬೇಡ ಅಂತ ಅನ್ನಿಸುತ್ತೆ. ಭಾರ್ಗವ ಒಬ್ಬ ನನಗೆ ಸಪೋರ್ಟ್ ಆಗಿದ್ದಿದ್ರೆ... ಅವನ ಆದರ್ಶ, ಅವನ ಧರ್ಮ ಅವನಿಗೇ ಸರಿ. ನನಗಂತೂ ಲಾಭವಾಗಲಿಲ್ಲ. ಮೊದಲು ಇವರುಗಳು ಇಲ್ಲಿಂದ ತೊಲಗಲಿ. ನಂತರ ಏನು ಮಾಡಬೇಕೆಂದು ಯೋಚಿಸಿ ಒಂದು ತೀರ್ಮಾನಕ್ಕೆ ಬರುತ್ತೀನಿ. ಈಗ ವಸುಧಾ ಸಹ ನನಗೆ ಕೈ ಕೊಡುತ್ತಿರುವಂತಿದೆ. ಈ ಮನೆಗೆ ಬಂದು ಸೇರಿಕೊಳ್ಳೋಕೆ ಒಂದು ಮಾರ್ಗ ಬೇಕಿತ್ತು, ಅದು ನನ್ನಿಂದ ಸಿಕ್ಕಿತು. ಈಗ ನಾನ್ಯಾಕೆ. ಇರಲಿ, ವಸುಧಾ ನನಗೆ ಸಹಾಯಕಳಾಗಿಲ್ಲದಿದ್ದರೆ ಏನಾಯ್ತು? ಈಗ ನನಗೆ ಹೊಸ ಸ್ನೇಹಿತನೊಬ್ಬ ಸಿಕ್ಕಿದ್ದಾನೆ. ನಾನಿನ್ನೂ ನನ್ನ ಕಥೆಯ ವ್ಯಥೆಯನ್ನು ಅವನೊಂದಿಗೆ ಹೇಳಿಕೊಂಡಿಲ್ಲ. ಹೇಳಿದರೆ ನನಗೆ ಸಹಾಯ ಮಾಡುವುದು ಖಂಡಿತಾ. ಇಂತಹ ವಿಷಯಗಳಲ್ಲಿ ಮನೆಯವರನ್ನು ನಂಬಬಾರದು. ಹೊರಗಿನವರೇ ಲೇಸು... ಮಾಲಾ ಭಾಸ್ಕರನ ಬಗ್ಗೆ ಚಿಂತಿಸುತ್ತಿದ್ದಳು.

*     *     *     *

''ಈಚೆಗೆ ಯಾಕೋ ಸರಿಯಾಗಿ ಊಟ ಸೇರುತ್ತಿಲ್ಲ. ತಿಂದಿದ್ದು ವಾಂತಿಯಾಗುತ್ತಿದೆ. ತಲೆಸುತ್ತು, ಬಳಲಿಕೆ'' ಎಂದು ಅಡಿಗೆಯಾಕೆಯೊಡನೆ ಹೇಳಿಕೊಂಡಾಗ, ಆಕೆ ವಸುಧಾಳಿಗೆ ಧೈರ್ಯ ಹೇಳಿದ್ದಳು. ''ಇದೆಲ್ಲ ಶುಭ ಸಮಾಚಾರದ ಮುನ್ಸೂಚನೆ. ನೀವೇನೂ ಗಾಬರಿಗೊಳ್ಳಬೇಡಿ. ನಿಮ್ಮವರ ಜೊತೆ ಡಾಕ್ಟರರ ಬಳಿಗೆ ಹೋಗಿ ತೋರಿಸಿಕೊಂಡು ಬನ್ನಿ'' ಎಂದು ಸಲಹ ನೀಡಿದ್ದಳು. ವಸುಧಾ ಸಂಕೋಚ, ಸಂತೋಷಗಳಿಂದ ಉದ್ವೇಗಗೊಂಡಿದ್ದಳು. ಡಾಕ್ಟರು ಕನ್‌ಫರ್ಮ್ ಮಾಡುವವರೆಗೂ ಯಾರಿಗೂ ತಿಳಿಸುವುದು ಬೇಡ ಎಂದುಕೊಂಡಿದ್ದರೂ ಮಧುಕರನಿಗೆ ಹೇಳಿದ್ದಳು.

''ನನ್ನ ಹೆಲ್ತ್ ಸರಿಯಾಗಿಲ್ಲ. ಏನೇನೋ ಆಗಿದೆ. ಅದಕ್ಕೆಲ್ಲ ನೀವೇ ಕಾರಣ'' ಎಂದಿದ್ದಳು ನಗುತ್ತಾ.

''ಚೆನ್ನಾಯ್ತು. ನಾನೇನ್ಮಾಡ್ದೆ. ನಿನಗೆ ಸುಖ ಹೆಚ್ಚಾಯ್ತು. ಮಾಡೋಕೆ ಕೆಲಸವಿಲ್ಲ,

ತಿಂದಿದ್ದು ಜೀರ್ಣವಾಗಿಲ್ಲ. ವಾಕಿಂಗ್ ಹೋಗು ಎಲ್ಲಾ ಸರಿ ಹೋಗುತ್ತೆ'' ಎಂದಿದ್ದ. ಅವಳು ಸಿಟ್ಟಿನಿಂದ ಅವನನ್ನು ದೂರ ತಳ್ಳಿದ್ದಳು.

ಇದನ್ನೆಲ್ಲ ಮಾಲಾಳ ಬಳಿ ಹೇಳಿಕೊಳ್ಳುವಂತಿಲ್ಲ. ಮದುವೆಯಾಗಿದ್ದರೂ ಅವಳಿನ್ನೂ ಕುಮಾರಿಯೇ. ಈ ಸುದ್ದಿ ಅವಳಲ್ಲಿ ಅಸೂಯೆಯನ್ನು ಮೂಡಿಸುತ್ತದೆಯೋ, ಅಸಹ್ಯವನ್ನು ತುಂಬುತ್ತದೆಯೋ ಹೇಳಲಾಗುವುದಿಲ್ಲ. ಧ್ರುವ, ಪ್ರತಾಪ ಇವರುಗಳ ಎದುರಿಗೆ ಏನೇನು ಮಾತುಗಳು ಹೊರಬಂದು, ನೆಮ್ಮದಿ ಕೆಡುತ್ತದೋ ಎಂದು ಹೆದರಿ ಸುಮ್ಮನಿದ್ದೇನೆ. ಇವರುಗಳು ಹೊರಡಲಿ, ಈ ರಾತ್ರಿಯೇ ನಾನು ಅಮ್ಮನ ಮನೆಗೆ ಹೋಗಿ ಒಂದು ವಾರ ಹಾಯಾಗಿದ್ದು ಬರ್ತೀನಿ ಎಂದು ತನ್ನಲ್ಲೇ ಹೇಳಿಕೊಳ್ಳುತ್ತಿದ್ದಳು ವಸುಧಾ.

ಎಲ್ರೂ ಅವರವರ ಪಾಡಿಗೆ ಕೈಗೆ ಬಾಯಿಗೆ ಕಸರತ್ತು ಕೊಡುತ್ತಿದಾರೆ. ವಸೂಗೆ ಗಂಡ, ಮಾಲಾಳಿಗೆ ಅಣ್ಣ, ಧ್ರುವನಿಗೆ ಭಾವಮೈದ, ಸ್ನೇಹಿತ, ಬಿಸಿನೆಸ್ ಪಾರ್ಟನರ್, ಈ ಪ್ರತಾಪ ಒಬ್ಬನೇ ಅಳಿಯನ ಜೊತೆ ಗೆಳೆಯ ಅನ್ನುವಂತೆ, ನಾಚಿಕೆ ಇಲ್ಲದೇ ಈ ಧ್ರುವನ ಜೊತೆ ಇರುತ್ತಾನೆ. ಪರರ ಮನೆ, ಇಲ್ಲಿ ಇಬ್ಬಿಬ್ಬರು ಯುವತಿಯರು ಅವನಿಗೆ ಹೀನಾಯವೆನ್ನಿಸುವುದಿಲ್ಲವೇ ? ಈ ಪ್ರತಾಪನ ಸಹವಾಸವನ್ನು ಬಿಡು ಎಂದು ಧ್ರುವನಿಗೆ ಹೇಗೆ ಹೇಳುವುದು? ಮಧು ಪ್ರತಾಪನನ್ನೇ ದುರುಗುಟ್ಟಿಕೊಂಡು ನೋಡಿದ.

ಊಟ ಮುಗಿದಿತ್ತು. ಎಲ್ಲರೂ ಎದ್ದು ಕೈ ತೊಳೆದರು. ಎಲ್ಲರೂ ಭಟ್ಟರನ್ನು ಮರೆತೇ ಬಿಟ್ಟಿದ್ದರು. ನೆನಪಿಸಿಕೊಳ್ಳಲು ಯಾರಿಗೂ ಬಿಡುವೇ ಇಲ್ಲ. ಹೊಸ ಅಡಿಗೆಯವರ ಕೈಯ ರುಚಿಗೆ ಒಗ್ಗಿಕೊಂಡಿದ್ದರು.

ವಸು ತಿಂದಿದ್ದನ್ನೆಲ್ಲಾ ಕಕ್ಕಿ ಸುಸ್ತಾಗಿ ಕುಳಿತಾಗ ಮಧು ನಿಜಕ್ಕೂ ಗಾಬರಿಯಾದ. ಮಾಲಾಳನ್ನು ಕರೆದ. ''ನೋಡು ನಿನ್ನ ಅತ್ತಿಗೆ ಯಾಕೋ ಸುಸ್ತಾಗಿ ಮಲಗಿಬಿಟ್ಟಿದ್ದಾಳೆ. ನೀನು ಅವಳ ಜೊತೇನೇ ಇರು. ಏರ್‌ಪೋರ್ಟ್‌ಗೇನೂ ಬರಬೇಡ. ನಾನು ಧ್ರುವನಿಗೆ ಹೇಳ್ತೀನಿ.''

ಮಾಲಾ ಕುಣಿಯುವುದೊಂದೇ ಬಾಕಿ. ಅಷ್ಟು ಖುಷಿಯಾಗಿತ್ತು. ''ಥ್ಯಾಂಕ್ಯೂ ವಸುಧಾ. ಸದ್ಯ ಏರ್‌ಪೋರ್ಟ್‌ಗೆ ಹೋಗುವುದನ್ನು ತಪ್ಪಿಸಿದೆಯಲ್ಲ''

''ಅವಳು ಹುಷಾರಿಲ್ಲದೇ ವಾಂತಿ ಮಾಡಿಕೊಂಡು ಸುಸ್ತಾಗಿದಾಳೆ. ನೀನು ಖುಷಿ ಪಡ್ತಿದೀಯಲ್ಲ''

''ಅವಳು ಮೊದಲು ನನ್ನ ಸ್ನೇಹಿತೆ, ನಂತರ ನನ್ನ ಅತ್ತಿಗೆ, ಆಮೇಲೆ ನಿನ್ನ ಹೆಂಡತಿ. ನೀನು ಸುಮ್ಮನೇ ಹೋಗಿ ಅವರಿಬ್ಬರನ್ನೂ ಪ್ಲೇನ್ ಹತ್ತಿಸಿ ಬಾ. ಸುಮ್ಮನೇ ನನ್ನನ್ನು ಕೆರಳಿಸಬೇಡ.''

''ಈಗ ಹೊತ್ತಾಗ್ತಿದೆ. ಆಮೇಲೆ ಬಂದು ನಿನ್ನನ್ನು ವಿಚಾರಿಸಿಕೊಳ್ತೀನಿ.'' ಅವನತ್ತ ಹೋದ ಕೂಡಲೇ ಮಾಲಾ ಚಪ್ಪಾಳೆ ತಟ್ಟಿ ನಕ್ಕಳು. ವಸುಧಾಳನ್ನು ತಬ್ಬಿಕೊಂಡು ಕೆನ್ನೆಗೆ ಮುತ್ತಿಟ್ಟಳು. ವಸುಧಾ ಮುಖ ಕಿವುಚಿದಳು.

''ಏನಾಯ್ತೇ... ನಿನಗೆ. ಯಾಕೆ ಇಷ್ಟು ಕೆಟ್ಟ ಮುಖ ಮಾಡ್ತಿದೀಯ... ಅಥವಾ ನನ್ನ ಮುತ್ತು ಅಸಹ್ಯವಾಗಿತ್ತೋ...''

''ಹಾಗಲ್ಲ ಮಾಲಾ... ಯಾಕೋ ಹೀಗೇ ಎರಡು ತಿಂಗಳಿನಿಂದ ಆಗ್ತಾ ಇದೆ. ನನ್ನ ಹೆಲ್ತ್ ಸರಿಯಾಗಿಲ್ಲ''

''ನನಗೇಕೆ ಮೊದಲೇ ಹೇಳಲಿಲ್ಲ. ಡಾಕ್ಟರಿಗೆ ಫೋನು ಮಾಡ್ತೀನಿ ತಡೀ'' ಎನ್ನುತ್ತಾ ಫೋನು ಮಾಡಿಯೇ ಬಿಟ್ಟಳು. ಡಾಕ್ಟರು ಬಂದು ಪರೀಕ್ಷಿಸಿ ವಸುಧಾ ಗರ್ಭಿಣಿಯಾಗಿದ್ದಾಳೆನ್ನುವುದನ್ನು ಖಚಿತಗೊಳಿಸಿದ್ದರು. ಕೆಲವು ಔಷಧಿಗಳನ್ನು ಬರೆದುಕೊಟ್ಟು ಸೂಕ್ತ ಸಲಹೆಗಳನ್ನು ಕೊಟ್ಟರು. ಅವರು ಅತ್ತ ಹೋದ ಕೂಡಲೇ ಮಾಲಾ ವಸುಧಾಳ ಕೈಹಿಡಿದು ಕೂತಳು. ಭಯದಿಂದ ಕಣ್ಣುಗಳು ಅರಳಿದ್ದವು.

''ಏನಂತೆ? ಡಾಕ್ಟರು ಏನಂದ್ರು?''

''ನಿಜ ಹೇಳಲೋ ಸುಳ್ಳು ಹೇಳಲೋ...'' ತಮಾಷೆಯಾಗಿ ನಕ್ಕಳು.

''ನನ್ನ ಎದೆ ಢವ ಢವ ಅಂತಿದೆ. ನಗ್ತೀಯಲ್ಲ. ಏನಂದ್ರು ಡಾಕ್ಟರು?''

''ಏನೂ ಗಾಬರಿಯಿಲ್ಲ. ಹುಶಾರಾಗಿದೀಯ ಅಂತಂದ್ರು'' ನಾಚಿಕೆಯಿಂದ ಕೆಂಪಾಗಿದ್ದಳು. ಮಾಲಾಳಿಗೆ ಹೇಗೆ ಹೇಳುವುದೆಂದು ಚಿಂತಿಸುತ್ತಿದ್ದಳು.

''ಮಾಲಾ, ನನ್ನ ಮೇಲೆ ಕೋಪ ಮಾಡ್ಕೊಳ್ಳಲ್ಲ ತಾನೇ?''

''ಕೋಪ ಯಾಕೆ? ನನಗಂತೂ ಖುಷಿಯಾಗಿದೆ... ಸದ್ಯ ಏರ್‌ಪೋರ್ಟ್‌ಗೆ ಹೋಗೋದು ತಪ್ಪಿತಲ್ಲ'' ಅದಲ್ಲ ಎಂದು ಹೇಳಹೊರಟವಳು ಸುಮ್ಮನಾಗಿದ್ದಳು.

''ನೀನು ರೆಸ್ಟ್ ತಗೋ... ನಾನು ಆಫೀಸಿಗೆ ಹೋಗಿ ಬರ್ತೀನಿ...''

''ಇಷ್ಟು ಹೊತ್ತಾದ ಮೇಲೆ ಏನು ಹೋಗೋದು... ನಿನ್ನ ಅಣ್ಣ ನನ್ನನ್ನು ಬೈತಾರೆ ಅಷ್ಟೆ''

''ಬೈದರೆ ಬೈತಾನೆ. ನೀನೂ ಬೈದುಬಿಡು. ಅವನಿಗೇಕೆ ಕೇರ್ ಮಾಡ್ತೀಯ?''

''ಕೇರ್ ಮಾಡಬೇಕಾಗುತ್ತೆ ಮಾಲಾ. ಕೇರ್ ಮಾಡಬೇಕಾಗುತ್ತದೆ ಕೆಲವು ಸಲ ಇಂತಹ ಬಂಧನಕ್ಕೆ ಸಿಕ್ಕಿಹಾಕಿಕೊಳ್ತೀವಿ ಆಗ ಕೇರ್ ಮಾಡಲೇಬೇಕಾಗುತ್ತೆ''

''ಇದು ನೀನಾಗಿಯೇ ಮಾಡಿಕೊಂಡ ಬಂಧನ. ನಾನು ಬೇಡಾಂತ ಅಂದೆ. ನನ್ನ ಮಾತನ್ನು ಕೇಳಲಿಲ್ಲ. ಏನಿತ್ತು ಅಂಥಾ ಅಟ್ರಾಕ್ಷನ್ ಇವನಲ್ಲಿ...?''

''ನೀನು ಭಾರ್ಗವನಿಗೋಸ್ಕರ, ಧ್ರುವನ್ನ ಮದುವೆಯಾದೆ. ನಾನು ನಿನಗೋಸ್ಕರ ನಿನ್ನ ಅಣ್ಣನನ್ನು ಮದುವೆಯಾದೆ. ಆದರೆ ಭಾರ್ಗವ ನಿನ್ನ ಬಾಳಿನಲ್ಲಿ ಮತ್ತೆ ಬರಲಾರ... ಹಾಗೇ ನಾನು ಮತ್ತೆ ಹಿಂದಕ್ಕೆ ಹೋಗಲಾರೆ...''

''ನಿನಗೆ ಹೋಗಬೇಕೆನಿಸಿದ್ದರೆ ಹೋಗು ವಸುಧಾ... ನೀನೂ ಹೊರಟು ಹೋದರೆ ನಾನು ಒಂಟಿಯಾಗಿ ಬಿಡ್ತೀನಿ... ಅದು ಮಾತ್ರ ಬೇಜಾರು''

"ಇದನ್ನೇ ನಾನು ಬಂಧನ ಅಂತ ಅಂದದ್ದು."

"ಹೇ ಕಳ್ಳಿ... ನನ್ನನೆವ ಹೇಳಬೇಡ. ನಿನಗೂ ನನ್ನ ಅಣ್ಣನ ಸಹವಾಸ ಬೇಕಾಗಿದೆ ಅಲ್ವಾ... ನಿಜ ಹೇಳು..." ಕೆನ್ನೆ ಹಿಂಡಿದಳು.

"ಹೂಂ..." ವಸು ನಾಚಿಕೆಯಿಂದ ಒಪ್ಪಿಕೊಂಡಳು.

* * * *

ಮೂರು ನಾಲ್ಕು ತಿಂಗಳು ಕಳೆಯುವಷ್ಟರಲ್ಲಿ ವಸುಧಾ ಗರ್ಭಿಣಿಯೆಂದು ನೋಡಿದವರು ಧಾರಾಳವಾಗಿ ಹೇಳಬಹುದಾಗಿತ್ತು. "ಇದೇನೇ ನಿನ್ನ ಹೊಟ್ಟೆ ಹೀಗೆ ಉಬ್ಬರಿಸಿಕೊಂಡಿದೆ. ಡಾಕ್ಟರ ಹತ್ತಿರ ಹೋಗಲೇ ಇಲ್ಲವಾ?" ಮಧು ಆಕ್ಷೇಪಿಸಿದ್ದ.

"ಹೊಟ್ಟೆ ಮೇಲೆ ಕೈ ಇಟ್ಟು ನೋಡಿ. ನಿಮಗೇ ಗೊತ್ತಾಗುತ್ತೆ ಯಾಕೆ ಉಬ್ಬಿದೆ ಅಂತ" ಅವನ ಕೈಯನ್ನು ತನ್ನ ಹೊಟ್ಟೆಯ ಮೇಲಿರಿಸಿಕೊಂಡಳು.

"ಇಂಥಾ ಡೈಲಾಗ್, ಇಂಥ ಸೀನ್‌ಗಳನ್ನು ಟಿ.ವೀಲಿ ಪ್ರಸಾರ ಮಾಡ್ತಾರೆ. ಇದು ಯಾವ ಸೀರಿಯಲ್‌ನ ಡೈಲಾಗ್?"

"ಥೂ ನೀವೊಬ್ರು... ನೀವು ಯಾವ ಸೀರಿಯಲ್‌ನ್ನೂ ನೋಡೋರೇ ಅಲ್ಲ. ಆದರೆ ರೊಮ್ಯಾಂಟಿಕ್ ಸೀನ್‌ನ ನೋಡಿರ್ತೀರಿ ಅಂತಾಯ್ತು"

"ಹಾಗೇ ಅಂದ್ಕೋ. ಈಗ ಬೆಡ್‌ರೂಂನಲ್ಲಿ ನಾವಿಬ್ರೇ ಇದೀವಿ. ಮುಚ್ಚುಮರೆ ಏನಿಲ್ಲ. ಏನೂಂತ ನೀನೇ ಹೇಳಿಬಿಡು. ಹೊಟ್ಟೆಯೊಳಗೆ ಏನಿದೆ ಅಂತ."

"ಪುಟಾಣಿ ಪಾಪು" ಅವನ ಎದೆಗೊರಗಿದಳು. ಅವಳ ಕತ್ತನ್ನು ಎತ್ತಿದ.

"ವಸು ಇಷ್ಟು ಬೇಗ ನಮಗೆ ಮಗು ಬೇಕಿಲ್ಲ. ತೆಗೆಸಿಬಿಡು" ಮಧು ಕಠೋರವಾಗಿ ನುಡಿದಿದ್ದ. ಅವಳು ಅವನಿಂದ ದೂರ ಸರಿದಳು.

"ಈಗಲೇ ಮಗು ಬೇಡವಾಗಿದ್ದರೆ ನನ್ನಿಂದ ದೂರವಿರಬೇಕಾಗಿತ್ತು. ಈಗ ಬೇಡ ಅಂದ್ರೆ. ನಾನಿದಕ್ಕೆ ಒಪ್ಪಲ್ಲ"

"ಮಗು ಹುಟ್ಟಿಬಿಟ್ಟರೆ ನಾವು ಬೇಗ ಮುದುಕರಾಗಿಬಿಡ್ತೀವಿ. ನಮಗೆ ಪ್ರೈವೆಸಿಯೇ ಇರಲ್ಲ. ಜವಾಬ್ದಾರಿ ಹೆಚ್ಚುತ್ತೆ ಅದಕ್ಕೇ ಹೇಳಿದೆ."

"ಇದನ್ನೆಲ್ಲಾ ಮುಂಚೇನೇ ಯೋಚಿಸಬೇಕಾಗಿತ್ತು. ನೀವಂತೂ ಹಾಯಾಗಿದೀರಿ. ಎಲ್ಲಾ ಅನುಭವಿಸುತ್ತಾ ಇರೋಳು ನಾನು" ಮುಖ ಊದಿಸಿದಳು.

"ಅದಕ್ಕೇ ಹೇಳಿದ್ದು, ಈ ಕಷ್ಟವೆಲ್ಲಾ ಯಾಕೆ? ಕ್ಲಿಯರ್ ಮಾಡಿಸ್ಕೋ..."

"ಆ ಕಷ್ಟವೂ ನನಗೇ... ಇರಲಿ ಬಿಡಿ. ನನ್ನ ಮಗೂನ ನಾನೇ ಹೊರುತ್ತೀನಿ. ನಾನೇ ಹೆರುತ್ತೀನಿ"

"ಆ ಮಗು ನಿನ್ನದಲ್ಲ, ನನ್ನದೂ ಕೂಡಾ ನೆನಪಿರಲಿ..."

''ಜವಾಬ್ದಾರಿ ಬೇಡ, ಕ್ರೆಡಿಟ್ ಮಾತ್ರ ಬೇಕು ಅಂದ್ರೆ... ಈ ಮಗು ನನ್ನದು. ನಾನೇ ಸಾಕಿ ಬೆಳೆಸ್ತೀನಿ. ನಾನು ನಾಳೇನೇ ನನ್ನ ತಂದೆ ಮನೆಗೆ ಹೊರಟುಹೋಗ್ತೀನಿ. ಮತ್ತೆಂದೂ ಬರಲ್ಲ'' ಅವಳು ಅಳತೊಡಗಿದಾಗ ಅವನು ಸಮಾಧಾನ ಹೇಳಲಿಲ್ಲ, ಮುಸುಕೆಳೆದು ಮಲಗಿದ. ಇಷ್ಟು ಬೇಗ ನನ್ನ ಗಂಡನಿಗೆ ನನ್ನ ಮೇಲೆ ಬೇಸರ ಬಂತೆ? ಈ ಮಗು ಹುಟ್ಟುವ ಮೊದಲೇ ನಮ್ಮಿಬ್ಬರಲ್ಲಿ ಬಿರುಕನ್ನು ಮೂಡಿಸಿತಲ್ಲ. ಈಗ ಏನು ಮಾಡಲಿ? ಗಂಡನ ಮಾತನ್ನು ಕೇಳಿದರೆ, ಮಗು ಇಲ್ಲವಾಗುತ್ತದೆ. ಕೇಳದಿದ್ದರೆ ಇವನಿಂದ ದೂರವಿರ ಬೇಕಾಗುತ್ತದೆ. ಯಾವುದು ಸರಿ? ಉತ್ತರ ತಿಳಿಯದೇ ಹೊರಳಾಡಿದಳು. ಮಾಲಾ ಹೇಳುವುದು ಸರಿ. ಮಧುಕರ ಯಾವ ಮಟ್ಟಕ್ಕೆ ಬೇಕಾದರೂ ಇಳಿಯಬಲ್ಲ, ಇವನು ನೆಟ್ಟಗಾಗುವುದು ಸಾಧ್ಯವಿಲ್ಲ. ಹಾಗೇನಾದರೂ ತಿದ್ದಿಕೊಂಡರೆ, ಒನಕೆ ಚಿಗುರು ಒಡೆದಂತೆ... ನಿಟ್ಟುಸಿರುಬಿಟ್ಟಳು.

* * * *

''ಮಾಲಾ, ನಾನು ನಾಲ್ಕು ದಿನ ಅಮ್ಮನ ಮನೆಯಲ್ಲಿ ಇದ್ದು ಬರ್ತೀನಿ'' ವಸುಧಾ ಹೇಳಿದಾಗ ಮಾಲಾ ಕೆಟ್ಟ ಮುಖ ಮಾಡಿದಳು.

''ಯಾಕೇ. ನನ್ನಿಂದ ಏನಾದ್ರೂ ಬೇಸರವಾಯ್ತಾ?''

''ಛೇ... ಅದಕ್ಕಲ್ಲ, ನನಗೆ ಸ್ವಲ್ಪ ರೆಸ್ಟ್ ಬೇಕು. ಡಾಕ್ಟರು ಹೇಳಿದಾರೆ. ಅದಕ್ಕೇ ಇದ್ದು ಬರ್ತೀನಿ.''

''ನಾನೂ ನಿನ್ನ ಜೊತೆಗೆ ಬಂದು ಬಿಡ್ತೀನಿ.''

''ಬರೋದಾದ್ರೆ ಬಾ. ಆದರೆ ನಿನ್ನ ಅಣ್ಣನಿಗೆ ಸರಿಯಾಗಿ ಹೇಳಿಬಿಟ್ಟು ಬಾ. ಯದ್ವಾತದ್ವಾ ಮಾತಾಡ್ತಾರೆ ನಿಮ್ಮ ಅಣ್ಣ''

''ಅವನು ಹಾಗೆಯೇ... ಅಂದ ಹಾಗೆ ನಿನ್ನ ಹೆಲ್ತ್ ಈಗ ಹೇಗಿದೆ? ಹೊಟ್ಟೆ ಯಾಕೆ ಇಷ್ಟು ದಪ್ಪವಾಗಿದೆ'' ಕಣ್ಣರಳಿಸಿದಳು.

''ಪ್ಲೀಸ್... ಹಾಗೆ ಕೇಳಬೇಡ ನನಗೆ ಗಾಬರಿಯಾಗುತ್ತೆ...''

''ಏನಾಗಿದೆ ಅಂತ ನನಗೂ ಹೇಳಬಾರದಾ?''

''ಹೇಳ್ತೀವಿ. ಆದರೆ ನೀನು ಏನಂದುಕೊಳ್ತೀಯೋ ಅಂತ?'' ಕೆಂಪಾಗಿದ್ದಳು.

''ನಾನೇಕೆ ಏನಾದ್ರೂ ಅಂದುಕೊಳ್ಳಲಿ. ಅದು ನಿನ್ನ ಹೊಟ್ಟೆ, ನಾನು ಏನೂ ಅಂದ್ಕೊಳಲ್ಲ, ಪ್ರಾಮಿಸ್'' ಅವಸರಿಸಿದಳು.

''ನಾನು ಪ್ರೆಗ್ನೆಂಟ್'' ಅವಳ ಮುಖವನ್ನೇ ನೋಡುತ್ತಾ ಹೇಳಿದಳು. ಒಂದು ಗಳಿಗೆ, ಅಸೂಯೆಯ ರೇಖೆಯೊಂದು ಮೂಡಿ ಮಾಯವಾಯ್ತು. ಅದು ವಸುಧಾಳ ಗಮನಕ್ಕೂ ಬಂತು. ''ನನಗಿಂತ ಮೊದಲು ನಿನಗೆ ಮದುವೆಯಾಯ್ತು... ನಿನಗೆ ಇಲ್ಲದ ಸುಖವನ್ನು

ನಾನು ಅನುಭವಿಸಿದೀನಿ. ಅದರ ಫಲ ಇದು. ನನಗೂ ಮುಜುಗರ, ಸಂಕೋಚ ನಿನಗೆ ಹೇಳಕ್ಕೆ...'' ಗಳಿಗೆಯಲ್ಲಿ ಮಾಲಾ ಸರಿಮಾಡಿಕೊಂಡಳು. ''ಓ ಕಮಾನ್ ವಸುಧಾ... ನಾನು ಆಪ್ತ ಸ್ನೇಹಿತೆ. ನನ್ನ ಹತ್ತಿರ ಏನು ಸಂಕೋಚ. ಯಾಕೆ ಮುಜುಗರ... ಎನಿವೇ ಕಂಗ್ರಾಟ್ಸ್'' ಸ್ನೇಹಿತೆಯನ್ನು ತಬ್ಬಿಕೊಂಡಳು.

''ನೀವು ಗಂಡ ಹೆಂಡತಿ ಒಟ್ಟಿಗೆ ಮಲಗಿಲ್ಲ ಅಂತ ತಿಳಿದೂ ನಾನು ಪ್ರೆಗ್ನೆಂಟ್ ಅಂತ ಹೇಗೆ ಹೇಳಲಿ?''

''ಮಧೂಗೆ ಈ ವಿಷಯ ಗೊತ್ತಾ? ಅವನೇನಂದ?''

''ನಿಮ್ಮಣ್ಣ ಇಷ್ಟು ಕ್ರೂರಿ ಅಂತ ನಾನು ಅಂದುಕೊಂಡಿರಲಿಲ್ಲ. ಅವರಿಗೆ ಈಗಲೇ ಮಗು ಬೇಡವಂತೆ. ಜವಾಬ್ದಾರಿ ಬೇಡವಂತೆ. ಅಬಾರ್ಷನ್ ಮಾಡಿಸ್ಕೋ ಅಂತಂದ್ರು''

''ನನಗೆ ಗೊತ್ತಿತ್ತು. ಭಾವನೆಗಳೇ ಇಲ್ಲದ ಪಶು ಅವನು. ಅವನ ಮಾತಿಗೆ ಒಪ್ಪಬೇಡ... ಇದು ನಿನ್ನ ಮಗೂ ಸಹ. ನೀನು ನಿನ್ನ ಮಗುವಿಗೆ ಜನ್ಮ ಕೊಡು. ಸಾಕಿ ಬೆಳೆಸಿ ಪೋಷಿಸು. ನಾನು ನಿನಗೆ ಸಹಾಯ ಮಾಡುತ್ತೇನೆ.''

''ಅದಕ್ಕೇ ನಾನು ನನ್ನ ತಾಯಿಯ ಮನೆಗೆ ಹೋಗ್ತಾ ಇರೋದು. ಈಗ ನಿನ್ನ ಮಾತಿನಿಂದ ಇನ್ನೂ ಧೈರ್ಯ ಬಂತು. ಬಹುಶಃ ಈ ಮನೆಗೆ ಮತ್ತೆ ಬರುತ್ತೀನೋ ಇಲ್ಲವೋ...'' ವಸುಧಾಳ ಕಣ್ಣಿನಲ್ಲಿ ನೀರು ಇಳಿಯಿತು.

''ನನ್ನ ಸ್ನೇಹಿತೆಯಾಗಿ ಹೀಗೆಲ್ಲಾ ಮಾತನಾಡಬೇಡ. ಈ ಮನೆಯಲ್ಲಿ ನಿನಗೂ ಹಕ್ಕಿದೆ. ನಾನು ನಿನಗೆ ಸಪೋರ್ಟ್ ಮಾಡ್ತೀನಿ'' ವಿಶ್ವಾಸದಿಂದ ಕೈಗಳನ್ನು ಅದುಮಿದಳು.

''ನಡೀ... ನಾನು ನಿನ್ನನ್ನು ಬಿಟ್ಟು ಬರ್ತೀನಿ. ಒಬ್ಬಳೇ ಹೋಗಬೇಡ''

''ಹಾಗಾದ್ರೆ ನೀನು ಅಲ್ಲಿಗೆ ಬರಲ್ವಾ?''

''ನಾನು ಅಲ್ಲಿದ್ದರೆ ಇಲ್ಲಿ ಮಧೂಗೆ ಬುದ್ಧಿ ಕಲಿಸೋರು ಯಾರು?''

''ಬೇಡ ಮಾಲಾ. ಈ ವಿಷಯದ ಬಗ್ಗೆ ನೀವು ಜಗಳ ಆಡಬೇಡಿ''

''ಓ...ಕೇ. ನಾಲ್ಕು ದಿನ ಸುಮ್ಮನಿರ್ತೀನಿ. ಅವನಾಗಿಯೇ ನಿನ್ನನ್ನು ವಾಪಸ್ಸು ಕರೆದುಕೊಂಡು ಬರಬೇಕು. ಇಲ್ಲದಿದ್ದರೆ ನಾನು ಸುಮ್ಮನಿರೊಲ್ಲ'' ಎನ್ನುತ್ತಾ ಅವಳೊಡನೆ ಹೊರಟಳು.

* * * *

ರಾತ್ರಿ ಊಟಕ್ಕೆ ಕುಳಿತಾಗ ವಸುಧಾ ಇಲ್ಲದುದು ಅವನ ಗಮನಕ್ಕೆ ಬಂತು. ''ವಸುಧಾ ಎಲ್ಲಿ? ಮಲಗಿದಾಳಾ?'' ಕೇಳಿದ.

''ಇಲ್ಲ, ತವರು ಮನೆಗೆ ಹೋಗಿದಾಳೆ'' ಓ ಎಂದುಕೊಂಡು ಅವನು ಸುಮ್ಮನಾದ. ಇವಳೂ ಸುಮ್ಮನಾಗಿಬಿಟ್ಟಳು. ಮಲಗುವ ವೇಳೆಗೆ ಅವಳ ರೂಮಿನ ಬಳಿಗೆ ಬಂದ.

''ನಾನು ನಾಡಿದ್ದು ಬಾಂಬೆಗೆ ಹೋಗ್ತಾ ಇದೀನಿ. ನೀನೂ ಬರೋದಾದ್ರೆ ಬಾ''

''ನಾನು ಬರಲ್ಲ ಅಂತ ಗೊತ್ತಿದ್ರೂ ಕೇಳ್ತೀಯಲ್ಲ''

''ಇಲ್ಲಿ ಒಬ್ಬಳೇ ಇರಬೇಕಾಗುತ್ತಲ್ಲ ಅದಕ್ಕೇ ಕೇಳಿದೆ. ಅಲ್ಲದೇ ಅದೂ ನೀನು ಹೋಗದೇ ಇರುವ ಮನೆಯಲ್ಲ''

''ನನಗೇನೂ ಭಯವಿಲ್ಲ. ಅಡಿಗೆಯವರು ಇರ್ತಾರೆ. ಎರಡು ದಿನಗಳು ಹೇಗೋ ಕಳೆಯುತ್ತೆ.''

''ಹಾಗಾದ್ರೆ ವಸೂಗೆ ಬಾ ಅಂತ ಫೋನು ಮಾಡು...''

''ಇಲ್ಲ, ನಾನು ಹೇಳಲ್ಲ. ಅವಳು ರೆಸ್ಟ್ ಬೇಕು ಅಂತ ಹೋಗಿದಾಳೆ. ಅವಳು ಬರಲೇ ಬೇಕೂಂತ ಇದ್ದರೆ ನೀನೇ ಹೇಳು, ನನಗೆ ಹೇಳಬೇಡ.''

''ಹಾಗಾದ್ರೆ ನೀನೇ ಹೋಗಿ ಅವಳ ಮನೇಲಿರು. ಇಲ್ಲಿ ಒಬ್ಬಳೇ ಇರಬೇಡ. ಅಡಿಗೆಯವರು ಹೊಸಬರು. ಭಟ್ಟರಂತಲ್ಲ...''

''ಅದೇನು ಭಟ್ಟರನ್ನು ನೆನೆಪಿಸಿಕೊಳ್ತಿದೀಯ... ಅಂದ್ರೆ ನಿನಗೂ ಹೃದಯ ಇದೆ ಅಂತಾಯ್ತು''

''ಷಟಪ್. ಹೇಳಿದಷ್ಟನ್ನು ಕೇಳು. ಏನಾದ್ರೂ ಹೆಚ್ಚು ಕಡಿಮೆ ಆದರೆ ನನಗೆ ಗೊತ್ತಿಲ್ಲ''

''ಏನೂ ಹೆಚ್ಚು ಕಡಿಮೆ ಆಗಲ್ಲ. ನೀನು ಭಯ ಪಡಬೇಡ. ಅಥವಾ ನಿನಗೆ ನನ್ನ ಮೇಲೆ ನಂಬಿಕೆ ಇಲ್ಲದಿದ್ದರೆ ಹೇಳು...''

''ವಿಪರೀತ ಮಾತನಾಡ್ತೀಯ ನೀನು. ಏನೋ ನನಗನ್ನಿಸಿದ್ದನ್ನು ಹೇಳಿದೆ. ಇನ್ನು ನಿನ್ನ ಇಷ್ಟ, ಏನಾದ್ರೂ ಮಾಡ್ಕೋ...'' ಅವಳ ಮೇಲೆ ರೇಗಿದ್ದ. ಅವನ ಹಿಂದೆ ಅವಳು ಶಬ್ದ ಮಾಡದೇ ನಕ್ಕಳು. ''ನಿನಗೆ ಭಾರ್ಗವ ಎಲ್ಲಿ ಬಂದುಬಿಡುತ್ತಾನೋ ಅನ್ನುವ ಅನುಮಾನ ನನಗೆ ಗೊತ್ತು. ಆದರೆ ಅವನು ಎಲ್ಲಿದಾನೆ ಅಂತ ನನಗೆ ಗೊತ್ತಿಲ್ಲವಲ್ಲ'' ತನ್ನಲ್ಲೇ ಪೇಚಾಡಿಕೊಂಡಳು.

ಬೆಳಿಗ್ಗೆ ಆಫೀಸಿಗೆ ಹೊರಡುವ ಮುನ್ನ ಮರೆಯದೇ ವಸುಧಾಳಿಗೆ ಫೋನು ಮಾಡಿ, ಅವಳ ಹೆಲ್ತ್ ಬಗ್ಗೆ ವಿಚಾರಿಸಿದಳು. ಹಾಗೇ ತಮ್ಮಿಬ್ಬರ ನಡುವೆ ನಡೆದ ಮಾತುಗಳನ್ನೂ ತಿಳಿಸಿದಳು.

''ಹಾಗಾದ್ರೆ ನಾನು ನಾಳೇನೇ ಬಂದು ಬಿಡ್ತೀನಿ. ಒಬ್ಬಳೇ ಮಾತ್ರ ಇರಬೇಡ'' ಅವಳೂ ಹೇಳಿದ್ದಳು.

''ಏನೂ ಬೇಡ. ನನಗೆ ಏನೂ ಆಗಲ್ಲ. ಒಂದು ವೇಳೆ ಬೋರ್ ಅನ್ನಿಸಿದರೆ ನಾನು ಅಲ್ಲಿಗೇ ಬರ್ತೀನಿ. ನೀನು ಬರಕೂಡದು'' ಎಂದು ಹೇಳಿದ್ದಳು.

* * * *

ಆಫೀಸಿನ ವೇಳೆ ಮುಗಿದರೂ ಮನೆಗೆ ಹೊರಡುವ ಆತುರವನ್ನು ತೋರದೇ ಕುಳಿತಿದ್ದ ಮಾಲಾಳನ್ನು ಭಾಸ್ಕರ ಆಗಾಗ್ಗೆ ನೋಡುತ್ತಿದ್ದ. ಯಾವುದೋ ಕತೆಯನ್ನು ಓದುವವಳಂತೆ ಗಂಭೀರವಾಗಿ ಫೈಲನ್ನು ನೋಡುತ್ತಿದ್ದಳು. ಅವನಿಗೆ ನಗು ಬಂದಿತ್ತು.

''ಮೇಡಂ, ಮನೆಗೆ ಹೋಗಲ್ವಾ?'' ಕೇಳಿದ.

''ಹೋದರಾಯ್ತು... ನನ್ನಿಂದ ನಿಮಗೆ ತೊಂದರೆ ಆಗ್ತಿದೆಯಾ?''

''ಛೆ...ಛೆ... ಕಾಫಿ ತರಿಸ್ಲಾ ಕ್ಯಾಂಟೀನಿನಿಂದ.''

''ಷೂರ್. ತುಂಬಾ ತಲೆ ನೋಯ್ತಾ ಇದೆ. ಮನೇಲಿ ಅತ್ತಿಗೇನೂ ಇಲ್ಲ. ಇಲ್ಲಿಯೇ ಕುಡಿದು ಮನೆಗೆ ಹೋಗುವುದು ಒಳ್ಳೆಯದು.''

''ಒಂದು ಮಾತು ಕೇಳಲಾ! ಆ ಫೈಲಿನ ಕೆಲಸ ಮುಗಿದಿದ್ರೆ, ಯಾವುದಾದರೂ ರೆಸ್ಟೋರೆಂಟ್‌ಗೆ ಹೋಗಿ ತಿಂಡಿ, ಕಾಫಿ ಎರಡನ್ನೂ ತಗೊಳ್ಳೋಣ. ನನಗೆ ಹಸಿವೂ ಆಗ್ತಿದೆ...''

''ಲಂಚ್ ತಿಂದಿದ್ರಲ್ಲ... ಆದರೂ ಹಸಿವಾ?'' ನಕ್ಕಳು.

''ಇವತ್ಯಾಕೋ ಆ ಮೆಸ್‌ನ ಊಟ ಚೆನ್ನಾಗಿರಲಿಲ್ಲ. ಸೇರಲೇ ಇಲ್ಲ''

''ಈಗ ಹೇಳ್ತಿದೀರಲ್ಲ ಭಾಸ್ಕರ್... ಸರಿ ನಡೀರಿ'' ಎನ್ನುತ್ತಾ ಹ್ಯಾಂಡ್‌ಬ್ಯಾಗ್‌ನ್ನೆತ್ತಿ ಕೊಂಡು ಜಡೆಯನ್ನು ಹಿಂದಕ್ಕೆ ಎಸೆಯುತ್ತಾ ಎದ್ದಳು. ಅವನು ಅವಳನ್ನೇ ಪದೇ ಪದೇ ನೋಡಿದ.

''ಏನಾಯ್ತುರೀ... ಹೀಗೆ ನೋಡ್ತಿದೀರಿ... ಮೊದಲ ಬಾರಿ ನೋಡೋರ ತರಹ...''

''ಎಷ್ಟು ಸಾರಿ ನೋಡಿದರೂ ನಿಮ್ಮನ್ನು ಮೊದಲ ದಿನ ನೋಡಿದ್ದೇ ನೆನಪಿಗೆ ಬರುತ್ತೆ.''

''ನಿಮ್ಮ ಎದುರಿಗೆ ನಾನು ನರ್ವಸ್ ಆಗಿರಲಿಲ್ಲ, ಬೆಬೆಬೆ ಅನ್ನಲಿಲ್ಲ ಅಲ್ವಾ?'' ಆ ದಿನವನ್ನು ಅವಳೂ ನೆನಪಿಸಿಕೊಂಡಳು.

''ಆ ದಿನ ನಿಮ್ಮ ಉದ್ದವಾದ ಜಡೆಯನ್ನು ಪದೇಪದೇ ನೋಡಿದ್ದೆ''

''ಎಲ್ಲರಿಗೂ ನನಗಿಂತ ನನ್ನ ಜಡೆಯ ಮೇಲೇ ಕಣ್ಣು.. ನನಗಿಂತ ನನ್ನ ಜಡೆ ಸುಂದರವಾಗಿದೆಯಾ?''

''ಆ ಜಡೆಗೆ ಸುಂದರತೆ ನಿಮ್ಮಿಂದ, ನಿಮಗೆ ಮೋಹಕತೆ ಈ ಜಡೆಯಿಂದ''

''ಸಾಕು... ಸಾಕು... ಕವಿಗಳಾಗಬೇಡಿ. ನನಗೆ ಮೊದಲು ಕಾಫಿ, ನಿಮಗೆ ಮೊದಲು ತಿಂಡಿ.... ಆಮೇಲೆ ಮಾತುಕತೆಯನ್ನು ಮುಂದುವರೆಸೋಣ'' ಅವಳ ಜೊತೆಯಲ್ಲಿ ನಡೆದುಹೋಗುವುದೇ ಒಂದು ಹೆಚ್ಚುಗಾರಿಕೆ ಎನ್ನುವಂತೆ ಭಾಸ್ಕರ

ಹೆಮ್ಮೆಯಿಂದ ಹೆಜ್ಜೆ ಹಾಕಿದ. ಮಾಲಾ ಸಹ ಯಾವ ಅಳುಕು, ಸಂಕೋಚಗಳಿಲ್ಲದೆ ದಿಟ್ಟ ಹೆಜ್ಜೆಗಳನ್ನಿಡುತ್ತಾ ಅವನ ಪಕ್ಕದಲ್ಲಿ ನಡೆದಳು.

ಮಸಾಲೆದೋಸೆಯನ್ನು ತಿಂದು ಕಾಫಿಯನ್ನು ಕುಡಿದು ಮಾತಿಗೆ ಪ್ರಾರಂಭಿಸಿದ ಭಾಸ್ಕರ. ''ಐಸ್‌ಕ್ರೀಂ ತಿನ್ತೀರಾ ಮಾಲಾ...''

''ಬೇಡಪ್ಪಾ... ಚಿಕ್ಕವಯಸ್ಸಿನಲ್ಲಿ ಬೇಕಾದಷ್ಟು ತಿಂದಾಗಿದೆ. ಈಗ ಕಾಫೀನೇ ಇಷ್ಟವಾಗುತ್ತೆ. ಟೆನ್ಷನ್ ರಿಲೀಸ್ ಆಗುತ್ತೆ...''

''ನಿಮಗೆಂತಹ ಟೆನ್ಷನ್... ಹಾಯಾಗಿ ಹಕ್ಕಿಯ ತರಹ ಇದೀರಾ...''

''ಹಕ್ಕಿ ಅನ್ನುತ್ಲು ನೆನಪಿಗೆ ಬಂತು. ನೀವು ರಂಗನತಿಟ್ಟು ನೋಡಿದೀರಾ?''

''ಬೇಕಾದಷ್ಟು ಸಲ ನೋಡಿದೀನಿ. ಹಕ್ಕಿಯ ಹಾರಾಟ ದೂರದಿಂದ ನೋಡಿ ಆನಂದಪಟ್ಟಿದೀನಿ. ಹತ್ತಿರದಿಂದ ಮೊಸಳೆಯನ್ನು ನೋಡಿ ಹೆದರಿದೀನಿ.''

''ಮೊಸಳೆ ಇದೆಯಾ?''

''ಬೇಕಾದಷ್ಟು... ಬೋಟಿಂಗ್‌ನಲ್ಲಿ ಹೋಗುವಾಗ ಬಾಯಿ ತೆರೆದು ಮೊಸಳೆ ಎಲ್ಲಿ ತಿಂದುಬಿಡುತ್ತೋ ಅಂತ ಭಯವಾಗ್ತಾ ಇರುತ್ತೆ...''

''ನಿಮಗೂ ಭಯ ಆಗುತ್ತಾ?''

''ಯಾಕೆ ನಾನು ಮನುಷ್ಯ ಅಲ್ವಾ? ನನಗೂ ಪ್ರಾಣಭಯವಿದೆ.''

''ಭಯದಲ್ಲಿ ಅನೇಕ ವಿಧಗಳಿವೆ. ಯಾವುದಕ್ಕೂ ಭಯ ಪಡದೇ ಇರೋರನ್ನ ಕಂಡರೆ ನನಗೆ ಇಷ್ಟ.''

''ಹಾಗಾದ್ರೆ ನಿಮಗೆ ನನ್ನನ್ನ ಕಂಡರೆ ಇಷ್ಟವಿಲ್ಲ ಅಂತಾಯ್ತು. ನಿಮಗೆ ಜಿರಲೆ, ಕಪ್ಪೆ ಯಾವುದನ್ನು ಕಂಡರೂ ಭಯವಿಲ್ವಾ?...''

''ಜಿರಲೆ ! ಕಪ್ಪೆ!! ಹಾಗಂದ್ರೇನು?''

''ಜಿರಲೆ ಗೊತ್ತಿಲ್ವಾ! ನಿಮ್ಮ ಅಡಿಗೆ ಮನೇಲಿ ಜಿರಲೇನೇ ಇಲ್ವಾ?''

''ನಮ್ಮ ಅಡಿಗೆಮನೇಲಿ ಅಡಿಗೆಯವರು ಇದಾರೆ. ಆಕೆ ಕಪ್ಪೆ ತರಹ ವಟಗುಟ್ಟುತ್ತಾನೇ ಇರ್ತಾರೆ. ಇವತ್ತು ರಾತ್ರಿ ಅವರದ್ದೇ ಕಂಪೆನಿ ನನಗೆ. ರಾತ್ರಿಯೆಲ್ಲಾ ನಿದ್ದೆ ಮಾಡೋಕೆ ಬಿಡ್ತಾರೋ ಇಲ್ಲವೋ...'' ಭಾಸ್ಕರ ಮುಕ್ತವಾಗಿ ನಕ್ಕ.

''ತುಂಬಾ ತಮಾಷೆಯಾಗಿ ಮಾತನಾಡ್ತೀರಿ ನೀವು'' ಮೆಚ್ಚಿಗೆಯ ನೋಟವನ್ನು ಬೀರಿದ. ಅವಳು ನಸುನಕ್ಕಳು.

''ಮತ್ತೇನು ಮಾಡಲಿ? ನನ್ನನ್ನು ನಾನು ಅಮ್ಯೂಸ್ ಮಾಡಿಕೊಳ್ಳಬೇಕಲ್ಲ''

''ನಿಮ್ಮ ಹತ್ತಿರ ಮಾತನಾಡುತ್ತಿದ್ದರೆ ಸಮಯ ಹೋಗೋದೇ ತಿಳಿಯಲ್ಲ. ಗಂಟೆ ಏಳಾಗ್ತಾ ಬಂದಿದೆ.''

''ನಾನು ಇವತ್ತು ಮನೆಗೆ ನಿಧಾನವಾಗಿ ಹೋದರೂ ಪರವಾಗಿಲ್ಲ. ಅತ್ತಿಗೆಯೂ ಇಲ್ಲ, ತವರಿಗೆ ಹೋಗಿದ್ದಾಳೆ.''

''ಒಬ್ಬರೇ ಹೇಗಿರ್ತೀರಿ? ಬೇಜಾರಾಗಲ್ವಾ?...''

''ಹೋಗ್ತಾ ಹಾಗೇ ಅತ್ತಿಗೆಯ ಮನೆಗೆ ಹೋಗಿ ಅವಳನ್ನು ಮಾತನಾಡಿಸಿಕೊಂಡು ಹೋಗ್ತೀನಿ''

''ನಾನು ಡ್ರಾಪ್ ಕೊಡ್ಲಾ...''

''ಬೇಡ ಥ್ಯಾಂಕ್ಸ್. ಡ್ರೈವರ್ ಕಾಯ್ತಾ ಇರ್ತಾನೆ. ದೋಸೆ, ಕಾಫಿ ಎಲ್ಲಾ ತುಂಬಾ ಚೆನ್ನಾಗಿತ್ತು. ತುಂಬಾ ಥ್ಯಾಂಕ್ಸ್''

''ಮೈ ಪ್ಲೆಷರ್...'' ಇಬ್ಬರೂ ಮತ್ತೆ ಆಫೀಸಿನ ಕಡೆ ಹೆಜ್ಜೆ ಹಾಕಿದರು. ಅಲ್ಲೆಲ್ಲೂ ಡ್ರೈವರ್ ಕಾಣಲಿಲ್ಲ. ಅವನು ಮನೆಗೆ ಹೋದನೆಂದು ವಾಚ್‌ಮನ್ ಹೇಳಿದಾಗ ಮಾಲಾ ಹಲ್ಲು ಕಡಿದಳು.

''ಒಳ್ಳೇದೇ ಆಯ್ತು. ನಾನು ಡ್ರಾಪ್ ಕೊಡ್ತೀನಿ'' ಎನ್ನುತ್ತಾ ಭಾಸ್ಕರ ಬೈಕ್ ಸ್ಟಾರ್ಟ್ ಮಾಡಿದ. ಮಾಲಾ ಹಿಂದಿನ ಸೀಟನ್ನೇರಿದಳು. ''ಬೀಳುವ ಹಾಗಿದ್ರೆ ನನ್ನನ್ನು ಹಿಡಿದುಕೊಳ್ಳಿ ಏನೂ ಪರವಾಗಿಲ್ಲ'' ನಗುತ್ತಾ ನುಡಿದ. ಅವಳು ಅವನ ಭುಜದ ಮೇಲೆ ಕೈ ಇಟ್ಟಳು.

''ಈಗ ಸೀದಾ ಮನೆಗೇ ಹೋಗೋಣ. ಅತ್ತಿಗೆಯ ಮನೆಗೆ ಬೇಡ.''

''ಸರಿ ನಿಮ್ಮಿಷ್ಟ'' ಬೈಕ್ ಚಲಿಸಿತು.

ಮನೆಯ ಮುಂದೆ ಕಾರು ನಿಂತಿತ್ತು. ಡ್ರೈವರ್ ಇರಲಿಲ್ಲ. ಇವರಿಬ್ಬರನ್ನೂ ಕಂಡು ಅಡಿಗೆಯವಳ ಗಂಡ ಸಂಕೋಚದಿಂದ ಬಂದು ನಿಂತ.

''ಡ್ರೈವರ್ ಎಲ್ಲಿ?'' ಮಾಲಾ ಜಬರ್ದಸ್ತಿನಿಂದ ಕೇಳಿದಳು.

''ಅವನ ಹೆಂಡತಿಗೆ ಹುಶಾರಿಲ್ಲವಂತೆ. ಆಸ್ಪತ್ರೆಗೆ ಸೇರಿಸಿದಾರಂತೆ. ಆಗಲೇ ಮನೆಗೆ ಹೊರಟುಹೋದ.'' ಕಾರಿನ ಕೀಯನ್ನು ಅವಳ ಕೈಗಿತ್ತ.

''ಸಮಯದಲ್ಲಿ ಎಲ್ಲರೂ ಕೈ ಕೊಡುವವರೇ... ನಾನು ಡ್ರೈವಿಂಗ್ ಕಲಿತಿದ್ದರೆ ಚೆನ್ನಾಗಿತ್ತು. ನಿಮಗೆ ಕಾರ್ ಡ್ರೈವಿಂಗ್ ಲೈಸೆನ್ಸ್ ಇದೆಯಾ ಭಾಸ್ಕರ್...''

''ಇಲ್ಲ, ನನ್ನ ಹತ್ತಿರ ಕಾರು ಎಲ್ಲಿದೆ ? ಬರಲಾ ಮೇಡಂ...''

''ಮನೆಯ ತನಕ ಬಂದು, ಒಳಗೆ ಬರದೇ ಹೋಗ್ತೀರಾ? ಬನ್ನಿ ಹತ್ತು ನಿಮಿಷ ಕೂತು ಹೋಗೋರಂತೆ'' ಭಾಸ್ಕರ ಅವಳ ಹಿಂದೆ ಮನೆಯೊಳಗೆ ಬಂದ.

ಅಡಿಗೆಯವನು ಕಾಫಿ ತಂದಿತ್ತ. ಇಬ್ಬರೂ ಕಾಫಿ ಕುಡಿದರು. ಸ್ವಲ್ಪ ಹೊತ್ತಿನಲ್ಲೇ ಭಾಸ್ಕರ ಹೊರಟುಬಿಟ್ಟ. ಸ್ವಲ್ಪ ಹೊತ್ತಿನ ನಂತರ ಮಾಲಾಳಿಗೆ ಒಬ್ಬಳೇ ಇರುವುದು ಅಸಹನೀಯ ಎಂದೆನಿಸಿತು. ತಾನು ವಸುಧಾಳ ಮನೆಗೆ ಹೊರಟುಹೋಗಿದ್ದರೇ

ಚೆನ್ನಾಗಿತ್ತೆನಿಸಿತ್ತು. ಹೇಗೂ ಭಾಸ್ಕರ ಮನೆಯತನಕ ಬಂದಿದ್ದ, ಅವನನ್ನೇ ಈ ರಾತ್ರಿ ತನ್ನ ಮನೆಯಲ್ಲಿ ಇರಿಸಿಕೊಳ್ಳಬಹುದಾಗಿತ್ತು ಅಂತೆನಿಸಿತ್ತು. ಒಂದು ಕ್ಷಣ, ಆ ಆಲೋಚನೆ ಸರಿಯಲ್ಲ ಅಂತೆನಿಸಿದರೂ, ಅದರಲ್ಲಿ ತಪ್ಪೇನು ಅಂತಲೂ ಅನ್ನಿಸಿತು.

ನಾನು ಭಾಸ್ಕರ ಇಬ್ಬರೂ ಸ್ನೇಹಿತರು. ಸ್ನೇಹಿತನನ್ನು ಇಲ್ಲೇ ಇರು ಅಂತ ಹೇಳಿದರೆ ತಪ್ಪಾಗಲಾರದು ಅಂತಂದುಕೊಂಡರೂ, ಅವನು ಹೊರಟುಹೋಗಿದ್ದ. ಅಥವಾ ಅವನ ಜೊತೆಯೇ ತಾನೂ ಅವನ ಮನೆಗೆ ಹೋಗಿದ್ದಗೇ ಅಂತ ಅನ್ನಿಸಿದಾಗ ಏನೋ ಹಿಂಜರಿತವೂ ದನಿ ಹಾಡಿತು. ಈ ಆಲೋಚನೆ ಸರಿಯಲ್ಲ ಎಂದು ಮನಸ್ಸು ಚಿಟ್ಟೆಸ್ವರ ಹಾಡಿತು.

ಮನೆಯನ್ನು ತಲುಪುತ್ತಿದ್ದಂತೆಯೇ ಭಾಸ್ಕರ ಫೋನು ಮಾಡಿದ್ದ. ''ಮೇಡಂ ನಾನು ಒಂದು ವಿಷಯ ಕೇಳೋದನ್ನೇ ಮರೆತೆ. ನಾಳೆ ಬೆಳಿಗ್ಗೆ ಆಫೀಸಿಗೆ ಹೇಗೆ ಬರ್ತೀರಿ. ಡ್ರೈವರ್ ಇಲ್ಲವಲ್ಲ''

''ನೀವು ಬಂದು ಕರೆದುಕೊಂಡು ಹೋಗಿ'' ಸಲೀಸಾಗಿ ಹೇಳಿದಳು. ಮತ್ತೆ ಮಾತು ಸೇರಿಸಿದಳು. ''ಬೆಳಿಗ್ಗೆ ಬ್ರೇಕ್‌ಫಾಸ್ಟ್ ಹೊತ್ತಿಗೇ ಬಂದುಬಿಡಿ. ನನಗೆ ಕಂಪೆನಿ ಕೊಡೋರಂತೆ''

''ಓಕೇ ಮೇಡಂ...'' ಎಂದ.

''ರೀ ಭಾಸ್ಕರ್... ಮಾಲಾ ಅಂತ ಕರೀರಿ ಸಾಕು. ನಾನು ನಿಮಗೆ ಬಾಸ್ ಅಲ್ಲ. ಮೇಡಂ ಗೀಡಂ ನನಗೆ ಇಷ್ಟವಾಗಲ್ಲ. ಗುಡ್‌ನೈಟ್...''

''ಓ..ಕೇ. ಗುಡ್‌ನೈಟ್ ಮಾಲಾ...'' ಎಂದಿದ್ದ ನಿಧಾನವಾಗಿ. ಮಾಲಾ ನಸು ನಕ್ಕಳು. ಇವನೂ ಒಂಟಿ, ಬೇರೆ ಕೆಲಸವಿಲ್ಲ, ನನ್ನ ಬಗ್ಗೇನೆ ಯೋಚಿಸ್ತಿದಾನೆ ಅಂತಾಯ್ತು. ನನ್ನ ಬಗ್ಗೆ ನಾಳೆಯ ಚಿಂತೆ.

ಆ ರಾತ್ರಿ ಅವಳಿಗೆ ತಡವಾಗಿ ನಿದ್ದೆ ಬಂತು. ಅವಳಿಗೂ ನಾಳೆಯ ಚಿಂತೆ. ಹೇಗೂ ಮಧು ಊರಿನಲ್ಲಿಲ್ಲ, ಎಲ್ಲಾದರೂ ಹೊರಗೆ ತಿರುಗಾಡಿ ಬರಲು ಹೋದರೆ ಹೇಗೆ! ಅವನ ಜೊತೆ ಬೈಕ್‌ನಲ್ಲಿ ಓಡಾಡುವುದೇ ಒಂದು ಮಜಾ... ಬೆಳಿಗ್ಗೆ ಯಾವ ಸೀರೆ ಉಡಲಿ ! ಸೀರೆ ಬೇಡ ಚೂಡಿದಾರ್... ಯಾವ ಬಣ್ಣದ್ದು... ಅದಕ್ಕೆ ತಕ್ಕ ಒಡವೆ, ಅಲಂಕಾರ... ಉದ್ದನೆಯ ಜಡೆಗೆ ತುಂಬಾ ಹೂ ಮುಡಿದು... ಥೂ ಬೇಡ, ಜಡೆಯನ್ನು ಸುತ್ತಿ ಹೆರಳು ಹಾಕಿಕೊಂಡರೇ... ಸೀರೆಗೆ ಜಡೆ ಚೆನ್ನ. ಚೂಡಿದಾರ್‌ಗೆ ಜಡೆ ಚೆನ್ನಾಗಿರುಲ್ಲ. ಏನು ಮಾಡಲಿ? ಯಾವಾಗಲೋ ನಿದ್ದೆ ಬಂತು.

ಬೆಳಿಗ್ಗೆ ಭಾಸ್ಕರ ಬಂದ ಸಮಯದಲ್ಲಿ ಮಾಲಾ ಇನ್ನೂ ಮಲಗೇ ಇದ್ದಳು. ಅಡಿಗೆಯಾಕೆ ಬಂದು ಎಬ್ಬಿಸಿದರು. ''ನೆನ್ನೆ ರಾತ್ರಿ ಬಂದಿದ್ರಲ್ಲ, ಅವರು ಬಂದಿದಾರೆ'' ಮಾಲಾ ಚಟ್ಟನೆ ಎದ್ದಳು. ಕನ್ನಡಿಯ ಮುಂದೆ ನಿಂತು ತನ್ನನ್ನು ತಾನೇ ನೋಡಿಕೊಂಡು ಹಾಗೇ ಹೊರಗೆಬಂದಳು.

''ಗುಡ್‌ಮಾರ್ನಿಂಗ್ ಭಾಸ್ಕರ್'' ಭಾಸ್ಕರ ಇತ್ತ ತಿರುಗಿದ. ನೈಟಿಯಲ್ಲಿ ಮಾಲಾ ಪುಟ್ಟ ಹುಡುಗಿಯಂತೆ ಕಾಣುತ್ತಿದ್ದಳು. ಕೆದರಿದ ತಲೆಗೂದಲು, ನಿದ್ದೆಯ ಮಂಪರನ್ನು ತೋರುವ ಕಣ್ಣುಗಳು... ''ಗುಡ್ ಮಾರ್ನಿಂಗ್... ಈಗ ಎದ್ದಿರಾ?'' ಕೇಳಿದ.

''ಹೂ, ಹಾಳಾದ್ದು ರಾತ್ರಿ ನಿದ್ದೇನೇ ಬರಲಿಲ್ಲ. ಬೆಳಗಿನ ಝಾವದ ಹೊತ್ತಿಗೆ ನಿದ್ದೆ ಬಂತು. ಅದಕ್ಕೇ ಎಚ್ಚರವಾಗಲಿಲ್ಲ.''

''ರಾತ್ರಿ ಭಯ ಆಯ್ತಾ?...''

''ಭಯ? ಒಂದು ಚೂರೂ ಆಗಲಿಲ್ಲ. ನನಗೆ ಇಷ್ಟವಾದವರನ್ನು ನೆನೆಸುತ್ತಾ ಮಲಗಿದ್ದೆ, ಭಯವಾಗಲೇ ಇಲ್ಲ.''

''ಆ ಭಾಗ್ಯಶಾಲಿ ಯಾರು ಅಂತ ಕೇಳಬಹುದಾ?''

''ಈಗ ಬೇಡ ನಿಧಾನವಾಗಿ ಹೇಳ್ತೀನಿ. ಬನ್ನಿ ಬ್ರೇಕ್‌ಫಾಸ್ಟ್ ತಗೊಳ್ಳೋಣ.''

''ನಿಮ್ಮ ಸ್ನಾನ ಆಯ್ತಾ?''

''ಸ್ನಾನ, ಮಡಿ, ಎಂಜಲು, ಮುಸುರೆ ಒಂದೂ ನನಗೆ ತಿಳೀದು. ನಿಮಗೇನಾದರೂ ಅಬ್ಜೆಕ್ಷನ್...?''

''ಏನೂ ಇಲ್ಲ, ನನಗ್ಯಾಕೆ ಅಬ್ಜೆಕ್ಷನ್. ಅದು ಅವರವರ ಅಭ್ಯಾಸ...''

''ನಿಮ್ಮ ಅಭ್ಯಾಸ ಹೇಗೆ?''

''ಅದು ಒಂಥರ ಬೇರೆ ವಿಷಯ. ನಿಮಗ್ಯಾಕೆ ಬಿಡಿ...''

''ಇರಲಿ ಹೇಳೋರಂತೆ. ಮೊದಲು ಬ್ರೇಕ್‌ಫಾಸ್ಟ್..''

ಇಬ್ಬರೂ ಡೈನಿಂಗ್ ಟೇಬಲ್‌ನಲ್ಲಿ ಎದುರುಬದುರು ಕುಳಿತು, ಬಿಸಿಬಿಸಿ ಇಡ್ಲಿ ಚಟ್ನಿ ತಿಂದು, ಕಾಫಿ ಕುಡಿದರು.

''ಇಡ್ಲಿ ತುಂಬಾ ಚೆನ್ನಾಗಿತ್ತು'' ಹೊಗಳಿದ.

''ಈಕೆ ಅಡುಗೆ, ತಿಂಡಿ ಚೆನ್ನಾಗಿ ಮಾಡ್ತಾರೆ. ಆದರೆ ಇವರಿಗೆ ಮುಂಚೆ ಇದ್ದ ಭಟ್ಟರು ಇನ್ನೂ ಚೆನ್ನಾಗಿ ಮಾಡುತ್ತಿದ್ದರು.''

''ನೀವು ಟಿ.ವಿ. ನೋಡ್ತಿರಿ, ನಾನು ಡ್ರೆಸ್ ಮಾಡಿಕೊಂಡು ಬರ್ತೀನಿ'' ಎಂದು ಹೇಳಿ ಹೋದವಳು ಅರ್ಧಗಂಟೆಯ ನಂತರ ಹೊರಬಂದಳು. ಭಾಸ್ಕರನಿಗೆ ತಕ್ಷಣಕ್ಕೆ ಅವಳ ಗುರುತು ಸಿಗಲಿಲ್ಲ, ಮಾಲಾ ಕಿಲಕಿಲನೆ ನಕ್ಕಳು.

ದಂತದ ಬಣ್ಣದ ಸಿಲ್ಕ್ ಸೀರೆ, ಅದರ ಅಂಚಿಗೆ ಒಪ್ಪುವ ದಟ್ಟನೀಲಿಯ ತೋಳಿಲ್ಲದ ರವಿಕೆ, ಕತ್ತಿನಲ್ಲಿ ಎರಡೆಳೆ ಮುತ್ತಿನ ಸರ, ಕೈಯಲ್ಲಿ ಒಂದೊಂದು ಮುತ್ತಿನ ಬಳೆ. ಕಿವಿಗೆ ಮುತ್ತಿನ ಝುಮುಕಿ, ಒಲೆ, ಕೈಯಲ್ಲಿ ಸೀರೆಗೆ ಒಪ್ಪುವ ಹ್ಯಾಂಡ್‌ಬ್ಯಾಗ್, ಕಾಲಿಗೆ ಅದೇ ಬಣ್ಣದ ಚಪ್ಪಲಿ...

ವ್ಹಾ... ಉದ್ಗರಿಸಿ ಚಪ್ಪಾಳೆ ತಟ್ಟಿದ.

''ಥ್ಯಾಂಕ್ ಯೂ'' ಅವಳು ಪೋಸ್ ಕೊಟ್ಟು ನುಡಿದಳು.

''ಹೀಗೆ ಆಫೀಸಿಗೆ ಬರ್ತೀರಾ...'' ಅವಳು ಮತ್ತೆ ನಕ್ಕಳು.

''ಇವತ್ತು ನಾನು ಆಫೀಸಿಗೆ ಹೋಗಲ್ಲ...''

''ಯಾವುದಾದರೂ ಫಂಕ್ಷನ್‌ಗೆ ಹೋಗಬೇಕಾ?'' ನಿರಾಸೆಯಿಂದ ಕೇಳಿದ.

''ಯಾವ ಫಂಕ್ಷನ್ನೂ ಇಲ್ಲ. ನಾನು ರೆಡಿಯಾಗಿ ಬಂದಿದೀನಿ. ನೀವೇ ಯಾವುದಾದರೂ ಸುಂದರವಾದ ಜಾಗಕ್ಕೆ ನನ್ನನ್ನು ಕರೆದುಕೊಂಡು ಹೋಗಿ. ನನಗೆ ಇಷ್ಟವಾಗುತ್ತದೆ.''

''ಅದೇನೋ ಸರಿ. ಆದರೆ ಆಫೀಸು... ಬಾಸ್... ಏನಂತಾರೋ...''

''ಬಾಸ್ ವಿಷಯವನ್ನು ನನಗೆ ಬಿಡಿ. ನನ್ನ ಚಿಂತೆ ಇಲ್ದೆ ನನ್ನನ್ನು ಒಬ್ಬಳನ್ನೇ ಬಿಟ್ಟು ಹೋಗಿದಾನೆ. ಈಗ ನೀವು ನನ್ನ ಬಾಡಿಗಾರ್ಡ್, ನನ್ನ ಗೈಡು ಎಲ್ಲಾ. ನಾನು ಹೇಳಿದ ಹಾಗೆ ಕೇಳದಿದ್ದರೆ, ಪರಿಣಾಮ ಏನು ಗೊತ್ತಾ?''

''ನಿಮ್ಮ ಅಣ್ಣನಿಗೆ ಹೇಳಿ ನನ್ನನ್ನು ಕೆಲಸದಿಂದ ತೆಗೆಸಿಹಾಕ್ತೀರಾ?''

''ಛಿ...ಛಿ... ಈಗ ಬಿಡಿ. ಎಲ್ಲಿಗೆ ಕರೆದುಕೊಂಡು ಹೋಗ್ತೀರಾ?''

''ನೀವೇ ಹೇಳಿಬಿಡಿ...''

''ರಂಗನತಿಟ್ಟು... ಪಕ್ಷಿಧಾಮವನ್ನು ನೋಡಬೇಕೂಂತ ನನಗೆ ಆಸೆ...''

''ನಡೀರಿ...'' ಎನ್ನುತ್ತಾ ಕಾರಿನ ಬಳಿಗೆ ಬಂದ. ''ಮಾಲಾ ಕಾರಿನ ಕೀಯನ್ನು ಕೊಡಿ ನೋಡೋಣ ಓಡಿಸೋಕೆ ಬರುತ್ತಾ ಅಂತ...''

''ಲೈಸೆನ್ಸ್ ಇಲ್ಲ ಅಂತಂದ್ರೀ...''

''ಲೈಸೆನ್ಸ್ ಇಲ್ಲದೆ ಕಾರನ್ನು ಓಡಿಸುವುದೂ ಒಂದು ಥ್ರಿಲ್ಲು. ಜೀವನದಲ್ಲಿ ಥ್ರಿಲ್ಲು ಇರಬೇಕು.''

''ತಮಾಷೆ ಮಾಡಬೇಡಿ ಭಾಸ್ಕರ್... ಹುಡುಗಾಟವಲ್ಲ.''

''ಓ...ಕೇ. ತಮಾಷೆಯಲ್ಲ ನನಗೆ ಡ್ರೈವಿಂಗ್ ಬರುತ್ತೆ. ಲೈಸೆನ್ಸ್ ಇದೆ. ತೋರಿಸ್ಲಾ'' ಎನ್ನುತ್ತಾ ಬೈಕ್‌ನ ಡೆಕ್‌ನಿಂದ ಪೇಪರ್ರುಗಳನ್ನು ತೆಗೆದುತೋರಿಸಿದ. ಅವನು ಸ್ಟೀರಿಂಗ್ ಮುಂದೆ ಕುಳಿತ. ಮಾಲಾ ಅವನ ಪಕ್ಕ ಕುಳಿತಳು. ಕಾರು ಮೈಸೂರಿನ ಕಡೆಗೆ ಓಡಿತು. ಆಗಾಗ್ಗೆ ಮಾಲಾಳ ಕಡೆಗೆ ನೋಡುತ್ತಾ, ಹುಷಾರಾಗಿ ಡ್ರೈವ್ ಮಾಡುತ್ತಿದ್ದವನನ್ನೇ ಮೆಚ್ಚಿಗೆಯಿಂದ ನೋಡಿದಳು. ಇವಳು ತನಗಾಗಿಯೇ ಹೀಗೆ ಅಲಂಕರಿಸಿಕೊಂಡಿದ್ದಾಳೆಂದು ಅವನಿಗೆ ತಿಳಿದಿತ್ತು. ಮನಸ್ಸು ಗರಿ ಕೆದರಿ ಕುಣಿದಿತ್ತು. ಈ ಚೆಲುವೆ ಒಮ್ಮೆಲೆ ನನ್ನಲ್ಲಿ ಏನನ್ನು ಮೆಚ್ಚಿದಳು? ತಿಳಿದುಕೊಳ್ಳುವ ಕುತೂಹಲ ಹೆಚ್ಚಿತ್ತು.

ಸೀದಾ ಮೊದಲಿಗೆ ರಂಗನತಿಟ್ಟು ಪಕ್ಷಿಧಾಮಕ್ಕೆ ಬಂದರು. ಸುಮಾರು ಮೂರು

ಗಂಟೆಗಳ ಪ್ರಯಾಣ ಮಾಡಿ ಆಯಾಸವಾಗಿದ್ದರೂ ಮಾಲಾ ದೋಣಿಯಲ್ಲಿ ಕುಳಿತು ಕೊಳ್ಳಲು ಹೆದರಲಿಲ್ಲ. ಉತ್ಸಾಹದಿಂದ ಕುಳಿತಳು. ಸುತ್ತಲೂ ಕಾಣುವ ಮರಗಳು, ಮರಗಳ ಮೇಲೆ ಕುಳಿತಿರುವ ಹಕ್ಕಿಗಳು, ಹಾರಾಡುತ್ತಿರುವ ಹಕ್ಕಿಗಳು, ಗೂಡಿನಲ್ಲಿ ವಾಸಿಸು ತ್ತಿರುವ ಮರಿಹಕ್ಕಿಗಳು ಎಲ್ಲವನ್ನೂ ದೋಣಿಯಲ್ಲಿ ಕುಳಿತವರಿಗೆ ವಿವರಿಸಿ ಹೇಳಿದ ದೋಣಿ ನಡೆಸುವವನು.

ಕಾವೇರಿ ನದಿಯ ಆಳವಾದ ಜಾಗಕ್ಕೆ ಬಂದಾಗ, ಮೊಸಳೆ ಎಂದು ದೋಣಿ ಯವನು ತೋರಿದ ಕೂಡಲೇ ಮಾಲಾ ಕಿರುಚಿ ಭಾಸ್ಕರನನ್ನು ತಬ್ಬಿಕೊಂಡಳು. ಭಾಸ್ಕರ ಅವಳನ್ನು ಬಿಗಿಯಾಗಿ ಹಿಡಿದುಕೊಂಡ. ಅವನ ಎದೆಗೆ ಒರಗಿ ಕಣ್ಣುಮುಚ್ಚಿ ಕುಳಿತವಳು, ದೋಣಿ ಹಿಂದಕ್ಕೆ ತಿರುಗುವವರೆಗೂ ಕಣ್ಣು ಬಿಡಲಿಲ್ಲ.

''ನಾವು ವಾಪಸ್ಸು ಹೋಗ್ತಿದೀವಿ. ಮಾಲಾ... ಕಣ್ಣು ಬಿಡಿ'' ಭಾಸ್ಕರ ಅವಳ ಕತ್ತೆತ್ತಿ ಹೇಳಿದ. ಭಯದಿಂದ ಬೆವತುಹೋಗಿದ್ದಳು. ಹಣೆಯ ಮೇಲೆ ಸಾಲು ಸಾಲು ಬೆವರು ತೊಟ್ಟಿಕ್ಕಿತು. ಭಾಸ್ಕರ ತನ್ನ ಕರ್ಚೀಫಿನಿಂದ ಬೆವರನ್ನು ಒರೆಸಿದ.

''ಮೊಸಳೇನ ನೋಡಲೇ ಇಲ್ಲ. ಮತ್ಯಾಕೆ ಅಷ್ಟು ಭಯ?'' ಭಾಸ್ಕರ ಕೇಳಿದ. ದೋಣಿ ನಡೆಸುವವನು ನಕ್ಕ. ಭಾಸ್ಕರ ಅವನಿಗೆ ಕಣ್ಣು ಹೊಡೆದ.

''ಅಲ್ಲಿ ನೋಡಿ ಮೇಡಂ, ಕಲ್ಲು ಬಂಡೆ ಮೇಲೆ...'' ದೋಣಿ ನಡೆಸುವವನು ಕಲ್ಲಿನ ಮೇಲೆ ಹಾಯಾಗಿ ಮಲಗಿದ್ದ ಭಾರಿ ಮೊಸಳೆಯನ್ನು ತೋರಿದ. ಈ ಬಾರಿ ಮಾಲಾ ಚೀರಲಿಲ್ಲ. ಆದರೆ ಭಾಸ್ಕರನನ್ನು ಬಿಗಿಯಾಗಿ ಹಿಡಿದುಕೊಂಡಳು.

''ಇಲ್ಲಿಂದ ಬೇಗ ಕರೆದುಕೊಂಡು ಹೋಗಪ್ಪಾ...'' ಅವಸರಿಸಿದಳು. ದೋಣಿ ಯಿಂದ ಇಳಿದು ಮೆಟ್ಟಿಲುಗಳ ಮೇಲೆ ಕುಳಿತು ಸುಧಾರಿಸಿಕೊಂಡಳು.

''ಇಷ್ಟಕ್ಕೋಸ್ಕರ ಇಲ್ಲಿಗೆ ಕರೆದುಕೊಂಡು ಬಂದ್ರಾ?''

''ಮೊಸಳೇನ ನೋಡಬೇಕೂಂತ ಅನ್ನಿಸಿದರೂ ಯಾಕೋ ಭಯ ಆಯ್ತು''

''ಈಗ ಭಯ ಕಡಿಮೆ ಆಯ್ತಲ್ಲ, ಮತ್ತೆ ಹೋಗಣ್ವಾ?...''

''ಸಾಕಪ್ಪಾ. ಹೊಟ್ಟೆ ಹಸೀತಿದೆ. ಯಾವುದಾದರೂ ಹೋಟೆಲ್ಲಿಗೆ ಹೋಗೋಣ ಬನ್ನಿ'' ಎನ್ನುತ್ತಾ ಎದ್ದಳು.

''ಇಲ್ಲಿ ಯಾವ ಹೋಟೆಲ್ಲೂ ಚೆನ್ನಾಗಿಲ್ಲ. ಮೈಸೂರಿಗೆ ಹೋಗೋಣ'' ಎಂದು ನುಡಿದು ಕಾರನ್ನು ಚಲಿಸಿದ. ಮಾಲಾ ಮತ್ತೆ ಮತ್ತೆ ತಾನು ಅವನನ್ನು ಗಾಢವಾಗಿ ತಬ್ಬಿಕೊಂಡಿದುದನ್ನೇ ನೆನೆಸಿಕೊಳ್ಳುತ್ತಿದ್ದಳು. ಭಾಸ್ಕರನಿಗೆ ಏನನ್ನಿಸಿರಬಹುದು? ಭಾರ್ಗವನ ನಂತರ, ಇವನನ್ನೇ ನಾನು ತಬ್ಬಿಕೊಂಡದ್ದು. ಭಯದಿಂದ ಹಾಗೆ ಮಾಡಿದರೂ, ಆ ಆಲಿಂಗನ ಹಿತವಾಗಿತ್ತು. ಇನ್ನು ಪ್ರೀತಿಯಿಂದ ತಬ್ಬಿಕೊಂಡರೆ ಹೇಗಿರ ಬಹುದು ಅಂತ ಅನ್ನಿಸಿದಾಗ ಮೈ ರೋಮಾಂಚನಗೊಂಡಿತ್ತು.

ಮೈಸೂರಿನ ಪ್ರಸಿದ್ಧ ಹೋಟೆಲಿನಲ್ಲಿ ಊಟ ಮಾಡಿದರು. ಮತ್ತೆ ತಕ್ಷಣವೇ ಊರಿಗೆ ವಾಪಸ್ಸು ಹೋಗಲು ಇಬ್ಬರಿಗೂ ಇಷ್ಟವಿರಲಿಲ್ಲ.

''ನಂಜನಗೂಡಿಗೆ ಹೋಗೋಣ್ವಾ?'' ಕೇಳಿದ.

''ಅಲ್ಲೇನಿದೆ?''

''ಅಲ್ಲಿ ನಮ್ಮ ಮನೆ ಇದೆ. ನಂಜುಂಡೇಶ್ವರನ ದೇವಸ್ಥಾನವಿದೆ. ಕಪಿಲಾ ನದಿ ಹರಿಯುತ್ತದೆ..''

''ನಿಮ್ಮ ಮನೇಲಿ ಯಾರ್‍ಯಾರು ಇದೀರಿ?''

''ನಮ್ಮ ತಾಯಿ, ನನ್ನ ಅಕ್ಕ, ನನ್ನ ಅಕ್ಕನ ಮಗಳು ಇಷ್ಟೇ ಜನ.''

''ಅವರೆಲ್ಲಾ ಅಲ್ಲೇ ಯಾಕೆ ಇದಾರೆ... ಬೆಂಗಳೂರಿಗೇ ಷಿಫ್ಟ್ ಮಾಡಬಹುದಲ್ಲ.''

''ಅವರೆಲ್ಲಾ ಹಳೇ ಕಾಲವದರು. ಅವರ ಊರನ್ನು ಬಿಟ್ಟು ಬರೋಕೆ ರೆಡಿಯಾಗಿಲ್ಲ. ಇನ್‌ಫ್ಯಾಕ್ಟ್ ನಾನು ಇರೋದೂ ಇಷ್ಟವಿಲ್ಲ...''

ಸಾಯಂಕಾಲದ ಹೊತ್ತಿಗೆ ನಂಜನಗೂಡಿಗೆ ತಲುಪಿದರು. ಅಗ್ರಹಾರದ ಸಣ್ಣ ಮನೆಯ ಮುಂದೆ ಕಾರು ನಿಂತಾಗ, ರಸ್ತೆಯ ಮನೆಗಳಲ್ಲಿ ವಾಸವಾಗಿದ್ದವರೆಲ್ಲಾ ಹೊರಗೆ ಬಂದು ಇಣುಕಿ ನೋಡಿದ್ದರು.

''ಬನ್ನಿ, ಇದೇ ನನ್ನ ಮನೆ'' ಎನ್ನುತ್ತಾ ಸುಣ್ಣ ಬಣ್ಣ ಕಾಣದ ಹಳೆಯ ಜಂತಿಯ ಮನೆಯೊಳಕ್ಕೆ ಆಹ್ವಾನಿಸಿದ. ಎತ್ತರವಾಗಿದ್ದ ಹೊಸ್ತಿಲುಗಳನ್ನು ಕಷ್ಟಪಟ್ಟು ದಾಟಿ ಒಳಗೆ ಬಂದಳು. ಹಾಲಿನಲ್ಲಿ ಕುಳಿತಿದ್ದ ಮೂವರೂ ಎದ್ದು ನಿಂತಿದ್ದರು.

''ಇವರು ನನ್ನ ತಾಯಿ, ಇವಳು ನನ್ನ ಅಕ್ಕ, ಇವಳು ಅವಳ ಮಗಳು'' ಎಂದಷ್ಟೇ ಪರಿಚಯ ಮಾಡಿಕೊಟ್ಟ. ಮಾಲಾ ಎಲ್ಲರಿಗೂ ಕೈ ಮುಗಿದಳು.

''ಇವರು ವನಮಾಲಾ ಅಂತ. ನನ್ನ ಬಾಸ್. ನಾವು ಇಲ್ಲಿ ಮೈಸೂರಿನ ತನಕ ಬಂದಿದ್ದೆವು. ಒಂದು ಮೀಟಿಂಗ್ ಇತ್ತು. ಇಷ್ಟು ದೂರ ಹೇಗೂ ಬಂದಿದೀವಲ್ಲ ಅಂತ, ನಮ್ಮ ಮನೇನ ತೋರಿಸೋಣ ಅಂತ ಕರೆದುಕೊಂಡು ಬಂದೆ.'' ಮಾಲಾ ಕುಳಿತಳು.

''ಒಳ್ಳೇದಾಯ್ತು. ಏನು ತಗೋತೀರಿ? ಕಾಫಿ, ಟೀ, ಪಾನಕ...''

''ಕಾಫಿ ಕೊಡಿ ಸಾಕು''

''ಅಮ್ಮಾ ಏನಾದ್ರೂ ತಿಂಡಿ ಇದ್ದರೆ ಕೊಡು'' ಭಾಸ್ಕರ ಅಲ್ಲಿದ್ದ ಇನ್ನೊಂದು ಕುರ್ಚಿಯ ಮೇಲೆ ಕುಳಿತ. ಮೂರು ಜನರೂ ಒಬ್ಬರ ಹಿಂದೆ ಒಬ್ಬರು ಒಳಗೆ ಹೊರಟು ಹೋಗಿದ್ದರು. ಮಾಲಾ ಕತ್ತೆತ್ತಿ ಮನೆಯ ಗೂಡುಮಾಡುಗಳನ್ನು ನೋಡಿದಳು. ಭಾಸ್ಕರ ನಕ್ಕ.

''ಅಲ್ಲೆಲ್ಲಾ ಏನಿದೆ ಅಂತ ಕತ್ತು ನೋಯಿಸಿಕೊಂಡು ನೋಡ್ತೀರಿ'' ಮಾಲಾ

ಸುಮ್ಮನೇ ನಕ್ಕಳು. ಅವನ ತಾಯಿ ಬಿಸಿಬಿಸಿ, ರುಚಿಯಾದ ಕಾಫಿಯನ್ನು ತಂದರು. ಜೊತೆಗೆ ಚಕ್ಕುಲಿಯೂ ಇತ್ತು. ಅದು ಮುಗಿದ ಮೇಲೆ ಭಾಸ್ಕರ ಎದ್ದು ನಿಂತ.

"ಅಮ್ಮಾ... ನಾವು ಈಗಲೇ ವಾಪಸ್ಸು ಹೊರಡ್ತೀವಿ"

"ಅದೇನೋ ಈಗಲೇ ಹೊರಟುಬಿಟ್ಯಾ ? ರಾತ್ರಿ ಇಲ್ಲೇ ಇದ್ದು ಬೆಳಿಗ್ಗೆ ಹೋದರೆ ಆಗಲ್ವಾ ?"

"ಇಲ್ಲಮ್ಮ, ಅವರ ಮನೆಯವರು ಕಾಯ್ತಾ ಇರ್ತಾರೆ."

"ಇಷ್ಟು ದೂರ ಬಂದಿದೀರಿ. ಶ್ರೀಕಂಠೇಶ್ವರನ ದರ್ಶನ ಮಾಡಿಕೊಂಡು ಬನ್ನಿ. ನಾನು ಬೇಗ ಅಡಿಗೆ ಮಾಡ್ತೀನಿ. ಊಟ ಮಾಡಿ ಹೊರಡೋರಂತೆ."

ಭಾಸ್ಕರನೇ ಸಮೀಪದಲ್ಲಿದ್ದ ಹೊಳೆಯನ್ನು ತೋರಿಸಿದ. ನಂಜುಂಡೇಶ್ವರನ ದರ್ಶನವನ್ನು ಮಾಡಿಸಿದ. ದೇವರ ಮುಂದೆ ಕೈಜೋಡಿಸಿ ನಿಂತಿದ್ದ ಭಾಸ್ಕರನನ್ನೇ ನೋಡಿದಳು ಮಾಲಾ. ಒಂದು ಗಳಿಗೆ ಅಪರಾಧಿ ಮನೋಭಾವ ಕಾಡಿದರೆ, ಮರು ಗಳಿಗೆಯೇ ಅದು ಮರೆಯಾಗುತ್ತಿತ್ತು.

ಶೆಕೆಯಿಂದ ಬೆವೆತು ತೋಯ್ದು ಹೋಗಿದ್ದ ಮಾಲಾ, ನೀರಿನಲ್ಲಿ ಅರಳಿರುವ ಕಮಲದಂತೆ ಕಂಡಳು. ಭಯದಿಂದ ಅವನಿಗೆ ಆತುಕೊಂಡಿದ್ದ ಮಾಲಾಳ ರೂಪ ನೆನಪಾಯಿತು. ಸ್ವಚ್ಛ ಹೊಳೆಯುವ ಮುತ್ತಿನಂತೆ ಇದಾಳೆ. ಅದಕ್ಕೆ ತಕ್ಕಂತೆ ಮುತ್ತಿನ ಒಡವೆಯ ಹೊಳಪು. ಮೈಬಣ್ಣಕ್ಕೆ ಒಪ್ಪುವ ಸೀರೆ-ರವಿಕೆ. ಅವಳ ಚೆಲುವನ್ನೇ ಆಸ್ವಾದಿಸುತ್ತಾ ನಿಂತ. ಮಾಲಾ ಎಚ್ಚೆತ್ತಳು. ಭಾಸ್ಕರ ಈ ದಿನ ತನ್ನನ್ನು ಬೇರೆ ದೃಷ್ಟಿಯಲ್ಲಿ ನೋಡುತ್ತಿದಾನೆ. ಮೈ ಪುಳಕಗೊಂಡಿತು. ಅವನ ಎದೆಗೊರಗಿ ತನ್ನ ಭಯವನ್ನು ಕಳೆದುಕೊಂಡಿದ್ದು ನೆನಪಾಯಿತು. ಇವನೊಂದಿಗೆ ಇದ್ದರೆ ಯಾವ ಭಯವೂ ಇಲ್ಲ ಎಂದುಕೊಂಡಳು.

ಬಿಸಿ ಬಿಸಿ ಊಟ ಮಾಡಿ, ತಕ್ಷಣವೇ ಇಬ್ಬರೂ ಹೊರಟರು. ದಾರಿಯಲ್ಲಿ ಮಾಲಾ ಕೇಳಿದಳು.

"ಯಾಕೆ ನಿಮ್ಮ ತಾಯಿ ಅಷ್ಟು ಹೇಳಿದ್ರೂ ಹೊರಟುಬಿಟ್ಟಿರಲ್ಲಾ"

"ನಮ್ಮ ಮನೇಲಿ ನೀವು ರಾತ್ರಿ ಇರೋಕೆ ಆಗುತ್ತಿರಲಿಲ್ಲ"

"ಯಾಕೆ ಆಗಲ್ಲ? ನೀವೆಲ್ಲಾ ಇಲ್ಲವೇ?"

"ನಮಗೆ ಅಭ್ಯಾಸವಾಗಿದೆ. ನೀವು ಇದೇ ಮೊದಲಬಾರಿ ಇಂತಹ ಮನೆಯನ್ನು ನೋಡಿರಬಹುದು."

"ಆದರೂ ನಿಮ್ಮ ತಾಯಿ ಏನಂದುಕೊಂಡರೋ"

"ಅಮ್ಮ ಅಂತಹವಳಲ್ಲ... ಒಳ್ಳೆಯವಳು."

"ನಾನೆಲ್ಲಿ ಕೆಟ್ಟವರು ಅಂತ ಅಂದೆ...? ನನಗೆ ತುಂಬಾ ನಿದ್ದೆ ಬರ್ತಿದೆ. ನಿಮಗೆ ಬರ್ತಿಲ್ವಾ?"

''ನನಗೂ ನಿದ್ದೆ ಬಂದರೆ ಡ್ರೈವ್ ಮಾಡೋದು ಹೇಗೆ?''

''ಒಂದು ಕೆಲಸ ಮಾಡೋಣ. ಈ ರಾತ್ರಿ ಮೈಸೂರಿನ ಹೋಟೆಲ್ಲಿನಲ್ಲಿ ಇಳಿದುಕೊಳ್ಳೋಣ. ಬೆಳಿಗ್ಗೆ ಎದ್ದು ಹೋಗೋಣ.''

''ನಿಮ್ಮ ಮನೆಯವರು ಏನಂದುಕೊಳ್ತಾರೆ''

''ಯಾರಿಗೂ ಗೊತ್ತಾಗಲ್ಲ. ಅಣ್ಣ ಅತ್ತಿಗೆ ಇಬ್ಬರೂ ಮನೆಯಲ್ಲಿಲ್ಲ...''

''ಅದೇನೋ ಸರಿ... ಆದರೆ''

''ನಿಮಗೇಕೆ ಭಯ ? ಹೆಣ್ಣಾಗಿ ನಾನೇ ಹೆದರುತ್ತಿಲ್ಲ''

''ಈಗ ನಿಮ್ಮ ಮಾತನ್ನ ಕೇಳದಿದ್ದರೆ ವಿಧಿಯೇ ಇಲ್ಲ'' ಎನ್ನುತ್ತಾ ಮೈಸೂರನ್ನು ತಲುಪಿ, ಒಂದು ಏರ್‌ಕಂಡೀಷನ್ಡ್ ಹೋಟೆಲ್ಲಿನಲ್ಲಿ ರೂಮು ಪಡೆದ. ಮಿ॥ ಅಂಡ್ ಮಿಸೆಸ್ ಭಾಸ್ಕರ್ ಎಂದು ಬರೆಸಿದ್ದರಿಂದ ಡಬಲ್ ರೂಂ ಸಿಕ್ಕಿತ್ತು.

ಒಬ್ಬರಿಗೊಬ್ಬರು ಸ್ನೇಹಿತರಂತೆ ಪರಿಚಯಸ್ಥರಾಗಿದ್ದರೂ ಹೀಗೆ ಏಕಾಂತದಲ್ಲಿ ಒಂದೇ ರೂಮಿನಲ್ಲಿ ಮಲಗುವುದೆಂದರೇ... ಭಾಸ್ಕರ ಮುಜುಗರಗೊಂಡಿದ್ದ. ಮಾಲಾ ಗಂಭೀರವನ್ನು ನಟಿಸಿದ್ದಳು. ಎಷ್ಟೋ ಹೊತ್ತಿನ ತನಕ ಹರಟುತ್ತಿದ್ದ ಮಾಲಾ ಹಾಗೇ ಮಂಚದ ಮೇಲೆ ಉರುಳಿಕೊಂಡಿದ್ದಳು. ಸೋಫಾದ ಮೇಲೆ ಕುಳಿತಿದ್ದ ಭಾಸ್ಕರ ಎದ್ದು ಬಂದು ಅವಳಿಗೆ ಹೊದಿಕೆಯನ್ನು ಹೊದಿಸಿದ್ದ. ತಾನೂ ಒಂದು ಹೊದಿಕೆಯನ್ನು ಹೊದ್ದು ಸೋಫಾದ ಮೇಲೆ ಮಲಗಿದ.

ಬೆಳಗಿನ ಜಾವದ ತಂಗಾಳಿ ಅವನನ್ನು ಎಚ್ಚರಿಸಿತು. ಐದು ಗಂಟೆಯ ಸಮಯವಾಗಿತ್ತು. ಮಾಲಾಳನ್ನು ಎಬ್ಬಿಸಿದ.

''ನಾವು ಆದಷ್ಟು ಬೇಗ ಇಲ್ಲಿಂದ ಹೊರಡೋಣ. ಮನೆಗೆ ಹೋಗಿ ಸ್ನಾನ ಗೀನ ಮುಗಿಸಿ ಆಫೀಸಿಗೆ ಹೋಗಬೇಕು'' ಆಕಳಿಸುತ್ತಾ ಎದ್ದ ಮಾಲಾಳಿಗೆ ತಾನು ಎಲ್ಲಿದ್ದೇನೆ ಎಂದು ತಿಳಿಯುವುದೇ ಕಷ್ಟವಾಗಿತ್ತು.

ಅವನು ಮಾಲಾಳನ್ನು ಮನೆ ತಲುಪಿಸಿ, ಬೈಕ್ ಹತ್ತಿ ತನ್ನ ರೂಮಿಗೆಂದು ಹೊರಟ. ಅಡಿಗೆಯ ಹೆಂಗಸು ಏನನ್ನೂ ಕೇಳಲಿಲ್ಲ. ಇವಳೂ ಏನನ್ನೂ ಹೇಳಲಿಲ್ಲ. ಮಾಲಾ ಮಾತ್ರ ಏನನ್ನೋ ಕಳೆದುಕೊಂಡವಳಂತೆ ಚಡಪಡಿಸಿದಳು. ಭಾರ್ಗವನಂತೆ, ಭಾಸ್ಕರನೂ ನಿಷ್ಠಾವಂತ. ಅವನು ಮೆಚ್ಚುವ ಯುವತಿ, ಕಣ್ಣೆದುರಿಗೇ ಮಲಗಿದ್ದರೂ ಅವಳನ್ನು ಅನುಭವಿಸುವ ಆಸೆ ಅವನಿಗಾಗಲಿಲ್ಲವೆಂದರೇ... ಇದು ತನ್ನ ಹೆಣ್ಣುತನಕ್ಕೇ ಅವಮಾನ ಎಂದೆನಿಸಿತ್ತು. ಭಾಸ್ಕರನ ಮೇಲೆ ಅನಾವಶ್ಯಕ ಕೋಪಗೊಂಡಳು. ಆ ದಿನ ಆಫೀಸಿಗೆ ಹೋಗದೇ ಮನೆಯಲ್ಲೇ ಉಳಿದಳು. ಸ್ವಲ್ಪ ಹೊತ್ತಿನ ನಂತರ ಅವನು ಫೋನು ಮಾಡಿದ್ದ.

''ಹುಶಾರಾಗಿದೀರಿ ತಾನೇ... ಪ್ರಯಾಣ ಸುಸ್ತಾಯಿತಾ?'' ವಿಚಾರಿಸಿದ್ದ.

''ಏನೋ ಬಿಡಿ ಇದೀನಿ'' ಉದಾಸೀನವಾಗಿ ಹೇಳಿದಳು.

"ಏನಾಯ್ತು?... ಯಾರಾದ್ರೂ ಕೇಳಿದ್ರಾ...?"

"ಅವಮಾನದಿಂದ ಕುದಿದು ಹೋಗ್ತಿದೀನಿ..." ಎನ್ನುತ್ತಾ ರಿಸೀವರ್‌ನ ಕುಕ್ಕಿದಳು.

ಲಂಚ್ ಸಮಯದಲ್ಲಿ ಭಾಸ್ಕರ ಆತುರ, ಕಾತುರಗಳಿಂದ ಅವರ ಮನೆಗೆ ಬಂದ. ಅವನಿಗಾಗಿಯೇ ಕಾದಿದ್ದವಳಂತೆ ಮಾಲಾ ಅವನನ್ನು ಕಂಡೊಡನೆ ತೆಕ್ಕೆ ಬಿದ್ದು ಅಳತೊಡಗಿದಳು. "ನೀವು ಹೀಗೆ ಮಾಡಬಹುದಾ? ಭಾಸ್ಕರ್... ನೀವು ಹೀಗೆ ಅಂತ ನಾನು ಅಂದುಕೊಂಡಿರಲಿಲ್ಲ"

"ಏನಾಯ್ತು? ನಾನು ಏನು ಮಾಡ್ದೆ... ನಿಮಗೆ ಅವಮಾನವನ್ನಾಗಲೀ, ತೊಂದರೆಯನ್ನಾಗಲೀ ಮಾಡಿದ ನೆನಪಿಲ್ಲ ನನಗೆ..."

"ಸರಿಯಾಗಿ ಜ್ಞಾಪಿಸಿಕೊಳ್ಳಿ... ನೆನ್ನೆ ನಾವು ಔಟಿಂಗ್ ಹೋದದ್ದು ನನಗೋಸ್ಕರ ತಾನೇ..."

"ಹೌದು ರಂಗನತಿಟ್ಟಿನಲ್ಲಿ ನೀವು ಮೊಸಳೆಗೆ ಹೆದರಿ, ಕಣ್ಣು ಮುಚ್ಚಿ ಕುಳಿತಿದ್ದಿರಿ." ಅವನು ತಮಾಷೆಯಾಗಿ ನಕ್ಕ.

"ತಮಾಷೆ ಮಾಡಬೇಡಿ... ನಾನು ಬೇಕೂಂತ ಹಾಗೆ ಮಾಡಲಿಲ್ಲ."

"ನನಗೆ ಗೊತ್ತು ರೀ... ನಿಮಗೆ ನಿಜಕ್ಕೂ ಭಯ ಆಗಿತ್ತು ಅಂತ... ನಾನು ನೀರಿಗೆ ಇಳಿದು ಮೊಸಳೆಯನ್ನು ಕೊಂದು, ನನ್ನ ಪರಾಕ್ರಮವನ್ನು ತೋರಿಸಬೇಕಾಗಿತ್ತಾ?... ನನಗೂ ಭಯವೇ... ಹೇಗೂ ನೀವು ನನ್ನ ಜೊತೆಗಿದ್ದಿರಲ್ಲ ಅಂತ ಧೈರ್ಯವಾಗಿದ್ದೆ..."

"ಇಲ್ಲ ನೀವು ಧೈರ್ಯವಂತರಲ್ಲ, ಬರೀ ಪುಕ್ಕಲು..."

"ಈಗ ನೀವು ತಮಾಷೆ ಮಾಡ್ತಿದೀರಿ..."

"ನೋ. ತಮಾಷೆಯಲ್ಲ, ನಿಜವನ್ನೇ ಹೇಳ್ತಿದೀರಿ" ಎನ್ನುತ್ತಾ ಹಗುರವಾಗಿ ಅವನ ಎದೆಗೆ ಗುದ್ದಿದಳು.

"ಯಾಕೆ ಹೊಡಿತೀದೀರಿ... ನನ್ನ ಹೃದಯ ಒಡೆದುಹೋಗುತ್ತೆ..."

"ನಿಮಗೆ ಹೃದಯವೇ ಇಲ್ಲ, ಅದು ಬರೀ ಕಲ್ಲು" ಎನ್ನುತ್ತಾ ಹಿಸ್ಟೀರಿಯಾ ಹಿಡಿದವಳಂತೆ ಮತ್ತೆ ಮತ್ತೆ ಹೊಡೆದಾಗ, ಅವನು ಅವಳ ಕೈಗಳನ್ನು ಬಲವಾಗಿ ಹಿಡಿದು, ಅವಳ ಕಣ್ಣೊಳಗೆ ಕಣ್ಣುಗಳನ್ನಿಟ್ಟು ನೋಡಿದ. ತುಂಬಿದ ಕೊಳಗಳಾಗಿದ್ದ ಕಣ್ಣುಗಳಲ್ಲಿದ್ದ ಅವ್ಯಕ್ತ ಆಸೆಯನ್ನು ಕಂಡ. ಆ ಕ್ಷಣದಲ್ಲಿ ಅವಳ ಇಂಗಿತ ಅವನಿಗೆ ಅರ್ಥವಾಗಿತ್ತು. ಓ... ಇದು ಹಸಿದ ಹೆಣ್ಣು ಎಂದು ತನ್ನಲ್ಲೇ ಹೇಳಿಕೊಂಡು ಅವಳನ್ನು ಸೋಫಾದ ಮೇಲೆ ಕೂರಿಸಿ ತಾನೂ ಅವಳ ಮಗ್ಗುಲಲ್ಲಿ ಕುಳಿತ. ಅತ್ತಿತ್ತ ನೋಡಿದ... ಯಾರೂ ಕಾಣಲಿಲ್ಲ, ಮುಂಬಾಗಿಲು ಹಾಗೇ ತೆಗೆದಿತ್ತು.

"ಮ್ಹಾಲಾ... ಐಲವ್‌ಯೂ" ಪ್ರೀತಿಯಿಂದ ಕರೆದ.

''ನಂಗೊತ್ತು. ನೀವು ನನ್ನನ್ನು ಪ್ರೀತಿಸ್ತಿದೀರಿ ಅಂತ.. ಆದರೆ ನನ್ನನ್ಯಾಕೆ ಸತಾಯಿಸ್ತೀರಿ. ನಾನೂ ನಿಮ್ಮನ್ನು ಪ್ರೀತಿಸ್ತಿದೀನಿ ಅಂತ ನಿಮಗೆ ತಿಳಿಯಲಿಲ್ವಾ...''

''ತಿಳಿದಿತ್ತು ಆದರೆ...''

''ಇದನ್ನೇ ನಾನು ಪುಕ್ಕಲುತನ ಅಂತ ಹೇಳಿದ್ದು. ನೀವು ನನಗೆ ಬೇಕು ಅಂತ ನಾನೇ ಬಾಯಿಬಿಟ್ಟು ಹೇಳಬೇಕಾ?...''

''ಆದರೂ ನಾವು ಸರಿಯೋ ತಪ್ಪೋ ಅಂತ ಯೋಚಿಸಬೇಡವೇ?''

''ಸರಿ ತಪ್ಪಿನ ಬಗ್ಗೆ ಯೋಚಿಸ್ತಾನೇ ಕುಳಿತರೆ, ಇಡೀ ಜೀವನವೇ ಮುಗಿದು ಹೋಗುತ್ತೆ. ನಮ್ಮ ಆಸೆಗಳು ಪೂರೈಸುವುದು ಯಾವಾಗ...? ನೀವೂ ನನ್ನನ್ನು ಪ್ರೀತಿಸ್ತಿ ದೀರಿ ಅಂತ ತಿಳೀತಲ್ಲ... ನನಗೆ, ಅದೇ ಭಯವಿದ್ದದ್ದು...''

''ಭಯ ಯಾಕೆ? ನಾನಿದೀನಲ್ಲ...'' ಎನ್ನುತ್ತಾ ಬಾಹುಗಳನ್ನು ನೀಡಿದ. ಅವಳು ಅವನ ತೆಕ್ಕೆಯೊಳಕ್ಕೆ ಬಿದ್ದಳು. ಅವಳನ್ನು ತನ್ನ ದೇಹಕ್ಕೆ ಒತ್ತಿ ಹಿಡಿದ. ಅವಳನ್ನು ಹಾಗೇ ಅಲ್ಲಿದ್ದ ದೀವಾನದ ಮೇಲೆ ಮಲಗಿಸಿ, ಮುಂಬಾಗಿಲನ್ನು ಒಳಗಿನಿಂದ ಭದ್ರಪಡಿಸಿದ. ಕಣ್ಣುಗಳನ್ನು ಈಗ ಬಿಟ್ಟರೆ ಈ ಕನಸು ಎಲ್ಲಿ ನನಸಾಗುವುದಿಲ್ಲವೋ ಎನ್ನುವಂತೆ ಅವಳು ಹಾಗೇ ಮಲಗಿದ್ದಳು. ಅವಳ ಪಕ್ಕದಲ್ಲಿ ನಿಂತು, ಅವಳನ್ನೇ ಮುಡಿಯಿಂದ ಅಡಿಯವರೆಗೆ ನೋಡಿದ. ಶಿಲಾಸುಂದರಿಯಂತೆ ಅಲುಗಾಡದೇ ಮಲಗಿರುವವಳು ತನಗಾಗಿ ಕಾದಿರುವ ಹೆಣ್ಣು.. ಇನ್ನು ನಿರಾಶೆಗೊಳಿಸಬಾರದು ಎಂದುಕೊಂಡು ಅವಳ ಮೇಲೆ ಬಾಗಿದ. ಹಾತೊರೆಯುತ್ತಿದ್ದ ಅವಳ ತುಟಿಗಳನ್ನು ತನ್ನ ತುಟಿಗಳೊಳಗೆ ಅಡಗಿಸಿಕೊಂಡ. ಈ ಸುಸಮಯಕ್ಕಾಗಿ ಕಾದಿದ್ದವರಂತೆ, ಸುಖಾನುಭವದಲ್ಲಿ ಇಬ್ಬರೂ ಮುಳುಗಿ ಹೋದರು. ಇಬ್ಬರಿಗೂ ಕಾಲದ ಪರಿವೆ ಇರಲಿಲ್ಲ. ಇನ್ನೊಬ್ಬರ ಭಯವಿರಲಿಲ್ಲ. ಈ ರಸಮಯಗಳಿಗೆ ನಮಗಾಗಿ ಎನ್ನುವಂತೆ ತೃಪ್ತಿಯ ಕಡಲಲ್ಲಿ ಮಿಂದರು. ಹಾಗೇ ಎಷ್ಟೋ ಹೊತ್ತು ಮೈಮರೆತು ಮಲಗಿದ್ದರು. ನಿಧಾನವಾಗಿ ಭಾಸ್ಕರ ಎಚ್ಚೆತ್ತ. ತನ್ನ ಬಾಹುಗಳಲ್ಲಿ ಮಲಗಿರುವವಳನ್ನೇ ನೋಡುತ್ತಾ ಎದ್ದ.

ಇವಳು ತನ್ನ ಬಾಸ್‌ನ ತಂಗಿ. ಇವಳೊಡನೆ ಈ ಸಮಾಗಮ ಅನುಚಿತವಾದದ್ದು ಅಂತ ಅನ್ನಿಸಿದರೂ, ನನ್ನನ್ನು ಬಯಸಿದವಳು ಇವಳೇ. ಇವಳ ಆಸೆಯನ್ನು ಪೂರೈಸಿದ್ದೇನೆ. ಹೆಣ್ಣಾದ ಇವಳಿಗೇ ಭಯವಿಲ್ಲದ ಮೇಲೆ ಗಂಡಸಾದ ನಾನೇಕೆ ಅಂಜಬೇಕು ಅಂದುಕೊಂಡು ಅವಳಿಗೆ ಎಚ್ಚರವಾಗದಂತೆ ಬಾಗಿಲನ್ನು ತೆರೆದು ಹೊರನಡೆದ. ಆಫೀಸಿಗೆ ಹೋಗುವ ಮನಸ್ಸಾಗಲಿಲ್ಲ. ಸೀದಾ ತನ್ನ ಮನೆಗೆ ಬಂದ. ರಾತ್ರಿಯವರೆಗೂ ಚಡಪಡಿಸು ತ್ತಿದ್ದ ಮನ, ಒಂದು ಸ್ಥಿಮಿತಕ್ಕೆ ಬಂದಿತ್ತು. ಮಾಲಾಳಿಗೆ ಫೋನು ಮಾಡಲೇ ಅಂತಂದು ಕೊಂಡವನು, ಅವಳೇ ಮಾಡಲಿ... ನನ್ನನ್ನು ಕರೆಯಲಿ ಎಂದು ಮನಸ್ಸು ಹಂಬಲಿಸಿತು. ಎಷ್ಟು ಹೊತ್ತಾದರೂ ಅವಳಿಂದ ಫೋನು ಬರದಿದ್ದಾಗ, ದಿಗಿಲೂ ಆಗಿತ್ತು. ಸ್ವಲ್ಪ ವಿಚಿತ್ರ ಸ್ವಭಾವದ ಹೆಣ್ಣು. ಒಬ್ಬಳೇ ಬೇರೆ ಇದ್ದಳು. ಏನಾದರೂ ಅಪಾಯ ಮಾಡಿಕೊಂಡಿ

ದ್ದರೇ... ಆಗ ತಾನು ಸಿಕ್ಕಿ ಬೀಳುವುದು ನಿಜ ಎಂದುಕೊಂಡು ಮತ್ತೆ ಅವಳ ಮನೆಗೆ ಬಂದ. ಮುಂಬಾಗಿಲು ಹಾಗೇ ತೆಗೆದಿತ್ತು. ಬಾಗಿಲನ್ನು ತಳ್ಳಿ ಒಳಗೆ ಬಂದ. ಅವಳು ಹಾಗೇ ದಿವಾನದ ಮೇಲೆ ಮಲಗಿದ್ದಳು. ಗಾಬರಿಯಿಂದ ಓಡಿ ಬಂದು ಮಾಲಾ... ಮಾಲಾ... ಎಂದ. ಮೆಲ್ಲನೆ ಕಣ್ಣು ತೆರೆದು ಅವನ ಕೊರಳಿಗೆ ಕೈಗಳನ್ನು ಹಾರಮಾಡಿದಳು. ''ನನಗೆ ಗೊತ್ತಿತ್ತು ನೀವು ಬರ್ತೀರಿ ಅಂತ.. ಐ ಲೈಕ್ ಇಟ್...'' ಎನ್ನುತ್ತಾ ಅವನನ್ನು ತನ್ನ ಮೇಲೆ ಎಳೆದುಕೊಂಡಳು.

''ಮಾಲಾ... ಇದೇನಿದು ಹುಡುಗಾಟ. ಬಾಗಿಲನ್ನು ತೆಗೆದು ಒಬ್ಬರೇ ಮಲಗಿದ್ದೀರಲ್ಲ. ಯಾರಾದ್ರೂ ಬಂದರೆ...''

''ನನಗೆ ಗೊತ್ತಿತ್ತು ನೀವು ಬರ್ತೀರಿ ಅಂತ.. ಅದಕ್ಕೇ ಇಲ್ಲಿಂದ ಏಳಲೇ ಇಲ್ಲ'' ಎಂದಳು ನಗುತ್ತಾ.

''ಆಯ್ತು. ಏನೋ ನಡೆದು ಹೋಯ್ತು. ತಪ್ಪೋ ಸರಿಯೋ ನನಗೆ ತಿಳೀದು. ಆದರೆ ಹೊರಗಿನವರಿಗೆ ತಿಳಿದರೆ...?''

''ಯಾರಿಗೂ ತಿಳಿಯಲ್ಲ. ಅಲ್ಲದೇ ಇದು ನನ್ನ ಮನೆ, ನನ್ನ ಇಷ್ಟ. ನಾನು ಮನಸ್ಸಿನಂತೆ ನಡೆದುಕೊಂಡಿದೀನಿ. ಯಾರೂ ಪ್ರಶ್ನಿಸುವ ಹಾಗೇ ಇಲ್ಲ... ಆದರೆ ನೀವು ಮಾತ್ರ ನನಗೆ ಮೋಸ ಮಾಡಬೇಡಿ... ನಾನು ನಿಮ್ಮನ್ನು ಏನೇನೋ ಅಂದುಬಿಟ್ಟೆ. ಐ ಆಮ್ ಸಾರಿ...'' ಅವನ ಹಣೆಯನ್ನು ಚುಂಬಿಸಿದಳು.

''ಪರವಾಗಿಲ್ಲ ಪ್ರೀತಿ ಇದ್ದ ಕಡೆ ಸಲುಗೆಯೂ ಇರುತ್ತೆ'' ನಿಧಾನವಾಗಿ ಅವಳನ್ನು ಎಬ್ಬಿಸಿದ. ಅವಳು ಅವನಿಗೆ ಒರಗಿದಳು.

''ಹೀಗೇ ಸದಾಕಾಲ ಇರೋಣ ಅಂತ ಅನ್ನಿಸುತ್ತೆ...''

''ನಾವು ಮನುಷ್ಯರು. ಹೀಗೇ ಒಬ್ಬರಿಗೊಬ್ಬರು ಅಂಟಿಕೊಂಡು ಇರುವುದಕ್ಕೆ ಸಾಧ್ಯವಿಲ್ಲ.''

''ನನಗೂ ಗೊತ್ತು... ಆದರೂ ಏನೇನೋ ಆಸೆ... ಎನಿವೇ ಥ್ಯಾಂಕ್ ಯೂ ಭಾಸ್ಕರ್... ಅಂತೂ ಕಡೆಗೂ ನನ್ನ ಮನಸ್ಸಿನಲ್ಲಿ ಏನಿದೆ ಅಂತ ಅರ್ಥವಾಯ್ತಲ್ಲ''

''ನಾನು ನಿಮಗೆ ಥ್ಯಾಂಕ್ಸ್ ಹೇಳಬೇಕು. ಇದು ನನ್ನ ಮೊದಲ ಅನುಭವ.''

''ಹೌದಾ ? ನಾನು ನಂಬಲ್ಲ... ನಿಜ ಹೇಳಿ, ನೀವು ನಿಮ್ಮ ಹೆಂಡತಿ...''

ಭಾಸ್ಕರ ಬೆಚ್ಚಿದ. ''ನನಗೆ ಮದುವೆಯಾಗಿದೆ ಅಂತ ನಿಮಗೆ ಹೇಗೆ ಗೊತ್ತಾಯ್ತು?'' ತೊದಲಿದ.

''ನಿಮ್ಮ ಮನೆಯಲ್ಲಿ ನಿಮ್ಮಿಬ್ಬರ ಫೋಟೋ ನೋಡಿದೆ.''

''ಆದರೂ... ನೀವು... ನನ್ನನ್ನು... ಕೇಳಲಿಲ್ಲ''

''ನೀವು ನಿಮ್ಮ ಹೆಂಡತಿಯೊಡನೆ ಮಾತನಾಡದೇ ಇದ್ದುದನ್ನು ಗಮನಿಸಿದೆ. ಇರಲಿ, ಆ ವಿಷಯಗಳು ನಮ್ಮಿಬ್ಬರ ಸಂಬಂಧದ ಮಧ್ಯೆ ಸುಳಿಯುವುದು ಬೇಡ....''

''ನಿಜ ಹೇಳ್ತೀನಿ ಮಾಲಾ... ಇದುವರೆಗೂ ನನ್ನ ಹೆಂಡತಿಯ ಮೈಯನ್ನು ನಾನು ಮುಟ್ಟಿಲ್ಲ. ಅದೇ ವಿಷಯಕ್ಕೆ ನಮ್ಮಿಬ್ಬರಲ್ಲಿ ಮನಸ್ತಾಪ... ಆದರೆ ಅವಳೆಂದೂ ಇಷ್ಟು ಆಕರ್ಷಕವಾಗಿ ನನ್ನ ಮನವನ್ನು ಸೆಳೆದಿಲ್ಲ...''

''ನಿಮ್ಮ ಹೆಂಡತಿಯೊಡನೆ ನಿಮ್ಮ ಸಂಬಂಧ ಹೇಗಿದೆಯೋ ಅದರಲ್ಲಿ ನನಗೆ ಆಸಕ್ತಿ ಇಲ್ಲ. ಆದರೆ ನೀವು ನನಗೆ ಬೇಕು, ನನಗೆ ಮೋಸ ಮಾಡಬಾರದು.''

''ಇಲ್ಲ ಮಾಲಾ... ನಾನು ನಿಮಗೆ ಅನ್ಯಾಯ ಮಾಡುವುದಿಲ್ಲ. ನಾನು ಸದಾ ನಿಮ್ಮೊಂದಿಗೆ ನಿಮಗೆ ಬೇಕಾದವನಾಗಿರುತ್ತೇನೆ. ಪ್ರಾಮಿಸ್...''

ಮಾಲಾ ಆನಂದದಿಂದ ಕಣ್ಣೀರು ಸುರಿಸಿದಳು. ''ನನಗೆ ನಿಮ್ಮಂತಹವರು ಪತಿಯಾಗಬೇಕಾಗಿತ್ತು. ನನ್ನ ದುರಾದೃಷ್ಟ... ಹೋಗಲಿ ಬಿಡಿ. ನೀವು ಮದುವೆಯಾದವರು ಅಂತ ರಿಗ್ರೆಟ್ ಏನೂ ಇಲ್ಲ. ನಿಮ್ಮ ಮನಸ್ನಲ್ಲಿ ಏನಿದೆಯೋ ಅದಕ್ಕೆ ನಾನು ಕೇರ್ ಮಾಡಲ್ಲ.''

ಭಾಸ್ಕರ ಮಾತನಾಡಲಿಲ್ಲ. ಅವನಿಗೆ ನಾನಾ ಚಿಂತೆ. ''ಮಧು ಇನ್ನೂ ಮೂರು ದಿನಗಳು ಊರಿನಲ್ಲಿರಲ್ಲ. ನೀವೇಕೆ ನಮ್ಮ ಮನೆಯಲ್ಲಿ ಇರಬಾರದು?''

''ನೋಡಿದವರು ಏನಂದುಕೊಂಡಾರು...''

''ಅಕ್ಕಪಕ್ಕದವರು ನಮ್ಮ ಮನೆಯ ಮಾತಿಗೆ ಬರುವುದಿಲ್ಲ. ಅಡಿಗೆಯವರನ್ನು ನಾನೇ ಊರಿಗೆ ಕಳಿಸಿದೀನಿ. ಯಾರಿಗೂ ಗೊತ್ತಾಗುವುದೇ ಇಲ್ಲ.''

''ಅಂತೂ ನೀವೇ ಎಲ್ಲಾ ಪ್ಲಾನ್ ಮಾಡಿದೀರಿ...''

''ನೀವೇನಾದರೂ ಪ್ಲಾನ್ ಮಾಡ್ತೀರೇನೋ ಅಂತ ಕಾದಿದ್ರೆ... ಅದು ಈ ಜನ್ಮದಲ್ಲಿ ಕೈಗೂಡುತ್ತಿರಲಿಲ್ಲ ನನಗೆ ಗೊತ್ತು.''

''ನಮಗೆ ಕೆಲವು ನಿಬಂಧನೆಗಳಿವೆ. ಅದಕ್ಕೆ ಅಂಜಬೇಕಲ್ಲ.''

''ನಾನು ನಿಮ್ಮ ಜೊತೆ ಇರುವವರೆಗೆ ನಿಮಗೆ ಯಾವ ಅಂಜಿಕೆಯೂ ಇಲ್ಲ.''

''ನಿಮ್ಮ ಅಣ್ಣ ಅತ್ತಿಗೆಗೆ ತಿಳಿದರೆ... ಏನು ಗತಿ? ಅಲ್ಲದೇ ನಾನು ಯಾವಾಗಲೂ ನಿಮ್ಮ ಮನೇಗೇ ಬರಕ್ಕಾಗಲ್ಲ...''

''ನಾನೇ ನಿಮ್ಮ ಮನೆಗೆ ಬರ್ತೀನಿ...''

''ಅದು ಮನೆಯಲ್ಲ ರೂಮು... ಅಲ್ಲಿ ಯಾವ ಅನುಕೂಲಗಳಿಲ್ಲ. ನಿಮಗೆ ಸರಿ ಹೋಗುವಂತಹ ಸ್ಥಳವೇ ಅಲ್ಲ.''

''ಆದಷ್ಟು ಬೇಗ ಒಂದು ಒಳ್ಳೆಯ ಮನೆಯನ್ನು ಮಾಡಿ... ಅಲ್ಲಿಯವರೆಗೆ ನಮ್ಮ ಗೆಸ್ಟ್‌ಹೌಸ್ ಇದೆಯಲ್ಲ...'' ಅವಳೇ ಉಪಾಯವನ್ನು ಸೂಚಿಸಿದಳು.

ಮುಂದಿನ ಎರಡು ರಾತ್ರಿ ಭಾಸ್ಕರ ಅವಳ ಮನೆಯಲ್ಲಿಯೇ ಉಳಿದ. ತಿಂಡಿ, ಕಾಫಿ, ಊಟ ಹೋಟೆಲ್ಲಿನಲ್ಲಿ ನಡೆಯುತ್ತಿತ್ತು. ರಾತ್ರಿ ಸರಸ ಸಂಭಾಷಣೆ, ಪ್ರಣಯ ಲೀಲೆಯಲ್ಲಿ ಸಮಯ ಕಳೆದುಹೋಗಿತ್ತು. ತನ್ನ ಜೀವನದ ಅತ್ಯಮೂಲ್ಯ ದಿನಗಳು ಇವು ಎಂದು ಮಾಲಾ ತೃಪ್ತಿಪಟ್ಟುಕೊಂಡಳು.

ಭಾರ್ಗವ ತನ್ನನ್ನು ತಿರಸ್ಕರಿಸಿದವನಲ್ಲವೇ? ಮಧು ನನಗೆ ಮೋಸ ಮಾಡಿದ ನಲ್ಲವೇ? ಧ್ರುವ ನನ್ನನ್ನು ಬ್ಲಾಕ್‌ಮೇಲ್ ಮಾಡಿದನಲ್ಲವೆ? ಇವರುಗಳಿಗೆಲ್ಲಾ ಸರಿಯಾದ ಬುದ್ಧಿ ಕಲಿಸುತ್ತಿದ್ದೇನೆ. ಸೇಡಿಗೆ ಸೇಡು... ಮೋಸಕ್ಕೆ ಮೋಸ... ಸರಿಯಾದ ಪ್ರತೀಕಾರ! ಭಾಸ್ಕರನಿಗೋಸ್ಕರ ನಾನು ಎಚ್ಚರ ವಹಿಸಬೇಕು. ಗೊತ್ತಾದರೆ ಮಧು ಅವನನ್ನು ಕೆಲಸದಿಂದ ವಜಾ ಮಾಡುವುದಂತೂ ಖಂಡಿತಾ. ಭಾಸ್ಕರ ನನಗೆ ನೀಡಿರುವ ಸುಖಕ್ಕೆ ನಾನು ಆಜೀವ ಋಣಿಯಾಗಿರಬೇಕು ಎಂದುಕೊಂಡಳು.

ಸಕ್ಕರೆ ನಿದ್ದೆಯಲ್ಲಿ ಮಲಗಿದ್ದವಳನ್ನು ಭಾಸ್ಕರ ಎಚ್ಚರಿಸಿದ. ''ಮಾಲಾ... ಫೋನು...'' ಮಾಲಾ ಕಣ್ಣುಬಿಟ್ಟಳು.

''ಫೋನು ರಿಂಗಾಗ್ತಿದೆ ನೋಡ್ತೀರಾ?''

''ನೀವೇ ತಗೋಬಾರದಾ?...'' ಆಕಳಿಸಿದಳು.

''ನಾನು ಇಲ್ಲಿ ಯಾಕೆ ಇದೀನಿ ಅನ್ನೋ ಅನುಮಾನ ಬರಲ್ವಾ? ಮೊದಲು ಯಾರು ಅಂತ ನೋಡಿ ಇಲ್ಲದಿದ್ದರೆ ಮನೆಗೇ ಬಂದುಬಿಡ್ತಾರೆ'' ಮಾಲಾ ಎದ್ದು ರಿಸೀವರ್ ನ್ನೆತ್ತಿಕೊಂಡಳು. ಅತ್ತಲಿಂದ ವಸುಧಾಳ ಧ್ವನಿ ಕೇಳಿಸಿತು.

''ಹಲೋ ಮಾಲಾ... ಇನ್ನೂ ಎದ್ದಿಲ್ವಾ? ಗಂಟೆ ಎಂಟಾಗಿದೆ.''

''ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಬೆಳಗಿನ ಝಾವಕ್ಕೆ ಸ್ವಲ್ಪ ನಿದ್ದೆ ಬಂತು.''

''ಬರ್ತೀನಿ ಅಂತ ಅಂದೋಳು ಬರಲೇ ಇಲ್ಲ. ಇವತ್ತು ನಾನು ಚೆಕಪ್‌ಗೆ ಹೋಗ ಬೇಕು. ನನ್ನ ಜೊತೆ ಬರ್ತೀಯಾ?''

''ಹೂಂ, ಬರ್ತೀನಿ, ಎಷ್ಟು ಹೊತ್ತಿಗೆ ?''

''ಇನ್ನು ಒಂದು ಗಂಟೆಯೊಳಗೆ ಬರಕ್ಕಾಗುತ್ತಾ? ನಾನು ಕಾಯ್ತಾ ಇರ್ತೀನಿ... ನಿನ್ನ ಅಣ್ಣ ಫೋನು ಮಾಡಿದ್ರಾ?''

''ಇಲ್ಲ, ಯಾರ ಫೋನೂ ಇಲ್ಲ. ನಿನಗೆ ಮಾಡಲಿಲ್ವಾ?''

''ಇಲ್ಲ, ನೋಡು ನಿಮ್ಮ ಅಣ್ಣನಿಗೆ ಎಷ್ಟು ಹಠ...''

''ಅವನ ವಿಷಯ ನನಗೆ ಹೊಸದೇನಲ್ಲ, ಹೊಸದೇನಾದ್ರೂ ಇದ್ರೆ ಹೇಳು. ಆಫೀಸಿಗೆ ಬರಕ್ಕಾಗಲ್ಲ ಅಂತ ತಿಳಿಸಿಬಿಟ್ಟು ಇವತ್ತು ನಿನ್ನ ಜೊತೇಲೇ ಇರ್ತೀನಿ.''

''ಹೂಂ, ಇಡ್ತೀನಿ'' ಎನ್ನುತ್ತಾ ಲೈನ್ ಕಟ್ ಮಾಡಿದಳು. ಅವಳ ಮಗ್ಗುಲಲ್ಲೇ ಕುಳಿತಿದ್ದ ಭಾಸ್ಕರ ಮಾತುಗಳನ್ನು ಕೇಳಿಸಿಕೊಂಡಿದ್ದ.

''ಹಾಗಾದ್ರೆ ಆಫೀಸಿಗೆ ಬರಲ್ವಾ ಮೇಡಂ...''

''ನಾನು ಹೋಗಲೋ ಬೇಡವೋ...''

''ಹೋಗಿ... ಹೋಗಿ... ಇಲ್ಲದಿದ್ದರೆ ನಿಮ್ಮ ಗೆಳತಿ ನಿಮ್ಮನ್ನು ನೋಡೋಕೆ ಅಂತ ಇಲ್ಲಿಗೇ ಬಂದುಬಿಡ್ತಾರೆ. ಆದರೆ ರಾತ್ರಿ ಮಾತ್ರ ಅಲ್ಲಿರಬೇಡಿ. ಇಲ್ಲಿಗೇ ಬಂದುಬಿಡಿ. ನಾನು ಕಾಯ್ತಾ ಇರ್ತೀನಿ...''

''ಅತಿಯಾಯ್ತು ನಿಮ್ಮದು. ಎರಡು ದಿನಗಳ ಹಿಂದೆ ಕೂಡಾ, ನೀವು ಒಂಟಿಯಾಗಿಯೇ ಇದ್ದಿರಿ... ಆಸೆ ನೋಡು...'' ಕೆನ್ನೆಯ ಗುಳಿಯಲ್ಲಿ ಬೆರಳಾಡಿಸಿದಳು.

''ಏನು ಮಾಡೋದು. ಎಲ್ಲಾ ಮೇಡಂರವರ ಕೃಪೆ. ಅವಕಾಶ ಇದ್ದಾಗ ಅದನ್ನು ಉಪಯೋಗಿಸಿಕೊಳ್ಳಬೇಕು. ನಿಮ್ಮಣ್ಣ ಬಂದ ಮೇಲೆ... ನಾನು ಮತ್ತೆ ಬ್ರಹ್ಮಚಾರಿ...'' ನಕ್ಕ.

''ರೀ, ಬ್ರಹ್ಮಚಾರಿಗಳೇ ಸ್ವಲ್ಪ ಕಾಫಿ ಮಾಡಿಕೊಡಿ... ನಾನು ಅಲ್ಲೀವರೆಗೂ ಮಲಗಿರುತ್ತೀನಿ'' ಎಂದು ಹೊದಿಕೆ ಎಳೆದುಕೊಂಡಳು. ಅವನೂ ಆ ಹೊದಿಕೆಯೊಳಗೆ ತೂರಿಕೊಂಡ. ಮಾಲಾ ಅವನನ್ನು ತೋಳಿನಿಂದ ಬಳಸಿದಳು.

ಭಾಸ್ಕರ ಮಾಲಾಳನ್ನು ವಸುಧಾಳ ಮನೆಯ ಮುಂದೆ ಇಳಿಸಿ, ತಾನು ತನ್ನ ಮನೆಯ ಕಡೆಗೆ ಹೋದ...

''ಯಾಕೆ ಲೇಟು... ಆಟೋ ಸಿಗಲಿಲ್ವಾ?...''

''ಭಾಸ್ಕರ ಬಂದು ಬಿಟ್ಟು ಹೋದರು...''

''ಆಫೀಸಿಗೆ ಹೋಗಿದ್ಯಾ?...''

''ಇಲ್ಲ, ಯಾವುದೋ ವಿಷಯ ಕೇಳಲು ಮನೆಗೆ ಬಂದಿದ್ದರು. ಹಾಗೇ ಡ್ರಾಪ್ ಕೊಟ್ಟರು. ನೀನ್ಯಾಕೆ ತನಿಖೆ ಮಾಡ್ತಾ ಇದೀಯ?''

''ತನಿಖೆ ಏನಿಲ್ಲ... ಏನೋ ಹೊಸಕಳೆ ಬಂದಿದೆ ನಿನಗೆ. ಅದೇನು ಅಂತ ಯೋಚಿಸ್ತಿದ್ದೆ.''

''ನನ್ನ ವಿಷಯಕ್ಕೆ ನೀನ್ಯಾಕೆ ತಲೆ ಕೆಡಿಸಿಕೊಳ್ತೀಯ... ಎರಡು ದಿನದಿಂದ ಮಧು ಮನೇಲಿಲ್ಲವಲ್ಲ, ಹಾಯಾಗಿದ್ದೆ. ಒಂಥರಾ ಛೇಂಜ್... ಖುಷಿಯಾಗಿದ್ದೀನಿ ಅಷ್ಟೇ...''

''ಅಷ್ಟೇನಾ ? ನಿಜವಾಗಿಯೂ...''

''ಹೇಳೋ ವಿಷಯವಿದ್ದರೆ ನಾನೇ ಹೇಳ್ತಿದ್ದೆ. ತನಿಖೆ ಸಾಕು... ಏನಂತಾನೆ ನಿನ್ನ ಮಗ...'' ಎನ್ನುತ್ತಾ ಹೊಟ್ಟೆಯ ಮೇಲೆ ಕೈ ಇಟ್ಟಳು.

''ಈ ಮಗು ಹುಟ್ಟುವ ಮೊದಲೇ ನಮ್ಮಿಬ್ಬರಿಗೆ ವಿರಸವನ್ನು ತಂದಿಟ್ಟಿದೆ. ನನಗೆ ಅದೇ ಬೇಜಾರು... ಒಂದು ಕೆಲಸ ಮಾಡ್ತೀಯಾ? ನನ್ನ ಮಗೂನ ನೀನು ಸಾಕಿಕೊಳ್ತೀಯಾ ? ನಿಮ್ಮಣ್ಣನ ಜವಾಬ್ದಾರಿ ಕಡಿಮೆ ಆಗುತ್ತೆ.''

''ಬೇಡಮ್ಮ ಬೇಡ. ನಿನ್ನ ಮಗು ನಿನಗೇ ಇರಲಿ. ನನಗೆ ಮಗು ಬೇಕಾದಾಗ, ನಾನೇ ಹೊತ್ತು ಹೆತ್ತು ಸಾಕಿ, ಬೆಳೆಸ್ತೀನಿ. ನನಗೆ ನನ್ನದೇ ಸ್ವಂತ ಮಗು ಬೇಕು. ಬಾಡಿಗೆಯ ಮಗು ಬೇಡ.'' ವಸುಧಾ ಪೆಚ್ಚಾದಳು.

''ಇದೇನೇ ಈಗ ಹೀಗೆ ಹೇಳ್ತಿದೀಯ. ಮೂರು ದಿನಗಳ ಕೆಳಗೆ ಇದ್ದ ಐಡಿಯಾ ಬದಲಾಗಿದೆಯಲ್ಲ ಅಥವಾ ನಾನು ತಾಯಿಯಾಗ್ತಿದೀನಿ ಅಂತ ನಿನಗೆ ನನ್ನ ಮೇಲೆ ಕೋಪಾನೋ...''

''ಕೋಪಾನೂ ಇಲ್ಲ; ಅಸೂಯೆಯೂ ಇಲ್ಲ. ನಿನ್ನ ಮಗೂನ ನಾನು ಸಾಕಿ ಕೊಂಡರೆ ನೀನೇನು ಮಾಡ್ತೀಯ... ಬಿಡು. ಆ ಮಾತು ಈಗ ಯಾಕೆ? ನಡೀ ಡಾಕ್ಟರ ಹತ್ತಿರ ಹೋಗೋಣ.''

ಇಬ್ಬರೂ ಡಾಕ್ಟರ ಬಳಿಗೆ ಬಂದರು. ಡಾಕ್ಟರು ವಸುಧಾಳನ್ನು ಒಳಗಿನ ಕೋಣೆಗೆ ಕರೆದುಕೊಂಡು ಹೋದರು. ಮಾಲಾ ಹೊರಗೆ ಅಡ್ಡಾಡುತ್ತಿದ್ದಳು. ಒಬ್ಬ ನರ್ಸು ಅವಳ ಬಳಿಗೆ ಬಂದು, ''ನಮಸ್ಕಾರ ಮೇಡಂ'' ಎಂದಳು. ಮಾಲಾ ''ನಮಸ್ಕಾರ ಸಿಸ್ಟರ್'' ಎಂದಳು. ''ಡಾಕ್ಟರು ನಿಮ್ಮನ್ನು ಕರೆಯುತ್ತಿದ್ದಾರೆ'' ಎಂದು ಸಿಸ್ಟರ್ ನುಡಿದಾಗ ಮಾಲಾ ಗಾಬರಿಗೊಂಡಳು. ಗಡಬಡಿಸಿ ಒಳಗೆ ಬಂದಳು. ವಸುಧಾ ಸಹ ಅಲ್ಲೇ ಕುಳಿತಿದ್ದಳು. ಡಾಕ್ಟರು ನುಡಿದಳು.

''ನಾನು ಏನನ್ನೂ ಮುಚ್ಚಿಡೋಕೆ ಇಷ್ಟಪಡಲ್ಲ. ಇವರ ಗರ್ಭಕೋಶದಲ್ಲಿ ಮಗೂಗೆ ಬೆಳೆಯಲು ಜಾಗವೇ ಇಲ್ಲ. ಹಾಗಾಗಿ ಮಗುವಿನ ಬೆಳವಣಿಗೆ ಸರಿಯಾಗಿಲ್ಲ. ಆದಷ್ಟು ಬೇಗ ಆಪರೇಷನ್ ಮಾಡಬೇಕು. ಅದಕ್ಕೆ ಮೊದಲು ಸ್ಕ್ರೀನಿಂಗ್ ಮಾಡಬೇಕು. ಸಾಕಷ್ಟು ಹಣ ಖರ್ಚಾಗುತ್ತದೆ. ನಿಮ್ಮ ಜೊತೆ ಯಾರಾದ್ರೂ ಗಂಡಸರು ಬಂದಿದಾರಾ?''

ವಸುಧಾ ಅಳಲು ಪ್ರಾರಂಭಿಸಿದಳು. ''ನೋಡಿ ವಸುಧಾರವರೇ, ಧೈರ್ಯವಾಗಿರಿ. ನಿಮ್ಮ ಪ್ರಾಣಕ್ಕೆ ಏನೂ ಅಪಾಯವಿಲ್ಲ. ಮಾಲಾ, ನಿಮ್ಮ ಅತ್ತಿಗೆಗೆ ಸಮಾಧಾನ ಹೇಳಿ. ಹಾಗೇ ನಿಮ್ಮ ಅಣ್ಣನಿಗೆ ತಕ್ಷಣಕ್ಕೆ ಬರುವಂತೆ ಫೋನು ಮಾಡಿ.''

''ಅವನು ಊರಲಿಲ್ಲ. ನಾಳೆ ನಾಡಿದ್ದರಲ್ಲಿ ಬರಬಹುದು. ಅಲ್ಲಿಯವರೆಗೆ ತಡೆಯೋಕೆ ಆಗಲ್ವಾ?''

''ಇಲ್ಲ. ಈಗಾಗಲೇ ಕೇಸ್ ಕಾಂಪ್ಲಿಕೇಟ್ ಆಗಿದೆ. ಬರ್ಸ್ಟ್ ಆಗುವ ಛಾನ್ಸ್ ಇದೆ. ಅವರು ತಕ್ಷಣವೇ ಬಂದರೆ ಒಳ್ಳೆಯದು'' ಎಂದು ಹೇಳಿ ಡಾಕ್ಟರು ಅವರಿಬ್ಬರನ್ನೂ ಅಲ್ಲಿಯೇ ಬಿಟ್ಟು ಹೊರಟು ಹೋಗಿದ್ದಳು. ಮಾಲಾ ಮೊದಲಿಗೆ ವಸುಧಾಳ ತಾಯಿಗೆ ಫೋನು ಮಾಡಿ ವಿಷಯವನ್ನು ತಿಳಿಸಿದ್ದಳು. ನಂತರ ಭಾಸ್ಕರನಿಗೆ, ತಕ್ಷಣವೇ ಹತ್ತು ಸಾವಿರ ಹಣವನ್ನು ತಂದುಕೊಡುವಂತೆ ಕೇಳಿದಳು.

''ಇದಕ್ಕೆಲ್ಲಾ ನಿಮ್ಮ ಅಣ್ಣನೇ ಕಾರಣ. ಮಗು ಹುಟ್ಟುವ ಮೊದಲೇ ಅಪಶಕುನ ನುಡಿದರು. ಈಗ ನೋಡು ಹೀಗಾಯ್ತು. ನಾನು ಅವರನ್ನು ಕ್ಷಮಿಸೋಲ್ಲ''

"ನಂಗೇನು ಹೇಳಬೇಕೋ ತಿಳೀತಿಲ್ಲ. ಶಕುನ ಗಿಕುನ ಎಲ್ಲಾ ಸುಳ್ಳು. ಸ್ಕ್ರೀನಿಂಗ್‌ನಲ್ಲಿ ರಿಸಲ್ಟ್ ಫೇವರಬಲ್ ಆಗಿರುತ್ತೆ. ಧೈರ್ಯವಾಗಿರು" ಸ್ನೇಹಿತೆಯ ಭುಜದ ಮೇಲೆ ಕೈ ಇಟ್ಟಳು. ಅಷ್ಟರಲ್ಲಿ ಭಾಸ್ಕರ ಹಣದೊಂದಿಗೆ ಬಂದ. ಅವನನ್ನು ಕಂಡೊಡನೆ ಮಾಲಾ ನೆಮ್ಮದಿಯ ನಿಟ್ಟುಸಿರು ಬಿಟ್ಟಳು.

"ಥ್ಯಾಂಕ್ ಗಾಡ್... ನೀವು ಬಂದದ್ದು ನನಗೆ ಬಲ ಬಂದಂತಾಯಿತು" ಎನ್ನುತ್ತಾ ಎಲ್ಲಾ ವಿಷಯವನ್ನೂ ತಿಳಿಸಿದಳು.

"ಐ ಆಮ್ ಸಾರಿ... ಹೀಗಾಗಬಾರದಾಗಿತ್ತು. ಈಗ ನಿಮ್ಮ ಅತ್ತಿಗೆ ಹೇಗಿದಾರೆ?"

"ಒಂದೇ ಸಮನೆ ಅಳ್ತಿದಾಳೆ. ಮಧೂಗೆ ವಿಷಯ ತಿಳಿಸಬೇಕು. ನೀವು ಫ್ಯಾಕ್ಸ್ ಮಾಡಿ, ತಕ್ಷಣವೇ ಬರಬೇಕಂತೆ ಅಂತ ಬಾಂಬೆ ಆಫೀಸಿಗೆ ತಿಳಿಸೋಕೆ ಆಗುತ್ತಾ?"

"ಓ.ಕೇ. ಮಾಡ್ತೀನಿ. ನಾನು ಡಾಕ್ಟರ ಹತ್ತಿರ ಮಾತನಾಡಲಾ?"

"ಡಾಕ್ಟರು ಬೇರೆ ಯಾವುದೋ ಕೇಸನ್ನು ಸ್ಟಡೀ ಮಾಡೋಕೆ ಅಂತ ಹೋಗಿದಾರೆ" ನರ್ಸ್ ಹೇಳಿದಾಗ ಭಾಸ್ಕರ ಆಫೀಸಿನ ಕಡೆಗೆ ಹೊರಟ.

ಅಷ್ಟರಲ್ಲಿ ವಸುಧಾಳ ತಂದೆತಾಯಿ ಬಂದರು. ಮತ್ತೊಮ್ಮೆ ಡಾಕ್ಟರು ಎಲ್ಲಾ ತಿಳಿಸಿ, ಆದಷ್ಟು ಬೇಗ ವಸುಧಾಳನ್ನು ಅಡ್ಮಿಟ್ ಮಾಡುವಂತೆ ತಿಳಿಸಿದರು. ಕೆಲವೇ ಸಮಯದಲ್ಲಿ ಅವಳನ್ನು ಅಡ್ಮಿಟ್ ಮಾಡಲಾಗಿತ್ತು. ಒಂದೊಂದಾಗಿ ಎಲ್ಲಾ ಟೆಸ್ಟ್‌ಗಳನ್ನೂ ಪ್ರಾರಂಭಿಸಿದ್ದರು. ವಸುಧಾ ಅಳುತ್ತಲೇ ಇದ್ದಳು. ಅವಳ ತಾಯಿಗೆ ಸಮಾಧಾನ ಹೇಳಿ ಹೇಳಿ ಸಾಕಾಗಿತ್ತು.

ಫ್ಯಾಕ್ಸ್ ತಲುಪಿದ ಕೂಡಲೇ ಮಧು ತಕ್ಷಣವೇ ಅಲ್ಲಿಂದ ಹೊರಟಿದ್ದ. ಮಧ್ಯ ರಾತ್ರಿಯ ಹೊತ್ತಿಗೆ ಅವನು ಮನೆಗೆ ಬಂದಾಗ ಮಾಲಾ ಒಬ್ಬಳೇ ಇದ್ದಳು. ಮಾಲಾ ವಿಶದವಾಗಿ ಎಲ್ಲಾ ವಿಷಯವನ್ನೂ ಹೇಳಿ, "ಅವಳೀಗ ತುಂಬಾ ಅಪ್ಸೆಟ್ ಆಗಿದಾಳೆ, ನೀನೇ ಸಮಾಧಾನ ಹೇಳಬೇಕು" ಎಂದಳು.

ಬೆಳಗಾಗುವುದನ್ನೇ ಕಾದಿದ್ದ ಮಧು ನರ್ಸಿಂಗ್ ಹೋಂಗೆ ಬಂದ. ಅಷ್ಟುಹೊತ್ತಿಗೆ ಅವಳನ್ನು ಆಪರೇಷನ್ ಥಿಯೇಟರ್‌ಗೆ ಕರೆದೊಯ್ದಾಗಿತ್ತು. ತಾನು ಡಾಕ್ಟರನ್ನು ಕಾಣಬೇಕೆಂದು ರಿಕ್ವೆಸ್ಟ್ ಮಾಡಿಕೊಂಡಾಗ ಆಕೆ ಅವನನ್ನು ತನ್ನ ರೂಮಿಗೆ ಕರೆಸಿಕೊಂಡಳು. ಮೆಡಿಕಲ್ ರಿಪೋರ್ಟ್‌ಗಳನ್ನೆಲ್ಲಾ ತೋರಿಸಿ ಆಪರೇಷನ್ ಅನಿವಾರ್ಯವಾಗಿದೆ ಎಂದಳು. ಮಧು ಏನೂ ಹೇಳುವಂತಿರಲಿಲ್ಲ, ವಸುಧಾಳನ್ನು ನೋಡುವ, ಮಾತನಾಡಿಸುವ ಧೈರ್ಯ ಸಾಲದೇ ಮನೆಗೆ ವಾಪಸ್ಸಾದ.

ಒಡಲಲ್ಲಿ ಮೊಳಕೆಯೊಡೆದ ಜೀವವೊಂದನ್ನು ಅದು ಬೆಳೆಯುವ ಮೊದಲೇ ಕಳೆದುಕೊಂಡು ವಸುಧಾ ಮಂಕಾಗಿದ್ದಳು. ಮಂಪರಿನಿಂದ ಹೊರಬಂದಾಗ ಮೊದಲು ಮಧುಕರನಿಗಾಗಿ ಅತ್ತಿತ್ತ ನೋಡಿದಳು. ಮಾಲಾ ಸಹ ಇರಲಿಲ್ಲ, ಕಣ್ಣಂಚಿನಿಂದ

ಧಾರಾಕಾರವಾಗಿ ನೀರು ಹರಿಯಿತು. ತಾಯಿಯೊಡನೆ ಮಾತನಾಡುವ ಮನಸ್ಸಾಗದೇ ಕಣ್ಣು ಮುಚ್ಚಿದಳು.

ಎರಡು ದಿನ ಕಳೆದ ನಂತರ, ವಸುಧಾಳ ಆರೋಗ್ಯ ಚೆನ್ನಾಗಿದೆಯೆಂದು ಡಿಸ್ಚಾರ್ಜ್ ಮಾಡಿದರು. ಅವಳು ತಾಯಿಯೊಂದಿಗೆ ಆ ಮನೆಗೇ ಹೋದಳು.

''ವಸುಧಾ ಡಿಸ್ಚಾರ್ಜ್ ಆಗಿ ಮನೆಗೆ ಹೋದಳಂತೆ. ಅವಳನ್ನು ಹೋಗಿ ನೋಡಿ ಮಾತನಾಡಿಸಿಕೊಂಡು ಬಾ...'' ಮಾಲಾ ಆಜ್ಞೆ ಮಾಡಿದಳು.

''ನೀನೂ ಬಾ... ನನಗೆ ಒಬ್ಬನಿಗೇ ಹೋಗೋಕೆ ಮುಜುಗರ...''

''ಬಾಯಿಗೆ ಬಂದ ಹಾಗೆ ಮಾತನಾಡಿ, ವಸುಧಾಳ ಮನಸ್ಸನ್ನು ನೋಯಿಸಿದೀಯ. ಹೋಗಿ ಕ್ಷಮೆ ಕೇಳು.''

''ನಾನೇನು ಆಡಬಾರದ ಮಾತನ್ನು ಆಡಿಲ್ಲ. ಎಷ್ಟೋ ಜನ ಅಬಾರ್ಷನ್ ಮಾಡಿಸ್ಕೊಳಲ್ವಾ?''

''ಇದು ಅಬಾರ್ಷನ್ ಅಲ್ಲ, ಹತ್ಯೆ. ನಿನ್ನ ಮಗುವಿನ ಹತ್ಯೆ. ನಿನಗೇನೂ ಅನ್ನಿಸ್ತಾ ಇಲ್ವಾ?...''

''ನೀನು ಕೆರಳಿಸಬೇಡ. ಈಗ ಏನು ಬರ್ತೀಯೋ ಇಲ್ಲವೋ?''

''ಓ.ಕೇ. ಬರ್ತೀನಿ ಆದರೆ ನಿನಗೋಸ್ಕರ ಅಲ್ಲ, ವಸುಗೋಸ್ಕರ'' ಎಂದು ನುಡಿದು ಅವಳೂ ಹೊರಟಳು.

ವಸುಧಾ ಗಂಡನನ್ನು ನೋಡಿ ಮುಖವನ್ನು ತಿರುಗಿಸಿದಳು. ಅವನು ಅವಳ ಬಳಿ ಕುಳಿತ. ''ಐ ಆಮ್ ಸಾರಿ ವಸು... ಈಗ ಹೇಗಿದೀಯಾ...'' ವಿಚಾರಿಸಿದ.

''ಇನ್ನೂ ಸತ್ತಿಲ್ಲ, ಬದುಕಿದೀನಿ...'' ದುಗುಡದಿಂದ ನುಡಿದಳು.

''ಹಾಗೆಲ್ಲ ಯಾಕೆ ಮಾತಾಡ್ತೀಯ... ನಾನು ಅಬಾರ್ಷನ್ ಮಾಡಿಸ್ಕೋ ಅಂತ ಹೇಳಿದ್ದೇ ಒಂದು ದೊಡ್ಡ ತಪ್ಪಾ? ಎಷ್ಟೋ ಜನ ಹೆಂಗಸರು ಮಾಡಿಸ್ಕೊಳಲ್ಲವಾ?''

''ಎಲ್ಲಾ ಸರಿಯಾಗಿದ್ದಿದ್ರೆ ನಾನು ಅಬಾರ್ಷನ್ ಮಾಡಿಸಿಕೊಳ್ಳುತ್ತಿರಲಿಲ್ಲ, ಇದಕ್ಕೆಲ್ಲ ನೀವೇ ಕಾರಣ. ನೀವು ಮಾತು ತಪ್ಪಿದ್ದಕ್ಕೆ ಶಿಕ್ಷೆ...''

''ಯಾರಿಗೆ ಮಾತು ಕೊಟ್ಟಿದ್ದೆ? ಏನು ಶಿಕ್ಷೆ? ಏನೇನೋ ಹೇಳಬೇಡ''

''ಮಾಲಾಳ ಮನೆಯನ್ನು ಮೋಸದಿಂದ ನಿಮ್ಮ ಹೆಸರಿಗೆ ಮಾಡಿಕೊಂಡಿದೀರಿ. ಅದನ್ನು ವಾಪಸ್ಸು ಕೊಡುವ ಮನಸ್ಸು ಮಾಡಿಲ್ಲ, ಆ ಅಪರಾಧಕ್ಕೆ ಈ ಶಿಕ್ಷೆ... ನಿಮಗೆ ನೆನಪಿದೆಯಾ? ನಾನು ಹುಟ್ಟುವ ಮಗುವಿನ ಮೇಲೆ ಆಣೆ ಹಾಕಿದ್ದೆ... ಅದಕ್ಕೆ ಹೆದರಿ ನೀವು ಅಬಾರ್ಷನ್ ಮಾಡಿಸ್ಕೋ ಅಂತ ಹೇಳಿದ್ರಿ... ಆದರೆ ಅಪರಾಧ ನಡೆದೇ ಹೋಯ್ತು. ನೀವು ಅಪರಾಧಿ ಅಂತ ಸಾಬೀತಾಯ್ತು. ನನಗಂತೂ ಅನ್ಯಾಯವಾಗಿ ಹೋಯ್ತು. ಮಾಲಾಳಿಗೆ ಮುಖ ಹೇಗೆ ತೋರಿಸ್ತೀರಿ...''

ಹೊರಗೆ ನಿಂತ ಮಾಲಾ ಈ ಮಾತುಗಳನ್ನು ಕೇಳಿಸಿಕೊಂಡಿದ್ದಳು. ನಿಧಾನವಾಗಿ ವಸುಧಾ ಆಡಿದ ಮಾತುಗಳು ಅರ್ಥವಾಗಿತ್ತು. ಮಧು ಮೇಲಿನ ಕಹಿ ಭಾವನೆ ಹೆಚ್ಚಾಯಿತು. ಅಲ್ಲಿ ನಿಲ್ಲಲು ಮನಸ್ಸಾಗದೇ ಸೀದಾ ಮನೆಗೆ ಬಂದುಬಿಟ್ಟಳು. ಅವನು ವಾಪಸ್ಸು ಬರುವುದನ್ನೇ ಎದುರು ನೋಡುತ್ತಿದ್ದಳು.

ಅವನು ಮನೆಯೊಳಗೆ ಕಾಲಿಟ್ಟವನು ಅಲ್ಲಿಯೇ ಕುಳಿತಿದ್ದವಳನ್ನು ಕಂಡು ಎಂದಿನಂತೆ ರೇಗಿದ.

"ಅದೇನು... ಹೇಳದೇ ಯಾಕೆ ಬಂದುಬಿಟ್ಟೆ? ಅವರೆಲ್ಲ ಏನಂದುಕೊಳ್ತಾರೆ?"

"ಯಾಕೆ ಬಂದೆ ಅನ್ನೋ ಕಾರಣಾನ ಅವರಿಗೆ ಹೇಳಿದರೆ ನಿನ್ನ ಬಗ್ಗೆ ಏನು ತಿಳಿದು ಕೊಳ್ತಾರೆ ಗೊತ್ತಾ?"

"ಅಂಥದ್ದೇನು ಮಾಡಿದ್ದೀನಿ ನಾನು..."

"ನೀನು ಏನು ಮಾಡದೇ ಬಿಟ್ಟಿದೀಯ ಅನ್ನೋದು ಎಲ್ಲರಿಗೂ ಗೊತ್ತು. ನೀನ್ಯಾಕೆ ಹೀಗೆ ಮಾಡಿದೆ? ನನಗೆ ಮೋಸ ಮಾಡಿ ನನಗೆ ತಿಳಿಯದಂತೆ ನನ್ನ ಹೆಸರಿಗೆ ಇದ್ದ ಮನೆಯನ್ನು ನಿನ್ನ ಹೆಸರಿಗೆ ಹೇಗೆ ಮಾಡಿಸಿಕೊಂಡೆ? ನಾಚಿಕೆಯಾಗಲ್ವಾ?"

"ನೀನೇ ಬರೆದು ಕೊಟ್ಟಿದೀಯಲ್ಲ, ಮರೆತುಬಿಟ್ಯಾ?"

"ನಾನು ಭಾರ್ಗವನ ತರಹ ಅಲ್ಲ... ಅವನು ಪ್ರಾಮಾಣಿಕತನದಿಂದ ತನಗೆ ಯಾವ ಹಕ್ಕೂ ಇಲ್ಲ ಅಂತ ಎಲ್ಲವನ್ನೂ ನಿನಗೆ ಬರೆದುಕೊಟ್ಟ. ಆದರೆ ನನಗೆ ಪೂರ್ಣ ಹಕ್ಕು ಇದೆ. ನಾನು ಈ ಮನೆಯ ಮಗಳು. ಒಡಹುಟ್ಟಿದ ತಂಗಿಗೇ ಮೋಸ ಮಾಡಿದ ನೀಚ ನೀನು.... ಭಾರ್ಗವ ಎಲ್ಲವನ್ನೂ ಹಿಂತಿರುಗಿಸಿದುದನ್ನು ನೀನು ನನಗೆ ಹೇಳಲಿಲ್ಲ ಯಾಕೆ? ಅದರಲ್ಲೂ ಪಾಲು ಕೊಡಬೇಕಾಗುತ್ತಲ್ಲ ಅಂತ. ಎಲ್ಲವನ್ನೂ ನೀನೊಬ್ಬನೇ ಅನುಭವಿಸಬೇಕು ಅನ್ನೋ ದುರಾಸೆ ನಿನಗೆ..."

"'ಡ್ಯಾಡಿ ನನಗೆ ಮೋಸ ಮಾಡಿದರು. ಅದಕ್ಕೇ ಹೀಗೆ ಮಾಡಿದೆ.'

"ನನ್ನನ್ನ ಒಂದು ಮಾತು ಕೇಳಿದ್ದರೆ, ನಾನೇ ಸಂತೋಷವಾಗಿ ನಿನಗೆ ಬರೆದು ಕೊಡುತ್ತಿದ್ದೆ. ಆದರೆ ನೀನು ಇಷ್ಟು ಚೀಪ್ ಅಂತ ನನಗೆ ಗೊತ್ತಿರಲಿಲ್ಲ."

"ನಾನು ಯಾಕೆ ಹೀಗೆ ಮಾಡಿದೆ ಅಂತ ನಿನಗೆ ಕಾರಣ ಗೊತ್ತಿಲ್ಲ."

"ಯಾವುದೇ ಎಕ್ಸ್ಯೂಸ್ ಬೇಕಿಲ್ಲ. ಇನ್ನು ನಾನು ಈ ಮನೆಯಲ್ಲಿ ಇರುವುದಿಲ್ಲ. ನಾನು ಎಲ್ಲಾದರೂ ಹೊರಟು ಹೋಗ್ತೀನಿ."

"ನೀನು ಹೊರಟು ಹೋದರೆ ವಸುಧಾ ನನ್ನನ್ನು ಕ್ಷಮಿಸುವುದಿಲ್ಲ. ಅವಳು ಮತ್ತೆ ಈ ಮನೆಗೆ ಬರಬೇಕು ಅಂತ ನಿನಗೆ ಆಸೆ ಇದೆಯೋ ಇಲ್ಲವೋ?"

"ಅವಳು ಇಲ್ಲಿಗೆ ಮತ್ತೆ ಬರದಿದ್ದರೆ, ನನಗೆ ಏನೂ ನಷ್ಟವಿಲ್ಲ. ನಿನಗೇ ನಷ್ಟ... ಅವಳು ಈಗಾಗಲೇ ದೂರವಾಗಿದಾಳೆ. ಒಂಟಿ ಬಡುಕನ ತರಹ ನೀನೊಬ್ಬನೇ ಬಿದ್ದಿರು

ಈ ಮನೆಯಲ್ಲಿ'' ಎನ್ನುತ್ತಾ ತಾನು ಸಿದ್ಧವಾಗಿಟ್ಟುಕೊಂಡಿದ್ದ ಸೂಟ್‌ಕೇಸನ್ನು ಹಿಡಿದು ಹೊರಟಳು. ಅವನು ನಿಜಕ್ಕೂ ಗಾಬರಿಯಾದ.

''ಮಾಲಾ... ಇದೇನಿದು ಹುಡುಗಾಟ? ನನ್ನನ್ನು ಕೆಟ್ಟವನನ್ನಾಗಿ ಮಾಡಬೇಕೂಂತ ತೀರ್ಮಾನಿಸಿದೀಯ ಹೇಗೆ?''

''ನೀನು ಕೆಟ್ಟವನು ಅಂತ ಹೊಸದಾಗಿ ಯಾರೂ ಹೇಳಬೇಕಾಗಿಲ್ಲ... ನೀನು ಮೊದಲಿನಿಂದಲೂ ಕೆಟ್ಟವನೇ. ಬದುಕಿರೋವರೆಗೂ ಕೆಟ್ಟವನೇ...''

''ನನ್ನನ್ನು ಕೆಟ್ಟವನನ್ನಾಗಿ ಮಾಡಿದೋರು ಯಾರು ? ನಿನ್ನ ಡ್ಯಾಡಿ... ಆ ನಿನ್ನ ಭಾರ್ಗವ... ಅವನ ಜೊತೆ ಸೇರಿಕೊಂಡು ನನ್ನನ್ನು ಕೆಟ್ಟವನನ್ನಾಗಿ ಮಾಡಿದವಳು ನೀನು. ನಾನು ಕೆಟ್ಟವನಾಗಿದ್ದರೆ ಅದಕ್ಕೆ ನೀವುಗಳೇ ಕಾರಣ'' ಅವನೂ ಆಡಿದ.

''ನೀನು ಮೋಸಗಾರ ಅಂತ ಡ್ಯಾಡಿಗೆ ತಿಳಿದಿತ್ತು. ಅದಕ್ಕೇ 'ವಿಲ್' ಬರೆಸಿದ್ದರು. ಆದರೂ ನೀನು ದ್ರೋಹ ಮಾಡಿದೆಯಲ್ಲಾ... ನಿನ್ನ ದ್ರೋಹದಿಂದ ಹಾಳಾದವಳು ನಾನು. ಆ ನಿನ್ನ ಸ್ನೇಹಿತನ್ನ ಮದುವೆಯಾಗೋ ಪ್ರಸಂಗ ಬಂತು. ನೀನು ನನ್ನನ್ನು ಅವನಿಗೆ ಮಾರಿಬಿಟ್ಟಿದೀಯ... ಹೇಗೆ? ದುಡ್ಡಿನ ಆಸೆಗೆ?''

''ಏನೇನೋ ಕೊಳಕು ಕೊಳಕಾಗಿ ಮಾತನಾಡಬೇಡ. ಸ್ವಲ್ಪ ಘನತೆ, ಗೌರವ ಇರಲಿ. ಧ್ರುವ ಏನೂ ಕಳಪೆ ಅಲ್ಲ. ಅವನು ನಿನ್ನನ್ನು ಮದುವೆಯಾಗುವ ಆಸೆಯನ್ನು ತೋರಿದ. ಅದಕ್ಕೆ ಭಾರ್ಗವ, ಭಟ್ಟರು ಇಬ್ಬರೂ ವಿರೋಧ ತೋರಿದರು... ಆಗ ಭಾರ್ಗವನ ಮನಸ್ನಲ್ಲಿ ಏನಿದೆ ಅಂತ ತಿಳಿಯಿತು. ಅವನು ನಿನ್ನನ್ನು ಮದುವೆಯಾಗಿ ಈ ಆಸ್ತಿಯನ್ನೆಲ್ಲಾ ಲಪಟಾಯಿಸಬೇಕು ಅಂತ ಪ್ಲಾನ್ ಮಾಡಿದ್ದ. ಮನೆ ನಿನ್ನ ಹೆಸರಿನಲ್ಲೇ ಇದ್ದಿದ್ದರೆ ನಿನ್ನನ್ನ ಪುಸಲಾಯಿಸಿ ಇಷ್ಟು ಹೊತ್ತಿಗೆ ಮನೆಯನ್ನು ಮಾರಿಸಿ, ದುಡ್ಡು ಮಾಡಿಕೊಳ್ಳುತ್ತಿದ್ದ. ನಿನಗೋ ಭಾರ್ಗವನ ಮೇಲೆ ಬಹಳ ಬಹಳ ನಂಬಿಕೆ. ಅವನು ಅದಕ್ಕೆ ಅರ್ಹನಾಗಿರಲಿಲ್ಲ''

''ಭಾರ್ಗವ ಅಂಥೋನಲ್ಲ ಅಂತ ನಿನಗೂ ಗೊತ್ತು. ಏನೇನೋ ಕತೆಯನ್ನು ಕಟ್ಟಿ ನನಗೇ ಹೇಳಬೇಡ... ನಿನ್ನಂಥೋನ ಮನೆಯಲ್ಲಿ ಇರೋಕೆ ನನ್ನ ಮನಸ್ಸು ಒಪ್ಪುತ್ತಿಲ್ಲ'' ಎನ್ನುತ್ತಾ ಸೂಟ್‌ಕೇಸನ್ನು ಹಿಡಿದು ಬಾಗಿಲನ್ನು ದಾಟಿದಳು. ಹೋದರೆ ಹೋಗಲಿ, ಇನ್ನೆಲ್ಲಿಗೆ ಹೋಗ್ತಾಳೆ, ವಸುಧಾಳ ಮನೆಗೆ ಹೋಗ್ತಾಳೆ ಅಂತಂದುಕೊಂಡು ಮತ್ತೆ ಅವಳನ್ನು ತಡೆಯಲಿಲ್ಲ.

ಆಟೋರಿಕ್ಷಾ ಹಿಡಿದು, ಮಾಲಾ ಸೀದಾ ಭಾಸ್ಕರನ ಮನೆಗೆ ಬಂದಳು. ಆ ಹೊತ್ತಿನಲ್ಲಿ ಅವಳು ಏಕಾಏಕಿ ಬಂದುದನ್ನು ಕಂಡು ಭಾಸ್ಕರ ನಿಜಕ್ಕೂ ಗಾಬರಿಗೊಂಡ.

''ನಾನು ಈಗ ನಿರಾಶ್ರಿತಳಂತೆ ನಿಮ್ಮ ಮನೆಗೆ ಬಂದುಬಿಟ್ಟಿದೀನಿ. ನನಗೆ ಎಂಟ್ರೀ ಇದೆ ತಾನೇ...'' ಪೆಚ್ಚಾಗಿ ನಗುತ್ತಾ ಕೇಳಿದಳು.

''ಓ ಷೂರ್... ನನ್ನ ಮನೆ ಚಿಕ್ಕದು. ಆದರೆ ನನ್ನ ಹೃದಯ ಮಾತ್ರ ದೊಡ್ಡದು'' ಎಂದು ಕೈಗಳನ್ನು ಅಗಲ ಮಾಡಿ ತೋರಿದ. ಅವಳು ಮಂದಹಾಸವನ್ನು ಬೀರುತ್ತಾ ಆ ಕೈಗಳೊಳಗೆ ಬಂಧಿಯಾದಳು. ಅವನು ಅವಳನ್ನು ತುಂಬಿಕೊಂಡ.

''ನಾನು ಇಲ್ಲಿ ಇದ್ದರೆ ನಿಮಗೆ ತೊಂದರೆ ಏನಿಲ್ಲ ತಾನೇ...''

''ನನಗೇಕೆ ತೊಂದರೆ? ನಿಮಗೇ ತೊಂದರೆ, ಇಲ್ಲಿ ಯಾವ ಅನುಕೂಲಗಳೂ ಇಲ್ಲ... ಬಡವನ ಕುಟೀರ'' ಎಂದ...

''ನನಗೆ ಯಾವ ಕಂಫರ್ಟ್ಸ್ ಬೇಡ ಭಾಸ್ಕರ್... ನನಗೆ ನಿಮ್ಮ ಸಪೋರ್ಟ್ ಬೇಕು. ನೀವೂ ಇಲ್ಲದೇ ಇದ್ದಿದ್ದರೆ, ಏನು ಮಾಡಬೇಕೋ ಗೊತ್ತಾಗುತ್ತಿರಲಿಲ್ಲ'' ಅವನ ಕೈ ಅವಳ ಬೆನ್ನ ಮೇಲೆ ಹರಿದಾಡಿದವು.

''ನನಗೆ ಹೊಟ್ಟೆ ಹಸಿಯುತ್ತಿದೆ. ತಿನ್ನೋಕೆ ಏನಾದ್ರೂ ಇದೆಯಾ?''

''ಮೆಸ್‌ನವರು ಕ್ಯಾರಿಯರ್ ತಂದಿಟ್ಟಿದಾನೆ. ಒಣಕಲು ಚಪಾತಿ, ಎಂಥದೋ ಒಂದು ಪಲ್ಯ, ಮೊಸರನ್ನ, ನೆಂಚಿಕೊಳ್ಳಲು ಉಪ್ಪಿನಕಾಯಿ ಇರುತ್ತೆ...'' ಅವಳಾಗಲೇ ಟೇಬಲ್ ಬಳಿಗೆ ಹೋಗಿಯಾಗಿತ್ತು. ಇಬ್ಬರೂ ಏನಿತ್ತೋ ಅದನ್ನು ಹಂಚಿಕೊಂಡು ತಿಂದರು.

''ನನಗೆ ತುಂಬಾ ನಿದ್ದೆ ಬರ್ತಿದೆ'' ಎನ್ನುತ್ತಾ ಅಲ್ಲಿದ್ದ ಮಂಚದ ಮೇಲೆ ಹೋಗಿ ಬಿದ್ದುಕೊಂಡಳು. ಭಾಸ್ಕರ ಅವಳಿಗೆ ಹೊದಿಕೆಯನ್ನು ಹೊದಿಸಿದ. ಅವಳ ಕಣ್ಣುಗಳು ಅವನನ್ನು ಆಹ್ವಾನಿಸಿದವು. ಅವನೂ ಆ ಹೊದಿಕೆಯೊಳಗೆ ತೂರಿಕೊಂಡ. ಅವಳ ಕೈಗಳು ಅವನನ್ನು ಬಳಸಿದವು......

ಮಾಲಾ ಅತ್ತ ಹೋದ ಮೇಲೆ ಮಧುಕರ ಒಬ್ಬನೇ ಕುಳಿತು ನಡೆದ ಘಟನೆಯನ್ನೆಲ್ಲಾ ನೆನಪಿಸಿಕೊಂಡ. ಮಾಲಾ ಮಾಡಿದ್ದು ಸರಿಯಲ್ಲ ಎಂದೇ ಅನಿಸಿತ್ತು. ಧ್ರುವನೊಡನೆ ನೆಟ್ಟಗೆ ಸಂಸಾರ ಮಾಡದೇ ಇಲ್ಲಿ ಇರುವುದೇ ಭಾರಿ ತಪ್ಪು ಎಂದೆನಿಸಿತ್ತು. ಆದರೆ ಏಕೋ ಏನೋ ಬಲವಂತ ಮಾಡಲು ಹೆದರುತ್ತಿದ್ದ. ಧ್ರುವನೂ ಆಕ್ಷೇಪಿಸಿದ್ದ. ''ನಿನ್ನ ತಂಗಿ ನನಗೆ ಕೈಕೊಟ್ಟಳು. ನೀನು ನನ್ನ ಸ್ನೇಹಿತ ಅಂತ ಸುಮ್ಮನಿದೀನಿ. ಇಲ್ಲದಿದ್ದರೆ ಅವಳಿಗೆಸರಿಯಾಗಿ ಬುದ್ಧಿ ಕಲಿಸುತ್ತಿದ್ದೆ'' ಎಂದಿದ್ದ.

''ಅವಳೀಗ ನಿನ್ನ ಹೆಂಡತಿ. ನಿನ್ನ ಹಕ್ಕು ಅವಳ ಮೇಲಿದೆ... ನನ್ನನೆವ ಹೇಳಬೇಡ. ಅವಳನ್ನು ಒಲಿಸಿಕೊಳ್ಳುವ ಜಾಣತನ ನಿನಗಿರಬೇಕು.''

''ನಿನ್ನ ತಂಗಿಯ ಬಿಹೇವಿಯರ್ ನಾರ್ಮಲ್ ಅಲ್ಲ. ಯಾವುದಾದರೂ ಸೈಕಿಯಾಟ್ರಿಸ್ಟ್‌ಗೆ ತೋರಿಸಬೇಕು.'' ಪ್ರತಾಪ ಹೇಳಿದ್ದ. ಈಗ ಆ ಮಾತುಗಳು ನೆನಪಾದವು. ಹೌದು ಅವನು ಹೇಳಿದ್ದು ನಿಜವಿರಬಹುದು. ಇವಳು ಒಂದು ವಿಚಿತ್ರ ಸ್ವಭಾವದ ಹೆಣ್ಣು. ವಸುಧಾಳಿಗೆ ಹೇಳಿ, ಡಾಕ್ಟರಿಗೆ ತೋರಿಸುವಂತೆ ಹೇಳಬೇಕು

ಎಂದುಕೊಂಡು ಅವಳಿಗೆ ಫೋನು ಮಾಡಿದ. ಮಾಲಾ ಅಲ್ಲಿಗೆ ಬಂದಿಲ್ಲವೆಂದು ತಿಳಿದಾಗ ಗಾಬರಿಯಾಗಿತ್ತು. ಅವಳೂ ಆತಂಕಗೊಂಡಳು. ಈ ಕತ್ತಲೆಯಲ್ಲಿ ಇನ್ಯಾರ ಮನೆಗೆ ಹೋಗಿರಬಹುದು ? ತನ್ನನ್ನು ಬಿಟ್ಟರೆ ಬೇರೆ ಸ್ನೇಹಿತೆಯರು ಇಲ್ಲ ಎನ್ನುವುದನ್ನು ತಿಳಿದಿದ್ದರೂ ಒಂದೆರಡು ಕಡೆ ಫೋನು ಮಾಡಿದ್ದಳು. ಆದರೆ ಅವಳು ಸಿಗಲಿಲ್ಲ

* * * *

ಬೆಳಿಗ್ಗೆ ಭಾಸ್ಕರ ಮಾಡಿಕೊಟ್ಟ ಬಿಸಿಯಾದ ಕಾಫಿಯನ್ನು ಕುಡಿಯುವಾಗ ಏನನ್ನೋ ಯೋಚಿಸಿ ವಸುಧಾಳಿಗೆ ಮಾಲಾ ಫೋನು ಮಾಡಿದಳು.

''ನಾನು ಗೆಸ್ಟ್‌ಹೌಸ್‌ನಲ್ಲಿದೀನಿ. ನನ್ನ ಮನೆಯನ್ನು ಮಧೂಗೆ ಬಿಟ್ಟುಕೊಟ್ಟು ಬಂದಿದೀನಿ. ನಿನಗೂ ತಿಳಿಸದೇ ಇರೋಕೆ ಮನಸ್ಸು ಒಪ್ಪಲಿಲ್ಲ...'' ಎಂದಿದ್ದಳು.

''ನೀನು ಮಾಡಿದ್ದು ಸರಿಯಲ್ಲ. ಅದು ನಿನ್ನ ಮನೆ... ಅಲ್ಲದೇ ಹಾಗೆಲ್ಲಾ ಒಬ್ಬಳೇ ಎಲ್ಲೆಲ್ಲೋ ಇರಬಾರದು. ರಾತ್ರಿ ಒಬ್ಬಳೇ ಮಲಗಿದ್ಯಾ ! ಭಯವಾಗಲಿಲ್ವಾ !''

''ಇಲ್ಲ ಒಬ್ಬಳೇ ಮಲಗಿರಲಿಲ್ಲ. ವಾಚ್‌ಮನ್ ಇದ್ದ... ನಾಯಿಗಳು ಇದ್ದವು. ಭಯ ಯಾಕೆ ?'' ಭಾಸ್ಕರನ ಕಡೆ ನೋಡಿ ನಕ್ಕಳು. ಭಾಸ್ಕರ ಹುಬ್ಬೇರಿಸಿದ.

''ವಾಚ್‌ಮನ್ ಏನಂದುಕೊಳ್ತಾನೆ? ಮನೆ ಜಗಳ ಮನೆಯೊಳಗೇ ಇರಬೇಕು. ನಗೆಪಾಟಲು ಆಗುತ್ತದೆ. ಅದನ್ನೆಲ್ಲಾ ಯೋಚಿಸಬೇಕು ಮಾಲಾ...''

''ಈಗಾಗಲೇ ನನ್ನ ಜೀವನ ನಗೆಪಾಟಲು ಆಗಿದೆ. ಎಲ್ಲರಿಗೂ ತಿಳಿಯಲಿ, ಮಧು ಅವಳ ತಂಗಿಗೇ ಮೋಸ ಮಾಡಿದ ಅಂತ''

''ಏನು ಮೋಸ ಆಗಿದೆಯೋ ಅದನ್ನು ನಾನು ಸರಿಮಾಡ್ತೀನಿ... ಪ್ಲೀಸ್ ಬಾ...''

''ಈಗ ನೀನೇ ವೀಕು... ಬಹಳ ಡಿಪ್ರೆಸ್ಡ್ ಆಗಿದೀಯ... ತವರುಮನೆ ಸೇರಿರುವವಳು ನನಗೆ ಏನು ಮಾಡಬಲ್ಲೆ? ಪರವಾಗಿಲ್ಲ ಬಿಡು, ನನ್ನನ್ನು ನಾನು ನೋಡಿಕೊಳ್ಳಬಲ್ಲೆ...''

''ಒಕೇ. ನಿನಗೋಸ್ಕರ ನನ್ನ ಅಹಂನ್ನು ಬಿಟ್ಟು ನಾನು ಅಲ್ಲಿಗೆ ಬರ್ತೀನಿ. ಆದರೆ ಒಂದು ಕಂಡೀಷನ್ನು. ನೀನೂ ಅಲ್ಲಿಗೆ ಬರಬೇಕು...''

''ನೀನೂ ಬರಬೇಡ, ನಾನೂ ಬರಲ್ಲ. ಅವನು ಒಂಟಿಬಡುಕನಾಗಿ ಅಲ್ಲಿ ಬಿದ್ದಿರಲಿ'' ಅವಳು ಫೋನನ್ನು ಕುಕ್ಕಿದಳು. ಭಾಸ್ಕರ ಸ್ನಾನಕ್ಕೆ ಹೋಗಿದ್ದ.

ವಸುಧಾ ತಕ್ಷಣವೇ ತನ್ನ ಮನೆಗೆ ಹೊರಟಳು. ಮಧುಕರ ಇನ್ನೂ ಎದ್ದೇ ಇರಲಿಲ್ಲ. ಅವಳನ್ನು ಕಂಡು ಹುಬ್ಬೇರಿಸಿದ. ''ರಾತ್ರಿ ನಿಮ್ಮ ತಂಗಿ ಗೆಸ್ಟ್‌ಹೌಸಿನಲ್ಲಿ ಮಲಗಿದಾಳೆ. ನೀವ್ಯಾಕೆ ಅವಳನ್ನು ಕೆರಳಿಸಿದಿರಿ...?'' ಸಿಡುಕುತ್ತಾ ಕೇಳಿದಳು.

''ಅವಳೇ ಜಗಳವನ್ನು ತೆಗೆದು ಹೊರಟೇಹೋದಳು. ಎಲ್ಲಾ ಮುಂಚೇನೇ ಪ್ಲಾನ್

ಮಾಡಿದ್ದಳು ಅಂತ ಕಾಣುತ್ತೆ. ಅದ್ಸರಿ... ಈಗ ನೀನ್ಯಾಕೆ ಬಂದೆ? ಇನ್ನೂ ರಿಕವರ್ ಆಗಿಲ್ಲ ನೀನು..."

"ನೀವಿಬ್ರೂ ಹೀಗೇ ಆಡುತ್ತಿದ್ದರೆ, ನಾನು ರಿಕವರ್ ಆಗೋದೇ ಇಲ್ಲ. ನಾನು ವ್ಯಥೆಯಲ್ಲಿ ಮುಳುಗಿ ಹೋಗಿದೀನಿ. ನಿಮ್ಮಿಬ್ಬರಿಗೂ ನನ್ನ ಚಿಂತೆಯಿಲ್ಲ. ನಿಮ್ಮಿಬ್ಬರ ಜಗಳದಲ್ಲಿ ಹಾಳಾದೆ ಅಷ್ಟೇ..."

"ಇನ್ನು ನೀನು ಸೀನ್ ಕ್ರಿಯೇಟ್ ಮಾಡಬೇಡ. ಎಕ್ಸೈಟ್ ಆಗೋದ್ರಿಂದ ಏನೂ ಪ್ರಯೋಜನವಿಲ್ಲ. ನಾಲ್ಕು ದಿನ ಮನೆಯಿಂದ ಹೊರಗಿದ್ದರೆ ಅವಳು ತಾನಾಗಿಯೇ ಹದಕ್ಕೆ ಬರುತ್ತಾಳೆ."

"ಇಲ್ಲ ಮಧು... ಅವಳು ಮೊಂಡು... ಅಲ್ಲದೇ ಅವಳ ಆಸೆಗಳೆಲ್ಲಾ ಧೂಳಾಗಿ ಹೋಯ್ತು... ಅವಳಿಗೆ ಡೈವೋರ್ಸ್ ಕೊಡಿಸಿ ಬೇರೆ ಮದುವೆ ಮಾಡೋಣ"

"ಅದನ್ನೆಲ್ಲ ಅವಳ ಕಿವಿಗೆ ತುಂಬಬೇಡ. ಧ್ರುವನ ಜೊತೆ ಸಂಸಾರ ಮಾಡದೇ ಇರುವಂಥಾದ್ದು ಏನಾಗಿದೆ? ಎಷ್ಟು ದಿನ ಅಂತ ಭಾರ್ಗವನನ್ನೇ ನೆನೆಸಿಕೊಳ್ಳುತ್ತಾ ಕೂತಿರುತ್ತಾಳೆ. ಅವನೋ ಇವಳಿಗೆ ಕೈಕೊಟ್ಟು ಹೋದ... ಬ್ಲಡೀ..."

"ಅದಕ್ಕೆಲ್ಲ ಕಾರಣ ಯಾರು... ನೀವೇ ತಾನೇ?"

"ನಾನೇ... ನನಗೆ ಗೊತ್ತು. ನಾನು ಇದನ್ನೆಲ್ಲ ಅವಳ ಒಳ್ಳೇದಕ್ಕೇ ಮಾಡಿದ್ದು. ಅವಳಿಗೇಕೆ ಅರ್ಥವಾಗಲ್ಲ? ನೀನಾದರೂ ತಿಳುವಳಿಕೆ ಹೇಳಬಾರದಾ?"

"ಆಗಲಿ ಹೇಳ್ತೀನಿ. ಮೊದಲು ಅವಳನ್ನು ಮನೆಗೆ ಕರೆದುಕೊಂಡು ಬನ್ನಿ. ಮನೆಯ ಮರ್ಯಾದೆ ಹೋಗುತ್ತದೆ."

"ಮರ್ಯಾದೆಯ ಚಿಂತೆ ಅವಳಿಗೆ ಇರಬೇಕು ಅಲ್ವಾ? ಈಗ ನನಗೆ ಅದಕ್ಕೆಲ್ಲ ಬಿಡುವಿಲ್ಲ. ಬೇಕಾದಷ್ಟು ಬೇರೆ ಕೆಲಸಗಳಿವೆ. ನೀನೂ ಹೋಗಬೇಡ. ನೀನು ಇಲ್ಲಿದೀಯ ಅಂತ ತಿಳಿದರೆ ಅವಳೇ ಬರಬಹುದು... ಹೋಗಿ ರೆಸ್ಟ್ ತಗೋ..." ಅವಳು ಅವನನ್ನೇ ವಿಚಿತ್ರವಾಗಿ ನೋಡಿದಳು.

"ಅವಳಿಗೋಸ್ಕರ ನಾನು ಇಲ್ಲಿ ಇರಲು ಒಪ್ಪಿಕೊಳ್ತೀನಿ. ಅವಳೇನಾದರೂ ವಾಪಸ್ಸು ಬರದೇ ಇದ್ದರೆ ನಾನು ಮತ್ತೆ ತವರಿಗೆ ಹೊರಟುಹೋಗ್ತೀನಿ."

"ಏನಾದ್ರೂ ಮಾಡ್ಕೊಳ್ಳಿ... ನೀವು ಹೆಂಗಸರ ಹಣೆಬರಹವೇ ಇಷ್ಟು." ಮಧು ಅಲ್ಲಿಂದ ಎದ್ದು ಹೋದ. ಸ್ನಾನ ಇತ್ಯಾದಿಗಳನ್ನು ಮುಗಿಸಿ ಹೊರಟಾಗ, ವಸುಧಾಳೂ ಅವನ ಜೊತೆ ಹೊರಟಳು.

"ನೀವು ಅಣ್ಣನೇ ಆದರೂ, ಎಲ್ಲರೂ ದೂಷಿಸುವುದು ನನ್ನನ್ನೇ... ಅತ್ತಿಗೆ ಬಂದು ನಾದಿನಿಯನ್ನು ಹೊರಹಾಕಿದಳು ಅಂತ. ನನ್ನನ್ನು ಗೆಸ್ಟ್‌ಹೌಸಿನ ಬಳಿ ಬಿಟ್ಟುಬಿಡಿ. ನಾನು ಅವಳ ಹತ್ತಿರ ಮಾತಾಡ್ತೀನಿ."

"ಥ್ಯಾಂಕ್ಯೂ ವಸು, ನಿನಗಾದರೂ ನನ್ನ ಕಷ್ಟ ಅರ್ಥವಾಯಿತಲ್ಲ"

"ಇದನ್ನೇ ನಗುನಗುತ್ತಾ ಹೇಳಬಾರದಾ?"

"ಏನು ಮಾಡಲಿ? ನನಗೆ ನಗೋದೇ ಮರೆತುಹೋಗಿದೆ. ಧ್ರುವ ಒಂಥರಾ ಪೀಡಿಸ್ತಾನೆ. ಮಾಲಾ ಸತಾಯಿಸ್ತಾಳೆ. ನನಗೆ ಈ ಜವಾಬ್ದಾರಿಯೇ ಬೇಡ. ಎಲ್ಲಾದ್ರೂ ಹೊರಟುಹೋಗೋಣ ಅಂತನ್ನಿಸ್ತಿದೆ... ಯಾಕೋ ಎಲ್ಲಾ ಬೇಜಾರಾಗಿದೆ."

"ನಾನು ನಿಮ್ಮ ಅರ್ಧಾಂಗಿ. ನಿಮ್ಮ ಕಷ್ಟಸುಖದಲ್ಲಿ ನನಗೂ ಪಾಲಿದೆ. ಅದರಿಂದಲೇ ನಾನು ವಾಪಸ್ಸು ಬಂದದ್ದು. ಮಾಲಾ ಅಂತೂ, ಬರಲೇಬೇಡ ಅಂತ ಹೇಳಿದ್ದಳು."

"ನೋಡಿದ್ಯಾ? ಮಾಲಾ ಎಂಥೋಳು ಅಂತ. ಗಂಡ-ಹೆಂಡತಿಯರ ಮಧ್ಯೆ ತಂದು ಹಾಕೋಕೆ ನೋಡ್ತಾಳೆ... ಅವಳ ಬುದ್ಧಿಯೇ ಸರಿಯಿಲ್ಲ"

"ಅವಳಿಗೂ ಏನೇನು ಅನ್ನಿಸುತ್ತೋ... ಫೀಲಿಂಗ್ಸ್‌ನ ಅದುಮಿಟ್ಟುಕೊಂಡಿದಾಳೆ"

"ಅವಳನ್ನು ಗಂಡನ ಜೊತೆ ಇರಬೇಡಾಂತ ಯಾರು ಹೇಳಿದಾರೆ? ಧ್ರುವ ಏನೇ ಆದರೂ ಅವಳ ಗಂಡ... ಇವಳೂ ಅವನಿಗೆ ಅನ್ಯಾಯ ಮಾಡುತ್ತಿಲ್ವಾ? ಇನ್ನು ಎಂಟು ಹತ್ತು ದಿನಗಳ ನಂತರ ಧ್ರುವ ಡಾಕ್ಟರನ್ನು ಭೇಟಿಯಾಗಲು ಬರ್ತಿದಾನಂತೆ. ಅಷ್ಟು ಹೊತ್ತಿಗೆ, ಮಾಲಾಳನ್ನು ಮೆಂಟಲಿ ಪ್ರಿಪೇರ್ ಆಗಿರೋಕೆ ಹೇಳು..."

"ನಾನು ಪ್ರಯತ್ನ ಪಡ್ತೀನಿ..." ವಸುಧಾ ಅವನ ಕಡೆ ನೋಡಿ ಮುಗುಳ್ನಕ್ಕಳು.

* * * *

ಮಾಲಾ ಗೆಸ್ಟ್‌ಹೌಸಿನಲ್ಲಿ ಇಲ್ಲದೇ ಇರುವುದನ್ನು ಕಂಡು ವಸುಧಾ ವಾಚ್‌ಮನ್‌ನನ್ನು ವಿಚಾರಿಸಿದಳು. ಅವನು ರಾತ್ರಿ ಇಲ್ಲಿಗೆ ಮೇಡಂ ಬಂದೇ ಇಲ್ಲ ಅನ್ನುವುದನ್ನು ತಿಳಿಸಿದಾಗ ವಸುಧಾ ಆತಂಕಗೊಂಡಳು. ಮಾಲಾ ಯಾಕೆ ಸುಳ್ಳು ಹೇಳಿದಳು? ಎಲ್ಲಿಹೋಗಿರಬಹುದು? ಏನೋ ಅನುಮಾನದ ಕಿಡಿ ಹೊಗೆಯಾಡಿತು. ಅವಳು ಅಲ್ಲೇ ಅನುಮಾನಿಸುತ್ತಾ ನಿಂತಿರುವಾಗ ಮಧು ಮತ್ತೆ ಬಂದಿದ್ದ. ವಸುಧಾ ಎಚ್ಚೆತ್ತಳು. "ಅವಳು ಇಲ್ಲಿಲ್ಲ. ಆಫೀಸಿಗೆ ಹೋದಳಂತೆ" ಎಂದು ಸುಳ್ಳು ಹೇಳಿದಳು. "ಸರಿ ಹಾಗಾದ್ರೆ, ನಾನು ನಿನ್ನನ್ನು ಮನೆಗೆ ಬಿಡ್ತೀನಿ... ನೀನೇನೂ ಆಫೀಸಿಗೆ ಬರುವುದು ಬೇಡ" ಎಂದು ಹೇಳಿದ. ಅವಳು ಕಾರನ್ನು ಹತ್ತಿದಳು.

"ನೀವು ಯಾಕೆ ಬಂದಿದ್ದು?" ಅನುಮಾನಿಸುತ್ತಾ ಕೇಳಿದಳು.

"ನೀನು ಹ್ಯಾಂಡ್‌ಬ್ಯಾಗ್‌ನ ಕಾರಿನಲ್ಲೇ ಬಿಟ್ಟುಬಿಟ್ಟಿದ್ದೆಯಲ್ಲಾ, ಕೊಟ್ಟು ಹೋಗೋಣ ಅಂತ ಬಂದೆ." ಹಿಂದಿನ ಸೀಟಿನಲ್ಲಿದ್ದ ಹ್ಯಾಂಡ್‌ಬ್ಯಾಗನ್ನೇ ನೋಡಿದಳು.

ವಸುಧಾಳನ್ನು ಮನೆಗೆ ಬಿಟ್ಟು ಮತ್ತೆ ಆಫೀಸಿಗೆ ಬಂದ. ಮಾಲಾಳನ್ನು ತನ್ನ ಛೇಂಬರ್ರಿಗೆ ಕರೆಸಿದ.

''ರಾತ್ರಿ ವಸುಧಾಳ ಮನೆಗೆ ಹೋಗದೇ ಗೆಸ್ಟ್‌ಹೌಸಿನಲ್ಲಿ ಯಾಕೆ ಇದ್ದೆ?''

''ಯಾಕೆ? ಅದೂ ನಿನ್ನದಾ?... ನಾನು ಅಲ್ಲಿದ್ದರೆ ನಿನ್ನ ಗಂಟೇನು ಹೋಗುತ್ತೆ?''

''ಕೇಳಿದ್ದಕ್ಕೆ ಉತ್ತರ ಕೊಡು... ತಲೆಹರಟೆ ಮಾಡಬೇಡ.''

''ನನ್ನ ಇಷ್ಟ... ಎಲ್ಲಿ ಇರಬೇಕೂಂತ ಅನ್ನಿಸುತ್ತೋ ಅಲ್ಲಿ ಇರುವ ಹಕ್ಕಿದೆ''

''ಜನ ಆಡಿಕೊಂಡು ನಗ್ತಾರೆ ಅನ್ನೋ ಪ್ರಜ್ಞೆನಾದರೂ ಬೇಡವಾ ? ವಾಚ್‌ಮನ್ ಏನಂದುಕೊಳ್ತಾನೆ? ಮರ್ಯಾದೆ ಬೀದಿಪಾಲು ಆಗುತ್ತದೆ...''

''ನೀನು ಮರ್ಯಾದೆಯನ್ನು ಉಳಿಸಿಕೊಳ್ಳುವ ಕೆಲಸ ಮಾಡಿದ್ದಿದ್ದರೆ, ನಾನೇಕೆ ಮನೆ ಬಿಟ್ಟು ಗೆಸ್ಟ್‌ಹೌಸಿನಲ್ಲಿರುತ್ತಿದ್ದೆ... ಮಾತಾಡಬೇಡ ಸುಮ್ಮನಿರು''

''ವಸುಧಾ ನಿನ್ನ ಹತ್ತಿರ ಮಾತನಾಡಬೇಕೂಂತ ಬಂದಿದ್ಲು, ನೀನು ಸಿಗಲಿಲ್ಲ, ಮನೆಗೆ ವಾಪಸ್ಸು ಹೋಗಿದಾಳೆ. ಅವಳಿಗೆ ಫೋನು ಮಾಡು.''

''ವಸುಧಾ ಗೆಸ್ಟ್‌ಹೌಸಿಗೆ ಬಂದಿದ್ಲಾ...?'' ಮಾಲಾಳ ಮುಖದ ಬಣ್ಣ ಬದಲಾಗಿತ್ತು. ವಾಚ್‌ಮನ್ ನಾನು ಬಂದಿರಲಿಲ್ಲ ಅಂತ ಹೇಳಿರಬಹುದೇ... ಎಂಬ ಅನುಮಾನ ಬಂದಾಗ ಅವಳ ಮೇಲೆ ಕೋಪ ಬಂದಿತ್ತು.

''ಅವಳ್ಯಾಕೆ ಬಂದಳು...? ಹುಶಾರಿರಲಿಲ್ಲವಲ್ಲ?''

''ನೀನು ಎಲ್ಲರ ನಿದ್ದೇನೂ ಕೆಡಿಸಿಟ್ಟಿದೀಯಲ್ಲ, ನಿನಗೇನಾದ್ರೂ ಹೆಚ್ಚು ಕಡಿಮೆ ಆದರೆ ಅವಳನ್ನೇ ಎಲ್ಲರೂ ದೂಷಿಸೋದು. ಅತ್ತಿಗೆಯಾಗಿ ಬಂದು, ಮನೆಯಿಂದ ಆಚೆ ಕಳಿಸಿದಳು ಅಂತ...''

''ಅವಳನ್ನು ನೀನು ಆಚೆ ಕಳಿಸಿದ್ದೆಯಲ್ಲ... ಮರೆತುಹೋಯ್ತಾ?''

''ನಾನು ಯಾರನ್ನೂ ಮನೆಬಿಟ್ಟು ಹೋಗಿ ಅಂತ ಬೈದು ಕಳಿಸಿಲ್ಲ, ನೀವುಗಳೇ ಹೋದದ್ದು... ಆದರೆ ವಸು ನಿನಗಿಂತ ಸೆನ್ಸಿಬಲ್.. ಅವಳಾಗಿಯೇ ವಾಪಸ್ಸು ಬಂದಳು.''

''ಅವಳಿಗಾದರೆ ಗಂಡ, ಗಂಡನ ಮನೆ ಅಂತ ಬರುತ್ತಾಳೆ. ನನಗೆ ಅದು ನನ್ನ ಮನೆಯಲ್ಲ, ನನ್ನ ಗಂಡನೂ ಅಲ್ಲಿಲ್ಲ''

''ಮಾತು ಮಾತ್ರ ಚೆನ್ನಾಗಿ ಆಡ್ತೀಯ... ಈಗಲೂ ಧ್ರುವ ನಿನಗಾಗಿ ಹಂಬಲಿಸ್ತಾ ಇದಾನೆ. ನೀನ್ಯಾಕೆ ಹೋಗಬಾರದು? ಗಂಡ, ಮನೆ ಬೇಕೂಂತ ಇದ್ದರೆ?''

''ಮತ್ತೆ ಮತ್ತೆ ಅದೇ ಮಾತನ್ನಾಡಬೇಡ'' ಎನ್ನುತ್ತಾ ಎದ್ದಳು. ತನ್ನ ಡೆಸ್ಕ್‌ನಿಂದ ವಸುಧಾಳಿಗೆ ಫೋನು ಮಾಡಿ ಮಾತನಾಡಿದಳು.

''ಹುಶಾರಾಗಿದೀಯಾ ? ಸರ್ಕ್ಯೂಟ್ ಹೊರಟುಬಿಟ್ಟಿದೀಯಲ್ಲ'' ಗೇಲಿ ಮಾಡಿ ನಕ್ಕಳು. ವಸುಧಾ ದಪ್ಪಧ್ವನಿಯಲ್ಲಿ ಕೇಳಿದಳು.

''ನಿನ್ನೆ ರಾತ್ರಿ ನೀನು ಎಲ್ಲಿದ್ದೆ? ನಿಜ ಹೇಳು... ನನ್ನಾಣೆ...''

"ಫೋನಿನಲ್ಲಿ ಹೇಳೋಕಾಗಲ್ಲ ಸ್ಸಾರಿ..."

"ಹಾಗಾದ್ರೆ ನಾನು ಆಫೀಸಿಗೇ ಬರ್ತೀನಿ..."

"ಬೇಡ... ಬೇಡ... ನಾನೇ ಬರ್ತೀನಿ... ಆದರೆ ಒಳಗೆ ಮಾತ್ರ ಬರಲ್ಲ."

"ಅತಿ ಆಡಬೇಡ ಸುಮ್ಮನೇ ಬಾ..." ಗದರಿದಳು.

ಮಾಲಾಳಿಗಾಗಿಯೇ ಬಾಗಿಲಲ್ಲಿ ಕಾದು ನಿಂತಿದ್ದ ವಸುಧಾ ಅವಳನ್ನು ಎಳೆದು ಕೊಂಡು ತನ್ನ ರೂಮಿಗೆ ಕರೆತಂದಳು.

"ಈಗ ಹೇಳು... ನೆನ್ನೆ ರಾತ್ರಿ ನೀನು ಯಾರ ಮನೆಯಲ್ಲಿ ಇದ್ದೆ ಅಂತ..."

"ನಾನು ಭಾಸ್ಕರನ ಮನೆಯಲ್ಲಿ ಇದ್ದೆ..."

"ಭಾಸ್ಕರ ? ಯಾರು ಅವನು... ಎಲ್ಲಿದಾನೆ?"

"ಅವನು ನನ್ನ ಕಲೀಗ್... ಇಲ್ಲೇ ಹತ್ತಿರದಲ್ಲಿ ಅವನ ಮನೆ ಇದೆ."

"ಮಧೂಗೆ ಗೊತ್ತಾದ್ರೆ ಅನ್ನೋ ಭಯವಾದ್ರೂ ಬೇಡವಾ ನಿನಗೆ ? ಅವನೆಂತಹ ವನು, ನಿನಗೆ ಬುದ್ಧಿ ಹೇಳಿ ಕರೆತರುವುದನ್ನು ಬಿಟ್ಟು ನಿನ್ನನ್ನು ತನ್ನ ಮನೆಯಲ್ಲಿಟ್ಟು ಕೊಂಡಿದಾನೆಲ್ಲ... ಅವನ ಮನೆಯವರು ಏನಂದುಕೊಳ್ತಾರೆ?"

"ಅವನ ಮನೆಯಲ್ಲಿ ಯಾರೂ ಇಲ್ಲ, ಒಬ್ಬನೇ ಇದಾನೆ..."

"ನಿಜ ಹೇಳು... ನಿನಗೂ ಅವನಿಗೂ ಏನು ಸಂಬಂಧ ಅಂತ... ನೀನು ಅಷ್ಟು ಧೈರ್ಯವಾಗಿ ಅವನ ಮನೆಗೇ ಹೋಗಬೇಕಾದರೆ ಖಂಡಿತಾ ಏನೋ ಗುಟ್ಟಿದೆ"

ಮಾಲಾ ಅವಳ ಕಣ್ಣುತಪ್ಪಿಸಿದಳು. ಎತ್ತಲೋ ನೋಡುತ್ತಾ ತನ್ನ ಭಾಸ್ಕರನ ಸ್ನೇಹ ವನ್ನೂ ಸಂಬಂಧವನ್ನೂ ತಿಳಿಸಿದಳು. ವಸುಧಾ ಮೂಕಳಂತೆ ಕುಳಿತಳು.

"ನಾನು ನಿಜವನ್ನೇ ಹೇಳಿದೀನಿ. ಮಧೂಗೆ ಹೇಳಬೇಡ ಅಂತ ಕೂಡ ಹೇಳಲ್ಲ, ಆದರೆ ಮಧೂಗೆ ಗೊತ್ತಾದರೆ ಭಾಸ್ಕರನ ಕೆಲಸ ಹೋಗುತ್ತದೆ. ಅವನ ಸಂಪಾದನೆ ಯಿಂದಲೇ ಅವರ ಸಂಸಾರ ನಡೆಯುತ್ತಿದೆ. ಭಾರ್ಗವನ್ನ ನನ್ನಿಂದ ದೂರವಾಗುವಂತೆ ಮಾಡಿದ ಮಧು. ಈಗ ಇವನನ್ನೂ ನನ್ನಿಂದ ದೂರ ಮಾಡಬೇಡಿ, ನೀವಿಬ್ಬರೂ ಸೇರಿ ಕೊಂಡು." ವಸುಧಾ ಪೆಚ್ಚಾದಳು.

"ಮಾಲಾ, ನೀನು ಹೀಗೆ ಮಾಡ್ತೀಯ ಅಂತ ನಾನು ಅಂದುಕೊಂಡಿರಲಿಲ್ಲ"

"ನನಗೂ ಗೊತ್ತಿಲ್ಲದ ಹಾಗೆ ನಮ್ಮಿಬ್ಬರ ಮಧ್ಯೆ ಪ್ರೀತಿ ಬೆಳೆಯಿತು. ನಮ್ಮಿಬ್ಬರ ಸಂಬಂಧ ಬೆಳೆಯಿತು. ಆದರೆ ಇದರಲ್ಲಿ ಭಾಸ್ಕರನ ತಪ್ಪು ಏನಿಲ್ಲ, ನನ್ನ ಬಲವಂತಕ್ಕೆ ಅವನು ನನ್ನ ಸಹವಾಸ ಮಾಡಿದ...."

"ಹಾಗಾದರೆ ನಾನು ಸಮಯ ನೋಡಿ ಮಧು ಹತ್ತಿರ ಮಾತನಾಡ್ತೀನಿ. ಆದರೆ ಧ್ರುವನಿಂದ ಡೈವೋರ್ಸ್ ಸಿಗದೇ ನಿಮ್ಮಿಬ್ಬರ ಮದುವೆ ಆಗುವಂತಿಲ್ಲ... ಅಲ್ಲೀವರೆಗೂ ಎಚ್ಚರದಿಂದ ಇರು." ಮಾಲಾ ನಕ್ಕಳು.

''ನನ್ನ, ಅವನ ಮದುವೆ ನೆರವೇರುವಂತಿಲ್ಲ, ಅವನಿಗೆ ಈಗಾಗಲೇ ಮದುವೆಯಾಗಿದೆ. ಅವನ ಹೆಂಡತಿ ಅವನ ಅಕ್ಕನ ಮಗಳೇ...''

''ಮದುವೆಯಾಗಿದ್ದೂ ಹೆಂಡತಿಗೆ ದ್ರೋಹ ಮಾಡಿ ಅವನು ನಿನ್ನ ಸಹವಾಸ ಮಾಡ್ತಿದಾನಾ...? ಹಾಗಾದರೆ ಅವನು ಸರಿಯಿಲ್ಲ, ಆದಷ್ಟು ಬೇಗ ಅವನಿಂದ ದೂರವಾಗು... ಅವನು ನಿನಗೆ ತಕ್ಕವನಲ್ಲ.''

''ಈಗ ನಾನು ಮಾಡುತ್ತಿರುವುದೇನು? ಅದನ್ನೇ ಅವನೂ ಮಾಡುತ್ತಿದಾನೆ. ತಂದೆಯ ಬಲವಂತಕ್ಕೆ ಅಕ್ಕನ ಮಗಳನ್ನು ಮದುವೆಯಾಗಿದಾನೆ... ಇದುವರೆಗೂ ಒಂದು ರಾತ್ರಿಯೂ ಅವಳೊಟ್ಟಿಗೆ ಮಲಗಿಲ್ಲವಂತೆ...'' ಮಾಲಾ ನಕ್ಕಳು.

''ಈ ಅನೈತಿಕ ಸಂಬಂಧ ಒಳ್ಳೆಯದಲ್ಲ, ಅವನೂ ಅವನ ಹೆಂಡತಿಗೆ ಡೈವೋರ್ಸ್ ಕೊಡುವಂತೆ ಹೇಳು.''

''ಇಲ್ಲ ನಾನು ಕೇಳಲ್ಲ, ಅಲ್ಲದೇ ಅವನು ಮಾಡುವುದಿಲ್ಲ, ಅವನ ತಾಯಿ, ಅಕ್ಕ, ಅವಳ ಮಗಳಿಗೆ ಬೇರೆ ಯಾರೂ ದಿಕ್ಕಿಲ್ಲ ಇವನನ್ನು ಬಿಟ್ಟರೆ...''

''ಅವರುಗಳಿಗೆ ತಿಳಿದರೆ... ಏನಂದುಕೊಳ್ತಾರೆ?''

''ಅವರುಗಳು ನಂಜನಗೂಡಿನಲ್ಲಿದಾರೆ. ಅವರುಗಳಿಗೆ ತಿಳಿಯುವ ಛಾನ್ಸೇ ಇಲ್ಲ, ತಿಳಿದರೂ ಅವನು ಗಂಡಸು... ಅವನು ಹೆದರಬೇಕಾಗಿಲ್ಲ.''

''ಗಂಡಸಾದ ಮಾತ್ರಕ್ಕೆ, ನೀತಿ, ನಿಯಮ, ಕಾಯಿದೆ, ಕಾನೂನನ್ನು ಬಿಡಬೇಕೂಂತ ಏನಿಲ್ಲ, ನಾನು ಭಾಸ್ಕರನ ಹತ್ತಿರ ಮಾತನಾಡ್ತೀನಿ''

''ಏನಂತ ? ನನ್ನಿಂದ ದೂರ ಇರು ಅಂತ ಹೇಳ್ತೀಯ. ಹೇಳಿದ್ನಲ್ಲ, ಅವನೇನೂ ಆಸೆಪಟ್ಟು ನನ್ನ ಬಳಿಗೆ ಬರಲಿಲ್ಲ, ನಾನೇ ಅವನನ್ನು ಕರೆದದ್ದು. ಅವನು ದೂರ ಹೋದರೆ ನನಗೇ ನಷ್ಟ, ನಾನು ಖುಷಿಯಾಗಿರುವುದು ನಿನಗೆ ಸಹಿಸದೇ ಇದ್ದರೆ ಹಾಗೇ ಮಾಡು. ಭಾಸ್ಕರನನ್ನು ಕಂಡ ಮೇಲೆ, ಭಾರ್ಗವನನ್ನು ಮರೆಯಲು ಪ್ರಯತ್ನಿಸಿದೆ. ನಾನು ಸುಖವಾಗಿರುವುದನ್ನು ಕಂಡು ನಿನಗೆ ಕಣ್ಣುರಿ. ಅದಕ್ಕೇ ಹೀಗೆ ಮತಾನಾಡ್ತಿದೀಯ. ಸ್ನೇಹಿತೆಯಾಗಿ ನನಗೆ ಸಪೋರ್ಟ್ ಕೊಡುವುದನ್ನು ಬಿಟ್ಟು ನನ್ನ ಸುಖಕ್ಕೆ ಕಲ್ಲು ಹಾಕೋಕೆ ನೋಡ್ತೀಯ... ನೀನು ನನ್ನ ಅತ್ತಿಗೆಯೂ ಅಲ್ಲ, ನನ್ನ ಸ್ನೇಹಿತೆಯೂ ಅಲ್ಲ.'' ಎದ್ದು ಹೊರಡಲನುವಾದಳು.

ಕಪಾಳಕ್ಕೆ ಹೊಡೆಯುವಂತೆ ಮಾಲಾ ಹೀಗೆ ಮಾತನಾಡಿದಾಗ ವಸುಧಾಳಿಗೆ ಬೇಸರವಾಗಿತ್ತು. ಅವಳ ಕೈ ಹಿಡಿದು ಕೂರಿಸಿದಳು.

''ಓ...ಕೇ. ನಾನು ನಿನ್ನ ಸುದ್ದಿಗೆ ಬರುವುದಿಲ್ಲ, ನೀನು ನಿನ್ನ ಅಣ್ಣ ಇಬ್ಬರೂ ಒಂದೇ ಜಾತಿಗೆ ಸೇರಿದವರು. ಅತ್ತಿಗೆಯ ಸ್ಥಾನದಲ್ಲಿ ನಿಂತು, ನಾನು ನಿನಗೆ ತಿಳುವಳಿಕೆ ಹೇಳಿದೆ, ಕ್ಷಮಿಸಿಬಿಡು'' ಕೈಮುಗಿದಳು.

''ಸಾಕು, ಸಾಕು. ಇದೆಲ್ಲಾ ಅತಿಯಾಯ್ತು. ನೀನು ಅತ್ತಿಗೆಯಾಗಬೇಡ. ಸ್ನೇಹಿತೆಯಾಗಿಯೇ ಇರು. ನಿನ್ನ ಮೇಲೆ ಯಾವ ಅಪವಾದವೂ ಬರುವುದಿಲ್ಲ, ನೀನು ಹೆದರಬೇಡ...''

''ನನ್ನ ಅಪವಾದಕ್ಕೆ ನಾನು ಹೆದರುವುದಿಲ್ಲ ಮಾಲಾ... ಒಬ್ಬ ಹೆಂಗಸು ಒಬ್ಬ ಗಂಡಸಿನೊಡನೆ ದೇಹಸಂಬಂಧ ಬೆಳೆಸಿದರೆ ಅದರ ಪರಿಣಾಮ ಏನೂಂತ ಗೊತ್ತು ತಾನೇ?''

''ಇನ್ನೇನಾಗುತ್ತೆ. ಹೆಚ್ಚು ಅಂದರೆ ನಾನು ಪ್ರೆಗ್ನೆಂಟ್ ಆಗ್ತೀನಿ ಅಷ್ಟೇ ತಾನೇ.''

''ಅಷ್ಟೇ ಅಲ್ಲ, ಅಲ್ಲಿಂದ ಸಮಸ್ಯೆ ಪ್ರಾರಂಭವಾಗುತ್ತೆ. ಆ ಮಗುವಿಗೆ ತಂದೆ ಯಾರು ಅನ್ನೋ ಮಾತು ಬರುತ್ತೆ.... ಆಗ ಏನು ಮಾಡ್ತೀಯ? ಭಾಸ್ಕರ ತಂದೆ ಅಂತ ಒಪ್ಪಿಕೊಳ್ಳಬೇಕಾದ್ರೆ ಅವನು ನಿನಗೆ ಪತಿಯಾಗಿರಬೇಕು. ಅಥವಾ ಈಗಾಗಲೇ ನಿನ್ನ ಪತಿಯಾಗಿರುವ ಧ್ರುವ ಆ ಮಗುವಿನ ತಂದೆ ತಾನೇ ಎಂದು ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಆ ಮಗುವಿಗೆ ಸ್ಥಾನಮಾನ ಯಾವುದೂ ಸಿಗುವುದಿಲ್ಲ.. ಇದನ್ನೆಲ್ಲಾ ಯೋಚಿಸಬೇಡವೆ?''

''ಆ ಕಾಲ ಬಂದಾಗ ನೋಡಿಕೊಳ್ತೀನಿ... ಡೋಂಟ್‌ವರಿ, ಬೀ ಹ್ಯಾಪಿ'' ಎಂದು ರಾಗವಾಗಿ ಹೇಳುತ್ತಾ ಎದ್ದಾಗ ವಸುಧಾ ಮತ್ತೆ ನುಡಿದಳು.

''ಓ.ಕೇ. ಆದಷ್ಟು ಬೇಗ ಒಂದು ನಿರ್ಧಾರಕ್ಕೆ ಬಾ. ನೀನು ಹ್ಯಾಪಿಯಾಗಿರಲಿ ಅಂತಲೇ ನನ್ನ ಆಸೆ. ಆದರೆ ಕಾಲ ಮಿಂಚಿ ಹೋದ ಮೇಲೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಭಾಸ್ಕರನ ಮನೆಯಾಗಲೀ, ಆ ಗೆಸ್ಟ್‌ಹೌಸಾಗಲೀ ನಿನಗೆ ಶಾಶ್ವತವಲ್ಲ. ಈ ತವರು ಮನೆಯವರೇ ನಿಜವಾದ ಬಂಧುಗಳು...''

''ಭಾಸ್ಕರ ಕೆಟ್ಟವನೇನಲ್ಲ. ಸದಾಕಾಲಕ್ಕೂ ನನ್ನ ಜೊತೆಗೇ ಇರ್ತಾನೆ. ನನ್ನ ಕೈಬಿಡುವುದಿಲ್ಲ ಅಂತ ಪ್ರಾಮಿಸ್ ಮಾಡಿದಾನೆ.''

''ನೀನು ಭಾರ್ಗವನನ್ನು ಹೀಗೇ ನಂಬಿದ್ದೆ ಅಲ್ಲವಾ? ಎಷ್ಟೇ ಪ್ರಾಮಾಣಿಕನಾಗಿದ್ದರೂ, ಅವನು ನಿನ್ನಿಂದ ದೂರ ಹೋದ ಅಲ್ವಾ? ಭಾಸ್ಕರ ಪ್ರಾಮಾಣಿಕನಲ್ಲ ಅಂತ ನಾನು ಹೇಳುತ್ತಿಲ್ಲ. ಆದರೆ ಅವನಿಗೂ ಬೇರೆ ಜವಾಬ್ದಾರಿಗಳಿವೆ ಅಲ್ವಾ?''

''ಮುಗೀತಾ ನಿನ್ನ ಉಪದೇಶ? ನಾನಿನ್ನು ಬರ್ಲಾ...'' ಎನ್ನುತ್ತಾ ಆಚೆ ಬಂದಳು. ಅವಳು ಹಿಂದಿರುಗಿ ನೋಡದೇ ಮುಂಬಾಗಿಲ ಮೆಟ್ಟಿಲುಗಳನ್ನಿಳಿದಳು. ಹಿಂದಿನಿಂದ ವಸುಧಾ ನಿಟ್ಟುಸಿರು ಬಿಟ್ಟಳು.

* * * *

''ಅಕ್ಕ ಫೋನು ಮಾಡಿದ್ದಳು. ಹತ್ತು ದಿನಗಳಾಯಿತು. ನಾನು ನಮ್ಮೂರಿಗೆ ಹೋಗಲೇ ಇಲ್ಲ'' ಭಾಸ್ಕರ ಹೇಳಿದ.

''ಈ ಸಾರಿ, ನಾನು ನಿಮ್ಮ ಜೊತೆ ಬರ್ತೀನಿ'' ತಟ್ಟನೆ ನುಡಿದಳು ಮಾಲಾ.

''ಒಂದೇ ಒಂದು ದಿನ ಅಷ್ಟೇ... ಹೀಗೆ ಹೋಗಿ ಹಾಗೆ ವಾಪಸ್ಸು ಬಂದು ಬಿಡ್ತೀನಿ...''

''ಯಾಕೇ... ನನ್ನನ್ನು ಕರೆದುಕೊಂಡು ಹೋಗೋಕೆ ಭಯಾನ?''

''ಭಯ ಅಂತಲ್ಲ, ನಮ್ಮ ಅಕ್ಕ ತುಂಬಾ ಸೂಕ್ಷ್ಮ. ಅವಳಿಗೇನಾದ್ರೂ ಅನುಮಾನ ಬಂದ್ರಾಯ್ತು ಅಗ್ರಹಾರದ ಜನರನ್ನೆಲ್ಲಾ ಕರೆಸಿ ಪಂಚಾಯಿತಿ ಮಾಡ್ತಾಳೆ.''

''ನೋಡಿದ್ರೆ ಹಾಗನ್ನಿಸಲ್ಲ...''

''ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ತವರುಮನೆಗೆ ಬಂದು ಬಿಟ್ಟಿದಾಳೆ. ಒಂದು ತರಹ ಪಿರುಚು... ಕಠೋರವಾಗಿ ಮಾತಾಡಿಬಿಡ್ತಾಳೆ.''

''ಅವರೇನಾದ್ರೂ ಅಂದ್ರೆ ನಾನು ಸುಮ್ಮನಿರ್ತೀನಾ? ನಾನೂ ಮಾತಿನಲ್ಲಿ ಒರಟು. ನಿಮಗೆ ಅನುಭವವಾಗಿರಬಹುದು ಅಲ್ವಾ?''

''ಅದಕ್ಕೇ ಭಯ...'' ಕಿಸಕ್ಕನೆ ನಕ್ಕ. ಅವಳು ಕಿವಿ ಹಿಂಡಿದಳು.

''ಹೋಗಲೇ ಬೇಕಾ? ಮುಂದಿನ ವಾರ ಬರ್ತೀನಿ ಅಂತ ಹೇಳಿಬಿಡಿ.''

''ಏನಿಲ್ಲ, ಅಮ್ಮ ಪೆಟ್ಟಿಗೆ ಹಿಡಿದು ಇಲ್ಲಿಗೇ ಬಂದುಬಿಡ್ತಾಳೆ ಅದು ಇನ್ನೂ ಡೇಂಜರ್.''

''ನಮ್ಮಿಬ್ಬರ ವಿಷಯ ಗೊತ್ತಾದರೆ ನಿಮ್ಮ ತಾಯಿಗೆ ಏನನ್ನಿಸಬಹುದು?''

''ಹಾರ್ಟ್ ಫೇಲ್ಯೂರ್ ಆಗುತ್ತೆ ಅಷ್ಟೇ... ಮೊಮ್ಮಗಳು ಸುಖವಾಗಿಲ್ಲ ಅಂತ ಮೊದಲೇ ಬೇಸರ ಅವಳಿಗೆ...''

''ಯಾಕೆ ಸುಖವಾಗಿಲ್ಲ? ನಿಮ್ಮ ಮನೆಯಲ್ಲಿ ಏನು ಕೊರತೆ?''

''ನನ್ನ ಕೊರತೆ... ನಾನು ಭಾರತಿಯನ್ನು ಹತ್ತಿರಕ್ಕೆ ಸೇರಿಸಿಲ್ಲವಲ್ಲ, ಅದೇ ದೊಡ್ಡ ಸಮಸ್ಯೆ. ಇದೇ ವಿಷಯಕ್ಕೆ ನನ್ನ ಅಕ್ಕನಿಗೂ ಅಮ್ಮನಿಗೂ ಜಗಳ'' ಮಾಲಾ ಬಿದ್ದು ಬಿದ್ದು ನಕ್ಕಳು.

''ನೀವು ನಗ್ತಾ ಇದ್ದರೆ ನಿಮ್ಮನ್ನೇ ನೋಡ್ತಾ ಇರೋಣ ಅಂತನ್ನಿಸುತ್ತೆ... ಈ ನಗುವಿಗೇ ನಾನು ನಿಮ್ಮನ್ನು ಮೆಚ್ಚಿದ್ದು...'' ತುಟಿಗಳನ್ನು ಮುದ್ದಿಸಿದ.

''ನಾನು ನಗುವಾಗ, ನಿಮ್ಮ ತರಹ, ನನಗೂ ನನ್ನ ಕೆನ್ನೆಯ ಮೇಲೆ ಗುಳಿ ಬೀಳು ವಂತಿದ್ದರೆ... ಈ ಗುಳಿಯ ಮೇಲೆ ನನಗೆ ಅಸೂಯೆ'' ಎನ್ನುತ್ತಾ ಅವನ ಬಲಗೆನ್ನೆಯನ್ನು ಮೃದುವಾಗಿ ಕಚ್ಚಿದಳು.

''ಹ್ಹಾಂ... ನೋಯುತ್ತೆ, ಏನು ಮಾಡ್ತಿದೀರಿ...'' ಅವನು ಅವಳ ಉದ್ದನೆಯ ಜಡೆಯನ್ನು ಎಳೆದ. ''ನಿಮ್ಮ ಜಡೆಯ ಮೇಲೆ ನನಗೆ ಅಸೂಯೆ... ಇದು ಸದಾ ನಿಮ್ಮ ಬೆನ್ನ ಮೇಲೆ ಕುಣಿಯುತ್ತಿರುತ್ತದೆ...'' ಜಡೆಯನ್ನು ತನ್ನ ಕೊರಳಿಗೆ ಸುತ್ತಿಕೊಂಡ.

''ಹಾಗಾದರೆ ನಾನು ಇದನ್ನು ಕತ್ತರಿಸಿ ಬಾಬ್‌ಕಟ್ ಮಾಡಿಸಿಕೊಳ್ತೀನಿ'' ಎಂದಳು ಅವನು ಸುಮ್ಮನೇ ನಕ್ಕು ಜಡೆಯನ್ನು ಅವಳ ಕೊರಳಿಗೂ ಸುತ್ತಿದ.

''ನೀವು ನಾಳೆ ರಾತ್ರಿ, ನಿಮ್ಮ ಮನೆಗೇ ಹೋಗಿ. ಇಲ್ಲಿ ಒಬ್ಬರೇ ಇರುವುದು ಬೇಡ. ಅಕ್ಕಪಕ್ಕ ನನಗೆ ಪರಿಚಯಸ್ಥರು ಯಾರೂ ಇಲ್ಲ. ಆದರೂ... ಸರಿಯಲ್ಲ''

''ನಾನು ಗೆಸ್ಟ್‌ಹೌಸಿನಲ್ಲಿ ಇರ್ತೀನಿ...''

''ಬೇಡವೇ ಬೇಡ. ವಾಚ್‌ಮನ್‌ಗೆ ಈಗಾಗಲೇ ಸಂಶಯ ಬಂದಿರಬಹುದು. ಅವನ ಮೇಲೆ ನನಗೆ ಒಳ್ಳೆಯ ಅಭಿಪ್ರಾಯವಿಲ್ಲ. ನನಗೋಸ್ಕರ, ನೀವು ಸೇಫ್ ಆಗಿರಬೇಕೂಂತ ಆಸೆ ಇದ್ದರೆ, ನಿಮ್ಮ ಮನೆಗೇ ಹೋಗಿ. ಅದಕ್ಕಿಂತ ಕ್ಷೇಮವಾದ ಜಾಗ ಬೇರೆ ಎಲ್ಲೂ ಇಲ್ಲ... ಹೆಣ್ಣುಮಕ್ಕಳಿಗೆ ತವರುಮನೆಯ ನೆರಳು ಇರಬೇಕು.... ಸಮಯ ದಲ್ಲಿ ಸಹಾಯಕ್ಕೆ ಒದಗುವವರೂ ಅವರೇ...''

''ಈ ಉಪದೇಶ ನನಗೆ ಬೋರ್ ಆಗುತ್ತೆ ಭಾಸ್ಕರ್...''

''ನೀವು ಬೇಕಾದರೆ ನನಗೂ ಉಪದೇಶ ಮಾಡಿ. ನನಗೆ ಬೋರ್ ಅನ್ನಿಸೋಲ್ಲ.''

''ನನಗೆ ಅದೂ ಬೋರ್...'' ಅವನ ತೊಡೆಯ ಮೇಲೆ ತಲೆಯನ್ನಿಟ್ಟಳು.

''ಈಗಲಿಂದ ವಿರಹಿಯ ತರಹ ಆಡ್ತಿದೀರಲ್ಲ. ಹೀಗೆ ವಿರಹವಿದ್ದರೆ ನಮ್ಮ ಪ್ರೀತಿ ಹೆಚ್ಚುತ್ತೆ. ಇಲ್ಲದಿದ್ದರೆ ನಿಮಗೆ ಅದೂ ಬೋರ್ ಆಗುತ್ತೆ.''

''ಭಾಸ್ಕರ್ ನೀವು ಹೋಗಲೇಬೇಕಾ ಊರಿಗೆ...'' ಮುದ್ದಾಗಿ ಕೇಳಿದಾಗ, ಅವನು ಮಾತಾಡದೇ ಆ ಮುದ್ದುಮುಖವನ್ನು ಮುದ್ದಿಸಿದ. ಮೆಲ್ಲನೆ ಅವಳ ತಲೆಯನ್ನು ತಟ್ಟ ತೊಡಗಿದ್ದ. ಅವಳು ನಿದ್ರಾದೇವಿಯ ವಶವಾದಳು. ಅವಳನ್ನು ನಿಧಾನವಾಗಿ ಸರಿಸಿ, ತಾನೂ ಅವಳ ಮಗ್ಗುಲಲ್ಲಿ ಮಲಗಿದ. ಆದರೆ ಮನದಲ್ಲಿ ನಾನಾ ಆಲೋಚನೆಗಳು ! ಇವಳ ಸಹವಾಸದಿಂದ, ನಮ್ಮವರನ್ನೆಲ್ಲಾ ದೂರ ಮಾಡುತ್ತಿದೀನೆಯೇ...? ಇದು ಸರಿಯೇ...? ಏನೇ ಇರಲಿ, ಇವಳು ನನ್ನ ಪತ್ನಿಯಲ್ಲ. ಇವಳೊಂದಿಗೆ ಜೀವನಪರ್ಯಂತ ಇರುವುದು ಸಾಧ್ಯವಿಲ್ಲ. ತಿಳಿದೂ ತಿಳಿದೂ ತಪ್ಪು ಮಾಡಿದ್ದೇನೆ. ಸುಖವನ್ನು ಅನುಭವಿಸಿ ದ್ದೇನೆ. ಇದರ ಕೊನೆ ಎಲ್ಲಿಗೆ?... ಕಣ್ಣು ಮುಚ್ಚಿದ್ದರೂ ನಿದ್ದೆ ಹತ್ತಿರಕ್ಕೆ ಸುಳಿದಿರಲಿಲ್ಲ.

*   *   *   *

ಆಫೀಸಿನಿಂದ ಸೀದಾ ಮನೆಗೆ ಬಂದವಳನ್ನು ವಸುಧಾ ನಗುತ್ತಾ ಬರಮಾಡಿ ಕೊಂಡಳು. ''ಕಾಫಿ, ತಿಂಡಿ ಕೊಡ್ಲಾ ಮಾಲಾ...'' ಆದರದಿಂದ ಕೇಳಿದಳು.

''ಹೂಂ, ಕೊಡು ಬೋರ್ ಆಗ್ತಿದೆ.''

''ಬೋರ್... ಯಾಕೇ ಏನಾಯ್ತು?''

''ಭಾಸ್ಕರ್ ನಂಜನಗೂಡಿಗೆ ಹೋದರು. ನನ್ನನ್ನು ಕರೆದುಕೊಂಡು ಹೋಗಲಿಲ್ಲ

ಅದಕ್ಕೇ ಬೇಸರವಾಗ್ತಿದೆ.'' ವಸುಧಾ ಉತ್ತರಿಸಲಿಲ್ಲ. ಒಳಗಿನಿಂದ ತಿಂಡಿ ಕಾಫಿಯ ಟ್ರೇಯನ್ನು ಹಿಡಿದು ಬಂದಳು.

''ಭಾಸ್ಕರನ್ನ ನೀನು ನೋಡಿಲ್ಲ ಅಲ್ವಾ... ಎಂಥಾ ಹ್ಯಾಂಡ್ಸಮ್ ಗೊತ್ತಾ? ನಕ್ಕರೆ ಬಲಗೆನ್ನೆಯಲ್ಲಿ ಗುಳಿ ಬೀಳುತ್ತೆ. ಅಂಡ್ ವೆರಿ ರೋಮ್ಯಾಂಟಿಕ್...''

''ನಿನ್ನ ಸ್ವಭಾವದ ಪ್ರಕಾರ ಅವನು ಈಗಾಗಲೇ ಬೋರ್ ಆಗಿರಬೇಕಾಗಿತ್ತು. ಅದ್ಹೇಗೆ ಅವನನ್ನು ಇನ್ನೂ ಬೇರ್ ಮಾಡ್ತಿದೀಯ...?'' ವಸುಧಾ ಕೆಣಕಿ ನುಡಿದಳು.

''ಯಾಕೆ ಅಂದ್ರೆ ಸಚ್ ಎ ನೈಸ್ ಮ್ಯಾನ್...''

''ಅವನ ರೂಪ, ಗುಣ ಹೇಗೇ ಇರಲಿ, ನಿಮ್ಮ ಸಂಬಂಧಕ್ಕೆ ಸಮಾಜದ ಸೀಲ್ ಇಲ್ಲ. ಸಮಾಜ ಇದನ್ನು ಒಪ್ಪಲ್ಲ. ಜನ ಒಪ್ಪುವ ಹಾಗೆ ಬಾಳಬೇಕು ಅಲ್ವಾ?''

''ಯಾರು ಒಪ್ಪಲಿ ಬಿಡಲಿ, ಇದು ನನ್ನ ಲೈಫ್... ಜೀವನಪರ್ಯಂತ ನಾವಿಬ್ರೂ ಹೀಗೇ ಒಟ್ಟಿಗೇ ಇರೋಕೆ ಸಾಧ್ಯವಾಗದಿದ್ದರೂ ನನಗೆ ಬೇಸರವಿಲ್ಲ. ಈ ವಂಡರ್‌ಫುಲ್ ಡೇಸ್ ಮಾತ್ರ ನನ್ನ ಜೀವನದಲ್ಲಿ ಸದಾ ಹಸಿರಾಗಿರುತ್ತದೆ.'' ಅತ್ತಇತ್ತ ನೋಡಿದಳು. ''ಹೋಗಲಿ ಬಿಡು, ನಿನ್ನ ದೂರ್ವಾಸ ಇನ್ನೂ ಬಂದಿಲ್ವಾ?...''

''ಯಾವುದೋ ಪಾರ್ಟಿ ಇದೆ. ತಡವಾಗಿ ಬರ್ತೀನಿ ಅಂತ ಫೋನು ಮಾಡಿದ್ದರು. ನಿನಗೆ ಹೇಳಿರಲಿಲ್ವಾ?''

''ನಾನು ಆ ಪಾರ್ಟಿ ಗೀರ್ಟಿಗೆಲ್ಲಾ ಹೋಗೋಳಲ್ಲ. ಅಲ್ಲದೇ ಯಾವ ಫಾರಿನರ್‍ಸ್ ಬಂದಿದಾರೋ... ನನ್ನಂಥ ಗೂಷ್ಲು ಅವನ ಪಾರ್ಟಿಗೆ ಸರಿಹೋಗಲ್ಲ.'' ನಕ್ಕಳು. ''ಎನಿವೇ ನಾನು ಬಂದಿದೀನೀಂತ ಅವನಿಗೆ ಹೇಳಬೇಡ. ನನ್ನ ಪಾಡಿಗೆ ನಾನು ಈ ರಾತ್ರಿ ಮಲಗಿರ್ತೀನಿ. ನಾಳೆ ಮತ್ತೆ ಗೆಸ್ಟ್‌ಹೌಸ್‌ಗೆ ಹೋಗ್ತೀನಿ.''

''ಗೆಸ್ಟ್‌ಹೌಸ್‌ಗೂ ಭಾಸ್ಕರ ಬರ್ತಾನಾ?''

''ಇಲ್ಲ, ಅವನಿಗೆ ಆ ವಾಚ್‌ಮನ್ ಮೇಲೆ ನಂಬಿಕೆ ಇಲ್ಲ. ಅದಕ್ಕೇ, ನೀನು ಅಲ್ಲಿಗೆ ಹೋಗಬೇಡ, ತವರುಮನೆಗೆ ಹೋಗು ಅಂತ ಇಲ್ಲಿಗೆ ಕಳಿಸಿದ.''

''ಅವನ ಮಾತಿಗೆ ಬೆಲೆ ಕೊಟ್ಯಾ?...''

''ಹೂಂ, ಕೊಡಬೇಕಾಯ್ತು, ಏನು ಮಾಡೋದು...?'' ತುಟಿ ಕೊಂಕಿಸಿದಳು.

''ಏನು ಅಡಿಗೆ ಮಾಡಲಿ? ನಿನಗೆ ಅನ್ನ ಇಷ್ಟವೋ ಚಪಾತಿ ಇಷ್ಟವೋ...?''

''ನೀನು ಮಾಡ್ತೀಯಾ? ಅಡಿಗೆಯವರು ಎಲ್ಲಿ?''

''ನೀನು ಕಳಿಸಿದಾಗ ಹೋದೋರು ಮತ್ತೆ ಬರಲೇ ಇಲ್ಲ. ಅವರಿಗೆ ಎಷ್ಟು ದುಡ್ಡು ಕೊಟ್ಟೆ? ಅದಿನ್ನೂ ಖರ್ಚಾಗಿಲ್ಲವೇನೋ...''

''ಎಷ್ಟು ಕೊಟ್ಟೆನೋ ಜ್ಞಾಪಕವಿಲ್ಲ, ಬೇರೆಯವರು ಸಿಗೋದಿಲ್ವಾ?''

''ಸಿಕ್ಕಿದಾರೆ, ಬೆಳಗಿನ ಹೊತ್ತು ಬಂದು ತಿಂಡಿ, ಅಡಿಗೆ ಎಲ್ಲಾ ಮಾಡ್ತಾರೆ. ರಾತ್ರಿಗೆ ಅವರು ಮತ್ತೆ ಬರಲ್ಲ. ಎರಡು ಹೊತ್ತಿಗೂ ಆಗುವಷ್ಟು ಮಾಡ್ತಾರೆ.''

''ಅದನ್ನೇ ಅಡ್ಜಸ್ಟ್ ಮಾಡಿಕೊಳ್ಳೋಣ ಬಿಡು... ನಾನು ಭಾಸ್ಕರ ಇಬ್ಬರೂ ಒಂದೇ ಕ್ಯಾರಿಯರ್ ಊಟವನ್ನು ಅಡ್ಜಸ್ಟ್ ಮಾಡಿಕೊಳ್ತೀವಿ.''

''ನಿನಗ್ಯಾಕೆ ಇಂತಹ ಹಣೇಬರಹ ಮಾಲಾ... ಭಾಸ್ಕರನನ್ನ ಮದುವೆಯಾಗೋ ವಿಷಯ ಏನು ಯೋಚಿಸಿದೆ...?''

''ಏನೂ ಇಲ್ಲ, ಅದು ಹಾಗೇ ಪೆಂಡಿಂಗ್‌ನಲ್ಲಿದೆ. ನನ್ನ ಜಾತಕದಲ್ಲಿ ಎರಡು ಮದುವೆಯ ಯೋಗವಿದ್ದರೆ ಹಾಗೇ ಆಗುತ್ತದೆ. ಬೇಕಾದರೆ ಹೋಗಿ ಜ್ಯೋತಿಷಿಗಳನ್ನು ಕೇಳಿಕೊಂಡು ಬಾ. ಇಂಟರೆಸ್ಟಿಂಗ್ ಆಗಿರುತ್ತೆ.''

''ನಿನಗೆ ನಂಬಿಕೆ ಇದ್ದರೆ ಹೋಗೋಣ. ಆದರೆ ಅವರು ಏನು ಹೇಳುತ್ತಾರೋ ಅದನ್ನೆಲ್ಲಾ ಸಹನೆಯಿಂದ ಕೇಳ್ಕೋಬೇಕು. ತಾಳ್ಮೆಗೆಟ್ಟು ಎದ್ದು ಬರಬಾರದು.''

''ಬೇಡ ಬಿಡು. ನಾನು ಬರಲ್ಲ. ನೀನೇ ಹೋಗಿ ಕೇಳಿಕೊಂಡು ಬಾ. ಬರೀ ಕುತೂಹಲ ಅಷ್ಟೇ... ನಂಬಿಕೆ ಕಡಿಮೆ. ಆದರೆ ಒಂದು ವೇಳೆ ಅವರು ಹೇಳೋದೆಲ್ಲಾ ನಿಜವಾಗಿ ಬಿಟ್ಟರೇ...?''

''ಸೆಂಟ್ ಪರ್ಸೆಂಟ್ ನಿಜವಾಗಲ್ಲ, ಅದು ಅವರುಗಳಿಗೇ ಗೊತ್ತು. ಸುಮಾರು ಅರವತ್ತರಿಂದ ಎಂಭತ್ತು ಪರ್ಸೆಂಟ್‌ನಷ್ಟು ನಿಜವಾಗಬಹುದು...''

''ಸಾಕು ಬಿಡು. ಫಸ್ಟ್‌ಕ್ಲಾಸ್ ಅಥವಾ ಡಿಸ್ಟಿಂಕ್ಷನ್. ಇನ್ನೇನು ಬೇಕು?'' ಮಾಲಾ ನಕ್ಕಳು. ವಸುಧಾ ನಗಲಿಲ್ಲ. ಮಾಲಾಳನ್ನೇ ನೋಡುತ್ತಿದ್ದಳು. ಮುಂದೆ ಇವಳ ಗತಿಯೇನು ಎಂದು ಚಿಂತಿಸುತ್ತಿದ್ದಳು.

ಭಾಸ್ಕರ ನಂಜನಗೂಡಿನಿಂದ ಫೋನು ಮಾಡಿದ್ದ. ''ನಾನು ಇನ್ನೊಂದೆರಡು ದಿನ ಇಲ್ಲೇ ಇರಬೇಕಾಗುತ್ತದೆ. ಅಮ್ಮನಿಗೆ ಸ್ವಲ್ಪ ಹುಶಾರಿಲ್ಲ. ಡಾಕ್ಟರರ ಹತ್ತಿರ ಕರೆದುಕೊಂಡು ಹೋಗಬೇಕು...'' ಎಂದು ಹೇಳಿದ.

''ನಾನೇ ಬಂದುಬಿಡ್ತೀನಿ'' ಮಾಲಾ ನುಡಿದಾಗ ತಟ್ಟನೆ ನುಡಿದಿದ್ದ.

''ಬೇಡ ಬೇಡ... ನಾನು ಸ್ವಲ್ಪ ಬಿಜ಼ಿಯಾಗಿದೀನಿ. ಸ್ವಲ್ಪ ಮನೆ ರಿಪೇರಿ ಕೆಲಸವೂ ಇದೆ...'' ಎಂದಿದ್ದ. ಮಾಲಾ ಬೇಸರದಿಂದ ರಿಸೀವರ್‌ನ ಕುಕ್ಕಿದಳು. ಮತ್ತೆ ಸ್ವಲ್ಪ ಹೊತ್ತಿನಲ್ಲೇ ಭಾಸ್ಕರ ಪುನಃ ಮಾತಾಡಿದ.

''ಒಂದು ವಿಚಾರ ಗೊತ್ತಾ? ಹೇಳಲೋ ಬೇಡವೋ ಅಂತ ಯೋಚಿಸ್ತಿದೀನಿ.''

''ಯೋಚಿಸ್ತಾನೆ ಇರಿ. ನಾನು ಡಿಸ್‌ಕನೆಕ್ಟ್ ಮಾಡ್ತೀನಿ.''

''ಬೇಡ ಬೇಡ. ಧ್ರುವ ಬೆಂಗಳೂರಿಗೆ ಬಂದಿದಾರಂತೆ. ನಿಮ್ಮ ಮನೆಗೆ ಬಂದಿಲ್ವಾ?''

''ಬರದಿದ್ದರೆ ಬೇಡ. ಅವರ ವಿಚಾರ ನಿಮಗ್ಯಾಕೆ?'' ಸಿಡುಕಿದಳು.

''ಅವರಿಬ್ಬರೂ ನಂಜನಗೂಡಿಗೆ ಬರ್ತಿದಾರಂತೆ. ದೇವರಿಗೆ ಮುಡಿ ಕೊಡೋಕೆ...'' ಅವನು ನಕ್ಕಂತೆ ಅನಿಸಿತು ಇವಳಿಗೆ...

''ಮುಡಿಯನ್ನಾದರೂ ಕೊಡಲಿ, ತಲೆಯನ್ನಾದರೂ ಕಡಿದು ಕೊಡಲಿ, ನನಗ್ಯಾಕೆ ಇದನ್ನೆಲ್ಲಾ ಹೇಳ್ತಿದೀರಿ? ಐ ಆಮ್ ನಾಟ್ ಬಾದರ್ಡ್''

''ಆಫೀಸಿಗೆ ಫೋನು ಮಾಡಿದಾಗ ಈ ವಿಷಯ ತಿಳಿಯಿತು. ಅವರಿಗೆ ಇಳಿದು ಕೊಳ್ಳಲು ವ್ಯವಸ್ಥೆ ಮಾಡಬೇಕಂತೆ. ನಿಮಗೇನಾದ್ರೂ ಗೊತ್ತಾ ಅಂತ ಕೇಳಿದೆ... ಅಷ್ಟೆ''

''ನನಗೆ ಯಾವ ವಿಷಯವೂ ಗೊತ್ತಿಲ್ಲ. ನೀವು ಯಾವ ವ್ಯವಸ್ಥೆಯನ್ನೂ ಮಾಡಬೇಡಿ... ಇದೆಲ್ಲಾ ನಿಮಗ್ಯಾಕೆ?''

''ಹಾಗೆಲ್ಲಿ ಆಗುತ್ತೆ! ಅವರೂ ನನಗೆ ಬಾಸ್... ಇಲ್ಲ ಅನ್ನೋಕಾಗುತ್ತಾ... ಸಧ್ಯದಲ್ಲೇ ನನ್ನನ್ನು ಬಾಂಬೆಗೆ ಅವರ ಆಫೀಸಿಗೆ ಕಳಿಸ್ತಿದ್ದಾರಂತೆ...''

''ನೀವು ಹೋಗಬೇಡಿ. ಬರೋಕಾಗಲ್ಲ ಅನ್ನಿ.''

''ಹಾಗಂದ್ರೆ ನನ್ನ ಕೆಲಸ ಹೋಗತ್ತಲ್ಲ. ಈಗ ಸಂಬಳವನ್ನು ಹೆಚ್ಚಿಸಿದಾರಂತೆ. ಇದು ಅವಕಾಶ. ಇದನ್ಯಾರಾದ್ರೂ ಬಿಡ್ತಾರಾ?... ಆದರೂ ಯೋಚಿಸಬೇಕಾಗಿದೆ. ಅಮ್ಮ ಏನಂತಾಳೋ... ಬಾಂಬೆ ದೂರ... ಅಲ್ಲಿಗೆ ಎಲ್ಲರನ್ನೂ ಕರೆದುಕೊಂಡು ಹೋಗ ಕ್ಕಾಗಲ್ಲ...''

''ನಿಮ್ಮ ತಾಯಿ ಬೇಡಾಂದ್ರೆ ಹೋಗಲ್ವಾ?''

''ಇಲ್ಲ, ಕೆಲಸಕ್ಕೆ ರಾಜೀನಾಮೆ ಕೊಟ್ಟು ಬೇರೆ ಕಡೆ ಕೆಲಸ ಹುಡುಕ್ತೀನಿ.''

''ನಿಮ್ಮ ತಾಯಿಗೆ ದೇವರು ಒಳ್ಳೆಯ ಬುದ್ಧಿಯನ್ನೇ ಕೊಡಲಿ. ನೀವು ಕೆಲಸಕ್ಕೆ ರಾಜೀನಾಮೆ ಕೊಟ್ಟರೂ ಪರವಾಗಿಲ್ಲ. ಧ್ರುವನ ಕೈಕೆಳಗೆ ಮಾತ್ರ ಕೆಲಸ ಮಾಡಬೇಡಿ. ಇದು ನನ್ನ ಆಸೆ.''

''ಇನ್ನೂ ನೋಡೋಣ, ಆ ಕಾಲ ಬಂದಾಗ. ಅದೆಲ್ಲಾ ರೂಮರ್. ರಾತ್ರಿ ಚೆನ್ನಾಗಿ ನಿದ್ದೆ ಬಂತಾ? ಅಥವಾ... ನನ್ನ ನೆನಪಿನಲ್ಲಿ ಜಾಗರಣೆಯೋ...?''

''ಜಾಗರಣೆಯೂ ಇಲ್ಲ, ಉಪವಾಸವೂ ಇಲ್ಲ, ಹೊಟ್ಟೆ ತುಂಬಾ ಉಂಡು, ಗಡದ್ದಾಗಿ ನಿದ್ದೆ ಮಾಡಿದೆ ನಿಮ್ಮ ಕಾಟವಿಲ್ಲದೇ...'' ಅವಳು ಕಿಲಕಿಲನೆ ನಕ್ಕಾಗ, ಅವನು ''ಆಮೇಲೆ ವಿಚಾರಿಸಿಕೊಳ್ತೀನಿ...'' ಎಂದು ಹೇಳಿ ಲೈನ್ ಕಟ್ ಮಾಡಿದ.

* * * *

''ಮಾವಾ ಊಟಕ್ಕೆ ಬರಬೇಕಂತೆ ಅಮ್ಮ ಕರೀತಿದಾಳೆ''. ಹಿಂದಿನಿಂದ ಭಾರತಿ ಕರೆದಾಗ ಬೇಸರದಿಂದ 'ಹೂಂ' ಎಂದ. ಹುಣ್ಣಿಮೆಯ ಚಂದ್ರನನ್ನು ನೋಡುತ್ತಾ

ಮಾಲಾಳ ನೆನಪಿನಲ್ಲಿ ಈಜಾಡುತ್ತಿದ್ದವನಿಗೆ ರೇಗಿತ್ತು. ಅವಳು ಮತ್ತೆ ಕರೆದಾಗ ಹಿಂತಿರುಗಿದ. ಸಮೀಪದಲ್ಲಿ ನಿಂತಿದ್ದ ಭಾರತಿ, ಹುಣ್ಣಿಮೆಯ ಬೆಳಕಿನಲ್ಲಿ ಬೇರೆ ರೀತಿಯಲ್ಲಿ ಕಂಡಳು. ಮತ್ತೆ ಮತ್ತೆ ನೋಡಿದ. ಏನೋ ಆಲೋಚನೆ ಮೂಡಿ ಮರೆಯಾಯ್ತು.

''ಹೂಂ, ನಡೀ'' ಎನ್ನುತ್ತಾ ಅವಳ ಜೊತೆ ಒಳಗೆ ಬಂದ. ಅಕ್ಕ ಇಬ್ಬರಿಗೂ ಬಡಿಸಿದಳು. ತಮ್ಮ ಆಗಾಗ ಭಾರತಿಯನ್ನೇ ನೋಡುತ್ತಾ ಊಟ ಮಾಡುತ್ತಿರುವುದನ್ನು ಗಮನಿಸಿದ್ದಳು.

ಯಾವುದೋ ಒಂದು ಪತ್ರಿಕೆಯನ್ನು ಹಿಡಿದು ದಿಂಬಿಗೆ ಒರಗಿ ಓದುತ್ತಿದ್ದವನು ಭಾರತಿ ಬಂದು ನಿಂತಿದುದನ್ನು ಗಮನಿಸಿ ''ಏನು ಬೇಕಾಗಿತ್ತು?'' ಎಂದ.

''ಮಾವಾ... ನಾನು ಇವತ್ತು ಇಲ್ಲಿ ಮಲಗಿಕೊಳ್ಳಲಾ...?''

''ನಿಮ್ಮಮ್ಮ ಕಳಿಸಿದಳಾ ನಿನ್ನನ್ನ...?''

''ಹೂಂ... ಇವತ್ತು ಅಲ್ಲೇ ಮಲಕ್ಕೋ... ಅವನನ್ನೇನು ಕೇಳಬೇಡ ಅಂದಳು.''

''ಮತ್ಯಾಕೆ ಕೇಳ್ತಿದೀಯಾ?...''

''ನೀನು ಬೈತೀಯ... ಅದಕ್ಕೇ ಕೇಳಿದೆ.''

''ನಾನು ಬೈಯಲ್ಲ, ಮಲಕ್ಕೋ...''

ಅವನ ಪಕ್ಕದಲ್ಲಿ ಮಲಗಿದಳು. ''ಸ್ವಲ್ಪ ದೂರಕ್ಕೆ ಮಲಗು. ಅದೇನು ಮೈಗೆ ಮೈ ತಗಲುವ ಹಾಗೆ ಮಲಗಿದೀಯ...''

''ಹೀಗೆ ಮಲಗಿದರೆ, ನನಗೆ ಮಗುವಾಗುತ್ತಂತೆ ಹೌದಾ ಮಾವಾ...?'' ಬೆಚ್ಚಿದ.

''ಇದನ್ನೂ ನಿಮ್ಮಮ್ಮ ಹೇಳಿದಾಳಾ... ಹುಚ್ಚು ಹುಡುಗಿ. ಹಾಗೆಲ್ಲಾ ಏನೂ ಆಗಲ್ಲ, ಸುಮ್ಮನೇ ನಿದ್ದೆ ಮಾಡು...''

''ಮಾವಾ... ನಾನು ನಿನ್ನ ಕಾಲನ್ನು ಒತ್ತಲಾ...'' ಎನ್ನುತ್ತಾ ಎದ್ದಳು.

''ಕಾಲು ಗೀಲನ್ನು ಮುಟ್ಟಿದರೆ ಒದ್ದುಬಿಡ್ತೀನಿ. ಸುಮ್ಮನೇ ಮಲಗದೇ ಇದ್ದರೆ ಆಚೆಗೆ ತಳ್ತೀನಿ'' ವಿನಾಕಾರಣ ರೇಗಿದ.

''ಯಾಕೆ ಮಾವಾ... ಸದಾ ಬೈತೀಯ.. ಮುಂಚೆ ನೀನು ಹೀಗಿರಲಿಲ್ಲ, ನನಗೆ ಬೆಲೂನು ಊದಿ ಕೊಡುತ್ತಿದ್ದೆ. ಗಾಳಿಪಟ ಮಾಡಿಕೊಡುತ್ತಿದ್ದೆ...''

''ಆಗ ನೀನು ಚಿಕ್ಕವಳಾಗಿದ್ದೆ. ಈಗ ನೀನು ದೊಡ್ಡವಳಾಗಿದೀಯ. ಬೆಲೂನು ಗಾಳೀಪಟದೊಂದಿಗೆ ಆಡುವ ವಯಸ್ಸಾ..?'' ಅವಳ ಯೌವನವನ್ನು ಅಳತೆ ಮಾಡಿದ.

''ಅಮ್ಮನೂ ಅದನ್ನೇ ಹೇಳ್ತಾಳೆ. ನೀನೀಗ ದೊಡ್ಡವಳಾಗಿದೀಯ... ಮಗುವನ್ನು ಹೊತ್ತು ಹೆತ್ತು ಎತ್ತಿ ಆಡಿಸುವ ವಯಸ್ಸು ಅಂತ ಹೇಳ್ತಾನೇ ಇರ್ತಾಳೆ.''

''ನಿಮ್ಮಮ್ಮ ನೀನೂ ಇಬ್ಬರೂ ಸದಾ ಇದನ್ನೇ ಮಾತನಾಡ್ತೀರಾ?''

''ಇಲ್ಲ, ಅಜ್ಜೀನೂ ಹೀಗೇ ಹೇಳುತ್ತೆ.'' ಎಲ್ಲರ ಮೇಲೂ ಕೂಗಿ ಕಿರುಚಾಡುವ ಮನಸ್ಸಾಗಿತ್ತು. ಆದರೆ ತಡೆದುಕೊಂಡ. ಅವನೆಲ್ಲಿ ಬೈದುಬಿಡುವನೋ ಎಂದುಕೊಂಡು ಬೆದರುಗಣ್ಣುಗಳಿಂದ ನೋಡುತ್ತಿದ್ದವಳನ್ನು ಕಂಡು ಅಯ್ಯೋ ಪಾಪ... ಅಂತೆನ್ನಿಸಿತ್ತು. ಪಾಪ... ಮದುವೆ ಆದ ಮೇಲೆ ಒಂದು ದಿನವೂ ಪ್ರೀತಿಯಿಂದ ಮಾತನಾಡಿಸಿಲ್ಲ. ಇದರಲ್ಲಿ ಇವಳ ತಪ್ಪೇನು? ಇದು ನನಗೆ ಬಲವಂತದ, ಇಷ್ಟವಿಲ್ಲದ ಮದುವೆ. ಆದರೆ ಇವಳು ನನ್ನನ್ನು ಆಸೆಯಿಂದ ಮದುವೆಯಾಗಿರಬಹುದು. ಹೆಂಡತಿ ಎಂಬ ಕಾರಣದಿಂದ ನನಗೆ ಹೆದರುತ್ತಾಳೆ. ಆದರೆ ನಾನು ? ಪತಿಯಾಗಿ, ನನ್ನ ಹೆಂಡತಿಗೆ ಏನು ಸುಖವನ್ನು ಕೊಟ್ಟಿದೀನಿ? ಹೆದರಿಸಿ ಬೆದರಿಸಿ ಅಟ್ಟಿದೀನಿ. ಎಷ್ಟು ನೊಂದಿರಬಹುದು ಈ ಪುಟ್ಟ ಜೀವ! ನಾನು ನನ್ನ ಕರ್ತವ್ಯವನ್ನು ಮರೆತು ಬೇರೊಬ್ಬನ ಹೆಂಡತಿಯೊಂದಿಗೆ ಚಕ್ಕಂದ ಆಡಿದೆ. ಅದು ಸರಿಯೆ ! ನನ್ನಿಂದ ಸುಖವನ್ನು ಬಯಸಿದವಳಿಗೆ ಸುಖವನ್ನು ಕೊಟ್ಟಮೇಲೆ ನನ್ನ ಹೆಂಡತಿಗೂ ನಾನು ಸುಖ ನೀಡುವುದು ನನ್ನ ಧರ್ಮ ಎಂದುಕೊಂಡು ಅವಳ ಕಡೆ ತಿರುಗಿದ. ಅವಳು ನಿದ್ದೆಯ ಮಂಪರಿನಲ್ಲಿದ್ದಳು. ''ಭಾರತೀ...'' ಎನ್ನುತ್ತಾ ಅವಳ ಮೈ ಮುಟ್ಟಿದ. ಅವಳು ಬೆಚ್ಚಿದಳು.

''ಹೆದರಬೇಡ... ನಾನೇ... ನಿನ್ನ ಗಂಡ...'' ಎಂದ.

''ಏನು ಬೇಕಾಗಿತ್ತು ಮಾವಾ...''

''ನೀನು... ನೀನು ಬೇಕಾಗಿತ್ತು'' ಎಂದ ತೊದಲಿ.

''ನನಗೆ ನಿದ್ದೆ ಬರ್ತಿದೆ. ಏನು ಹೇಳ್ತಿದೀಯೋ ಗೊತ್ತಾಗ್ತಿಲ್ಲ'' ಎಂದಳು. ಅವನ ಸಹನೆ ಮೀರಿತು.

''ಸದಾ ನಿದ್ದೆ, ಊಟ ಇಷ್ಟೇ ಚಿಂತೆ. ಏಳು'' ಎನ್ನುತ್ತಾ ಬಲವಂತದಿಂದ ಎಬ್ಬಿಸಿದ. ಅವಳು ಆಕಳಿಸಿ, ತೂಕಡಿಸಿದಾಗ ಅವನ ಸಂಯಮ ಎಗರಿಹೋಯಿತು. ಒರಟಾಗಿ ಅವಳನ್ನು ತನ್ನೆಡೆಗೆ ಎಳೆದುಕೊಂಡ. ಅವಳ ನಿದ್ದೆ ಹಾರಿ ಹೋಯಿತು. ಬೆದರುತ್ತಾ ಎದ್ದು ನಿಂತಳು. ಉಟ್ಟ ಸೀರೆ ಬಿಚ್ಚಿ ಹೋಗಿ, ಅವನ ಕೈ ಸೇರಿತ್ತು. ನಾಚಿಕೆಯಿಂದ ಮೈ ಮುದುರಿದಳು.

''ನನ್ನ ಹತ್ತಿರ ಎಂಥಾ ನಾಚಿಕೆ ಸುಮ್ಮನೇ ಬಾ...'' ಎನ್ನುತ್ತಾ ಅವಳನ್ನು ಎತ್ತಿದ. ಅವಳು ಕಿರುಚುವುದರಲ್ಲಿದ್ದಳು. ''ಹುಶ್... ಕಿರುಚಿದ್ರೆ ಸಾಯಿಸಿಬಿಡ್ತೀನಿ'' ಎಂದು ಹೆದರಿಸಿ, ಅವಳನ್ನು ತನ್ನ ಮಗ್ಗುಲಿಗೆ ಮಲಗಿಸಿಕೊಂಡ. ಮಾವನ ಈ ವರ್ತನೆ ಹೊಸದು.

''ತಡೀ ಅಮ್ಮನಿಗೆ ಹೇಳ್ತೀನಿ'' ಎಂದವಳನ್ನು ದುರುದುರನೆ ನೋಡಿ ಕೆನ್ನೆಗೆ ಫಟ್ ಅಂತ ಹೊಡೆದ. ಭಯದಿಂದ ಚೀರಲೂ ಆಗದೆ ಕಣ್ಣುಮುಚ್ಚಿ ಮಲಗಿದಳು. ಅಸಹಾಯಕತೆಯಿಂದ ಮಲಗಿದ್ದ ಪತ್ನಿಯ ಮೇಲೆ ಆಕ್ರಮಣ ಮಾಡಿ ತನ್ನ ಹಕ್ಕನ್ನು ಚಲಾಯಿಸಿ ತನ್ನ ಪರಾಕ್ರಮವನ್ನು ಮೆರೆದ. ಮಾವಾ ಎಂದೂ ಹೀಗೆಲ್ಲಾ ಮಾಡಿದವನಲ್ಲ.

ಅಮ್ಮನಿಗೆ ಗೊತ್ತಾದರೆ ಖಂಡಿತಾ ಸುಮ್ಮನೆ ಬಿಡುವುದಿಲ್ಲ ಎಂದಕೊಂಡು ಅವನ ಹಾಳಿಯಿಂದ ಆಗುತ್ತಿರುವ ಯಾತನೆಯನ್ನು ಹಲ್ಲುಕಚ್ಚಿ ಸಹಿಸಿಕೊಂಡಳು. ಇದರ ಅರಿವು ಅವನಿಗಿರಲೇ ಇಲ್ಲ. ಕೋಮಲವಾದ, ಮೃದುವಾದ ಎಳೆಯ ಮೈಯ ಸವಿ ಅವನನ್ನು ಮತ್ತನನ್ನಾಗಿ ಮಾಡಿತ್ತು. ಬಯಕೆಯನ್ನು ತೀರಿಸಿಕೊಂಡು ಪಕ್ಕಕ್ಕೆ ತಳ್ಳಿದ.

ಅವನ ಹಿಡಿತ ಸಡಿಲವಾಗುತ್ತಿದ್ದಂತೇ ಭಾರತಿ ಅವನಿಂದ ದೂರ ಸರಿದು ಅವನನ್ನು ಅಸಹ್ಯವಾಗಿ ನೋಡಿದಳು.

''ತಡೀ ಅಮ್ಮನಿಗೆ ಹೇಳ್ತೀನಿ, ಅಜ್ಜೀಗೆ ಹೇಳ್ತೀನಿ.'' ಈಗ ಅವನ ಮತ್ತು ಇಳಿದಿತ್ತು. ಏನೇನು ಮಾಡಿಬಿಟ್ಟೆ ಎಂದು ತನ್ನ ಬಗ್ಗೆಯೇ ಹೀನಾಯವಾಗಿತ್ತು. ಇವಳೇನಾದರೂ ಅಕ್ಕನಿಗೆ ನಡೆದುದನ್ನೆಲ್ಲ ಹೇಳಿದರೆ, ತನಗೆ ಯಾವ ಮರ್ಯಾದೆಯೂ ಉಳಿಯುವುದಿಲ್ಲ ಎಂದು ಹೆದರಿದ...

''ಭಾರತೀ ಬಾ ಇಲ್ಲಿ'' ಕರೆದ. ಅವಳು ಬರಲಿಲ್ಲ. ''ನಾನು ನಿನ್ನ ಹತ್ತಿರಕ್ಕೆ ಬರಲ್ಲ. ನೀನು ಏನೇನೋ ಮಾಡ್ತೀಯ. ಅಮ್ಮಂಗೆ ಗೊತ್ತಾದ್ರೆ ನಿನ್ನನ್ನ ಸಿಗಿದು ತೋರಣ ಕಟ್ತಾಳೆ...'' ಆ ಹೊತ್ತಿನಲ್ಲೂ ಅವನಿಗೆ ನಗು ಬಂತು.

''ಇದನ್ನೆಲ್ಲ ಅಮ್ಮನಿಗೆ ಹೇಳಬಾರದು. ಇದು ನಮ್ಮಿಬ್ಬರ ವಿಷಯ. ನೀನು ನನ್ನ ಹೆಂಡತಿ ಅಲ್ವಾ... ನಿನಗೆ ಒಂದು ಪುಟ್ಟ ಮಗು ಬೇಕಲ್ವಾ?''

''ನನ್ನ ಮೈಕೈ ಎಲ್ಲಾ ನೋಯ್ತಿದೆ. ನಾನು ಹೇಳೇ ಹೇಳ್ತೀನಿ...''

''ಹೇಳಿದ್ರೆ ಚಚ್ಚಿಸಾಯಿಸಿಬಿಡ್ತೀನಿ'' ಅವನು ಬೆದರಿಸಿದಾಗ ತೆಪ್ಪಗಾದಳು. ಇವಳಿಗೆ ಬೆದರಿಕೆ ಭಾಷೆ ಮಾತ್ರ ಅರ್ಥವಾಗುತ್ತದೆಂದು ತಿಳಿಯಿತು. ತಾನು ಬೆದರಿಸಿ ಅವಳನ್ನು ತನ್ನವಳನ್ನಾಗಿ ಮಾಡಿಕೊಂಡಿದ್ದು ತಪ್ಪು ಎಂದೂ ಅನ್ನಿಸತೊಡಗಿತ್ತು. ಆದರೆ ಕಾಲ ಮಿಂಚಿ ಹೋಗಿತ್ತು. ಅವಿವೇಕಿಯಾಗಿಬಿಟ್ಟೆ. ಹೆಣ್ಣಿನ ಆಸೆ ಎಷ್ಟು ಕೆಟ್ಟದು. ಇದಕ್ಕೆಲ್ಲ ಕಾರಣ, ಮಾಲಾ... ಈ ಆಸೆಯನ್ನು ನನ್ನಲ್ಲಿ ತುಂಬಿದವಳು ಅವಳೇ... ಮದುವೆಯಾದ ಹೆಂಡತಿಯ ಮೇಲೆ ಅತ್ಯಾಚಾರ ನಡೆಸಿಬಿಟ್ಟೆ... ನಾನು ಕೆಟ್ಟವನು ಎಂದು ತನ್ನನ್ನು ತಾನೇ ಬೈದುಕೊಂಡ. ಇನ್ನೆಂದೂ ಇವಳನ್ನು ಮುಟ್ಟುವುದಿಲ್ಲ ಎಂದು ತನಗೆ ತಾನೇ ಪ್ರಮಾಣ ಹಾಕಿಕೊಂಡ...

ಮಾಲಾಳಿಂದ ಅವಳಿಗಾಗಿಯೇ ಕೊಡುವ ಸುಖದಲ್ಲಿ ತೃಪ್ತಿ ಇರುತ್ತಿತ್ತು. ಇಲ್ಲಿ ನಾನಾಗಿಯೇ ನನ್ನ ಹೆಂಡತಿಯಿಂದ ಕಿತ್ತುಕೊಂಡ ಸುಖ... ಇದರಲ್ಲಿ ಯಾವ ತೃಪ್ತಿಯೂ ಇಲ್ಲ. ಇಂದು ನಾನು ನೀಚನಾಗಿಬಿಟ್ಟೆ. ಭಾರತಿಯ ನೆಚ್ಚಿನ ಮಾವನಾದ ನಾನು ಇಂದು ಕ್ರೂರಿಯಾದ ಗಂಡನಾಗಿಬಿಟ್ಟೆ ಎಂದು ತನಗೆ ತಾನೇ ಧಿಕ್ಕಾರ ಹಾಕಿಕೊಂಡ. ಎದ್ದು ಶತಪಥ ತಿರುಗಿದರೂ ಮನಸ್ಸಿಗೆ ಶಾಂತಿ ಸಿಗಲಿಲ್ಲ. ಸೊರಗಿ ಸುಸ್ತಾಗಿ ಮಲಗಿದ್ದ ಭಾರತಿಯನ್ನು ಹತ್ತಿರದಿಂದ ನೋಡಿದ. ಅವಳನ್ನು ಕ್ಷಮೆ ಕೇಳಬೇಕೆಂದುಕೊಂಡ. ಆದರೆ

ನಿದ್ದೆಯಲ್ಲಿದ್ದವಳನ್ನು ಎಬ್ಬಿಸುವ ಮನಸ್ಸಾಗದೇ, ತಾನೇ ಆ ರೂಮಿನಿಂದ ಹೊರಬಂದ ವೆರಾಂಡದಲ್ಲಿದ್ದ ಈಸಿಚೇರ್ ಮೇಲೆ ಕುಳಿತ. ಬೆಳಗಿನ ಜಾವದಲ್ಲಿ ತಂಗಾಳಿ ಬೀಸಿದಾಗ ಅವನು ಗಾಢನಿದ್ದೆಯಲ್ಲಿದ್ದ.

''ಅದೇನೋ ಇಲ್ಲಿ ಮಲಗಿದೀಯ... ರೂಮಿನಲ್ಲಿ ಶೆಖೆಯಾಯ್ತಾ?'' ಎನ್ನುತ ಕೇಳಿದ ತಾಯಿಯನ್ನು ಕಣ್ಣುಬಿಟ್ಟು ನೋಡಿದ. ''ಅಮ್ಮ ನಿನ್ನ ಮಗ ಎರಡು ತಪ್ಪುಗಳನ ಮಾಡಿದ್ದಾನೆ'' ಎಂದು ಹೇಳಿ ಕ್ಷಮೆ ಕೇಳುವ ಮನಸ್ಸಾಗಿತ್ತು. ತಲೆ ತಗ್ಗಿಸಿ ಎದ್ದು ಬಚ್ಚ ಮನೆಗೆ ನಡೆದ.

ಎಷ್ಟು ಹೊತ್ತಾದರೂ ಮಗಳು ಎದ್ದು ಬಾರದಿದ್ದಾಗ ತಾಯಿ, ಮಗಳು ಇಬ್ಬರೂ ಆತಂಕದಿಂದ ರೂಮಿಗೆ ಬಂದರು. ಕತ್ತಿನವರೆಗೂ ಹೊದ್ದು ನಿಶ್ಚಿಂತೆಯಾಗಿ ಮಲಗಿದ್ದ ಳನ್ನು ಕಂಡು ತಾವೇ ಇಬ್ಬರೂ ಮುಸಿಮುಸಿ ನಕ್ಕರು.

ಮಾವನ ಮೇಲಿನ ಭಯದಿಂದ ಭಾರತಿ ತಾಯಿಯೊಡನೆ ಏನನ್ನೂ ಹೇಳಲಿಲ್ಲ ಅವರೂ ಕೇಳಲಿಲ್ಲ. ಆ ರಾತ್ರಿ ಭಾರತಿ, ಅವನ ರೂಮಿಗೆ ಹೋಗುವುದಿಲ್ಲವೆಂದು ಮೊಂಡುತನ ಮಾಡಿದಾಗ, ''ನೀನು ಹೋಗದೇ ಇದ್ದರೆ ಭಾಸ್ಕರ ಹೊಡೀತಾನೇ ಅಷ್ಟೇ' ಎಂದು ತಾಯಿ ಹೆದರಿಸಿದ್ದಳು. ಭಯದಿಂದ ನಡಗುತ್ತಿದ್ದವಳನ್ನು ಭಾಸ್ಕರ ಪ್ರೀತಿಯಿಂದ ಮಾತನಾಡಿಸಿದ.

''ನೆನ್ನೆ ರಾತ್ರಿ ನಾನು ನಿನಗೆ ತುಂಬಾ ನೋವನ್ನುಂಟು ಮಾಡಿದೆ ಅಲ್ವಾ? ನಿನಗ ಬೇಜಾರಾಗಿದ್ರೆ ನನಗೆ ಹೊಡಿ'' ಎಂದು ಅವಳ ಎದುರಿಗೆ ನಿಂತ. ಅವಳಿಗೆ ಅರ್ಥ ವಾಗಲಿಲ್ಲ. ''ನನ್ನನ್ನು ಕ್ಷಮಿಸು ಭಾರತೀ... ನಾನು ನಿನಗೆ ಇನ್ನು ಮುಂದೆ ಯಾವ ತೊಂದರ ಯನ್ನೂ ಕೊಡುವುದಿಲ್ಲ ನನ್ನಾಣೆ'' ಎಂದ. ಅವಳು ನಂಬಿದಳು.

''ಮಾವಾ... ನೆನ್ನೆ ಯಾಕೆ ಹಾಗೆ ಮಾಡಿದೆ?'' ಕೇಳಿದಳು.

''ನನ್ನ ತಲೆ ಕೆಟ್ಟಿತ್ತು ಅದಕ್ಕೆ'' ಎಂದ ನಗುತ್ತಾ. ಅವಳೂ ನಕ್ಕಳು. ಯಾವ ಭಯ ವಿಲ್ಲದೇ ಅವನ ಪಕ್ಕದಲ್ಲಿ ಸ್ವಲ್ಪ ಅಂತರದಲ್ಲಿ ಮಲಗಿದಳು. ಅವನು ಅವಳ ತಲೆಯ ಮೇಲ ಹಗುರವಾಗಿ ಕೈಯಾಡಿಸಿ, ಹೊದಿಕೆಯನ್ನು ಹೊದಿಸಿದ. ಮನಸ್ಸು ಸ್ವಲ್ಪ ನಿರಾಳವಾಗಿತ್ತು ನೆನ್ನೆ ರಾತ್ರಿ ನಾನೇಕೆ ಪಶುವಿನಂತೆ ವರ್ತಿಸಿದೆ ಎಂದು ಅವನಿಗೆ ಅವನೇ ಅನೇಕ ಬಾರಿ ಪ್ರಶ್ನಿಸಿಕೊಂಡ.

ಭಾರತಿಯನ್ನು ಸಮೀಪದಲ್ಲಿದ್ದ ಬಟ್ಟೆ ಅಂಗಡಿಗೆ ಕರೆದುಕೊಂಡು ಹೋಗಿ ಅವಳಿಗಿಷ್ಟವಾದ ಸೀರೆಯನ್ನು ಕೊಡಿಸಿದ. ಓಲೆ, ಝುಮುಕಿ ಕೊಡಿಸಿದ. ಹೋಟೆಲ್ಲಿಗೆ ಕರೆದುಕೊಂಡು ಹೋಗಿ ಮಸಾಲೆದೋಸೆ ಕೊಡಿಸಿದ. ಬಳೆ, ಕಾಲುಚೈನುಗಳನ್ನು ಭಾರತಿ ತನ್ನ ತಾಯಿಗೆ ತೋರಿಸಿ ಖುಷಿಪಟ್ಟಳು. ಇಂಥ ಮುಗ್ಧ ಹುಡುಗಿಯ ಮೇಲೆ ಅತ್ಯಾಚಾರ ವೆಸಗಿದೆನಲ್ಲ ಎನ್ನುವ ಕೊರಗು ಅವನಲ್ಲಿ ಉಳಿಯಿತು.

''ಅಮ್ಮ... ಅಂತೂ ನಿನ್ನ ಮಗ ದಾರಿಗೆ ಬಂದ. ಹೆಂಡತಿಯ ಮೇಲಿನ ಪ್ರೀತಿ ಜಾಗೃತವಾಗಿದೆ. ಅಂತೂ ನನ್ನ ಮಗಳಿಗೆ ಗಂಡನ ಪ್ರೀತಿ ಸಿಕ್ಕಿತು ಕಡೆಗೂ...''

''ಇದೆಲ್ಲ ನಂಜುಂಡೇಶ್ವರನ ಮಹಿಮೆ. ನೋಡ್ತಿರು ಈ ವರ್ಷದೊಳಗೆ ಮೊಮ್ಮಗ ಹುಟ್ಟುವುದು ಖಂಡಿತಾ.'' ತಾಯಿ, ಮಗಳ ಈ ಸಂಭಾಷಣೆ ಅವನಲ್ಲಿ ಜಿಗುಪ್ಸೆಯನ್ನುಂಟು ಮಾಡಿತು. ಬರೀ ಇಷ್ಟೇ ಇವರ ಪ್ರಪಂಚ. ಭಾರತಿಯ ದೇಹಕ್ಕೆ, ಮನಸ್ಸಿಗೆ ಆಗಿರುವ ನೋವು ಇವರಿಗೆ ಅರ್ಥವಾಗಲ್ಲವಲ್ಲ ಎಂದುಕೊಂಡ.

ಮಾವನಿಂದ ಆದ ಹಿಂಸೆಯ ನೋವನ್ನು ಭಾರತಿ ಮರೆತೇ ಬಿಟ್ಟಿದ್ದಳು. ಅವನು ಕೊಡಿಸಿದ ಒಡವೆ, ವಸ್ತ್ರಗಳಿಂದ ಸಂತುಷ್ಟಳಾಗಿದ್ದಳು. ಅತಿಶಯದಿಂದ ಅಮ್ಮನಿಗೆ, ಅಜ್ಜಿಗೆ ತೋರಿಸುತ್ತಿದ್ದುದನ್ನು ಕಂಡು ಅವನಿಗೂ ಹಾಯೆನಿಸಿತ್ತು. ಇಷ್ಟೇ ಈ ಹುಡುಗಿಯ ಪ್ರಪಂಚ. ಇದನ್ನೆಲ್ಲ ಕೊಡಿಸಿದರೆ, ಎಲ್ಲಾ ನೋವನ್ನೂ ಮರೆತುಬಿಡುತ್ತಾಳೆ. ಆದರೆ ಇವಳಷ್ಟು ಸಲೀಸಾಗಿ ಇರಲು ನನ್ನಿಂದ ಆಗುತ್ತಿಲ್ಲವಲ್ಲ... ಪದೇ ಪದೇ ಅದೇ ಘಟನೆ ಕೊರೆಯುತ್ತಿದೆಯಲ್ಲ... ಇಲ್ಲೇ ಇದ್ದರೆ ಕೊರಗು ಹೆಚ್ಚುತ್ತದೆ ಎಂದುಕೊಂಡು ಮಾರನೇ ದಿನವೇ ಬೆಂಗಳೂರಿಗೆ ಹೊರಟ. ಹೊರಡುವ ಮೊದಲು ಭಾರತಿಯ ಕೈಗೆ ನೂರು ರೂಪಾಯಿಗಳ ಐದು ನೋಟನ್ನು ಕೊಟ್ಟ.

''ನಂಗೆ ಬೇಡ... ನೀನೇ ಇಟ್ಕೋ...''

''ಇರಲಿ ಇಟ್ಕೋ...'' ಎಂದು ಹೇಳಿ ಅವಳ ತಲೆ ಸವರಿದ್ದ. ದುಡ್ಡು ಕೊಟ್ಟು ಬಾಯಿ ಮುಚ್ಚಿಸಿದೆ ಅಂತ ಒಂದು ಸಲ ಅನ್ನಿಸಿದರೆ, ಅವಳಿಂದ ಪಡೆದ ಸುಖಕ್ಕೆ ಬೆಲೆ ಕೊಟ್ಟೆನೇನೋ ಅಂತ ಸಹ ಅನ್ನಿಸಿತ್ತು. ಆದರೂ ಸರಿಪಡಿಸಲಾಗದ ಅಚಾತುರ್ಯ ನಡೆದುಹೋಗಿತ್ತು. ಇಲ್ಲಿಂದ ದೂರ ಎಲ್ಲಾದರೂ ಹೋಗಿ, ನಡೆದ ಘಟನೆಯನ್ನು ಮರೆಯಬೇಕು ಎಂದುಕೊಂಡ.

* * * *

ಅವನನ್ನು ಕಂಡೊಡನೆ ಮಾಲಾ ಉತ್ಸಾಹದಿಂದ ಮಾತನಾಡಿಸಿದಳು. ಅವನ ಕೊರಗು ಸ್ವಲ್ಪ ಮಟ್ಟಿಗೆ ಕಡಿಮೆ ಆಗಿತ್ತು. ಗಂಡನಿಂದ ದೂರ ಇದ್ದು ಪರಗಂಡಸಿನ ಸಹವಾಸ ಮಾಡಿರುವ ಈ ಹೆಂಗಸು ಎಷ್ಟು ಹಾಯಾಗಿದಾಳೆ. ನಾನು ನನ್ನ ಹೆಂಡತಿಯೊಡನೆ ಬಲಾತ್ಕಾರ ಮಾಡಿದೆ ಎಂದೇಕೆ ಕೊರಗಬೇಕು? ಗಂಡ ಹೆಂಡತಿಯ ಸಂಬಂಧ ಅತ್ಯಾಚಾರವಲ್ಲ ಎಂದು ತನಗೆ ತಾನೇ ಹೇಳಿಕೊಂಡ.

''ಏನು ಬಹಳ ಗಾಢವಾಗಿ ಯೋಚಿಸ್ತಿದೀರಿ?''

ಒಂದು ಗಳಿಗೆ ಎಲ್ಲವನ್ನೂ ಹೇಳಿಬಿಡುವ ಮನಸ್ಸಾಗಿತ್ತು. ಆದರೆ ಯಾಕೋ ಅದು ತನ್ನ ವೈಯಕ್ತಿಕ ವಿಷಯ ಅದನ್ನೇಕೆ ಇವಳಿಗೆ ಹೇಳಬೇಕು ಎಂದುಕೊಂಡು, ''ಏನೂ ಇಲ್ಲ... ನಾನು ಬಾಂಬೆಗೆ ಹೋಗಲೇಬೇಕಾಗಿದೆ. ಅದನ್ನೇ ಯೋಚಿಸ್ತಿದ್ದೆ...''

"ನೀವು ಒಪ್ಪಿಕೊಂಡು ಬಿಟ್ರಾ?" ನಿರಾಸೆಯ ಧ್ವನಿಯಲ್ಲಿ ಕೇಳಿದ್ದಳು.

"ನಂಜನಗೂಡಿಗೆ ಧ್ರುವ, ಪ್ರತಾಪ ಬಂದಿದ್ದವರು, ನನ್ನೊಡನೆ ಮಾತನಾಡಿದರು. ಬಲವಂತವಾಗಿ ಒಪ್ಪಿಸಿದರು... ನಮ್ಮಿಬ್ಬರ ಸಂಬಂಧದ ಬಗ್ಗೆ ಅವರಿಗೆ ಅನುಮಾನ ಬಂದಿರಬಹುದೇ, ಅದಕ್ಕೇ ನಮ್ಮಿಬ್ಬರನ್ನು ದೂರ ಮಾಡುತ್ತಿರಬಹುದೇ ಅಂತ."

"ಅಷ್ಟೆಲ್ಲಾ ಯಾಕೆ ಯೋಚಿಸ್ತಾರೆ, ಮಧೂಗೆ ಹೇಳಿ ನಿಮ್ಮನ್ನು ಕೆಲಸದಿಂದ ತೆಗಿಸಿ ಹಾಕಿರೋರು... ಅಂಥಾ ಧೂರ್ತರು... ನಿಮಗೇನು ಗೊತ್ತು?"

"ಕೆಲಸದಿಂದ ತೆಗೆದರೂ, ನಾನು ಇದೇ ಊರಿನಲ್ಲಿದ್ದರೆ, ನಾವಿಬ್ಬರೂ ಭೇಟಿಯಾಗದಂತೆ ಕಾಯುಕ್ಕೆ ಆಗುತ್ತಾ? ಅದಕ್ಕೇ ಈ ಪ್ಲಾನ್ ಮಾಡಿರಬಹುದು"

"ನೀವು ಹೋಗಬೇಡಿ, ನಾನು ಹೇಳ್ತೀನಿ. ನಿಮಗೆ ನಾನು ಬೇಕೋ... ನಿಮ್ಮ ಕೆಲಸ ಬೇಕೋ..." ಭಾಸ್ಕರ ವಿಷಾದದಿಂದ ನಕ್ಕ.

"ನನ್ನ ಹೊಟ್ಟೆ ತುಂಬಿದ ಮೇಲೆ ನೀವು ಬೇಕೆನಿಸುತ್ತದೆ. ಅಲ್ಲದೇ ನಮ್ಮಿಬ್ಬರ ಸಂಬಂಧದಿಂದ ನನ್ನ ಮನೆಯವರ ಹೊಟ್ಟೆ ತುಂಬುವುದಿಲ್ಲವಲ್ಲ"

"ಹಾಗಾದ್ರೆ ಹೋಗೋದು ಅಂತ ನೀವೇ ಡಿಸೈಡ್ ಮಾಡಿದೀರಿ. ಮತ್ಯಾಕೆ ನನ್ನನ್ನ ಕೇಳ್ತೀರಿ" ಎನ್ನುತ್ತಾ ಕೋಪದಿಂದ ಎದ್ದಳು. ಅಷ್ಟರಲ್ಲಿ ಗೆಸ್ಟ್‌ಹೌಸಿನ ವಾಚ್‌ಮನ್ ಬಂದುದರಿಂದ ಹಾಗೇ ನಿಂತಳು. ಅವನ ಕೈಯಲ್ಲಿ ಉದ್ದನೆಯ ಲಕೋಟೆ ಒಂದು ಇತ್ತು. ಅದನ್ನು ಭಾಸ್ಕರನ ಕೈಗೆ ಕೊಟ್ಟ. "ಇದು ಗೆಸ್ಟ್‌ಹೌಸಿನ ರೂಮಿನಲ್ಲಿತ್ತು ಸಾಬ್" ಎಂದ. ಅದರ ಮೇಲೆ ಧ್ರುವನ ಹೆಸರನ್ನು ಟೈಪ್ ಮಾಡಲಾಗಿತ್ತು. ಹಿಂದೆ ಮುಂದೆ ತಿರುಗಿಸಿ ನೋಡಿ ಅದನ್ನು ಮಾಲಾಳ ಕೈಗಿತ್ತ. ಮಾಲಾ ಅದು ಯಾರದ್ದು ಎಂದೂ ಸಹ ನೋಡದೆ ತನ್ನ ಹ್ಯಾಂಡ್‌ಬ್ಯಾಗಿಗೆ ಹಾಕಿಕೊಂಡಳು. ವಾಚ್‌ಮನ್ ಇಬ್ಬರಿಗೂ ಸಲಾಮು ಹೊಡೆದು ಹೊರಟುಹೋದ. ಭಾಸ್ಕರ ಏನಾದರೂ ಹೇಳುವ ಮೊದಲೇ ಮಾಲಾ ಅಲ್ಲಿಂದ ಹೊರನಡೆದಿದ್ದಳು. ಹಾಗೇ ಯೋಚಿಸುತ್ತಾ ಮಧುಕರನ ಛೇಂಬರ್‌ಗೆ ಬಂದಳು. ಅವನು ವಿಸ್ಮಯದಿಂದ ನೋಡಿದ. "ಕೂತ್ಕೋ" ಎಂದ ಸಹನೆಯಿಂದ.

"ನನ್ನ ಮನೆಯನ್ನು ಕಸಿದುಕೊಂಡಿದೀಯಲ್ಲ, ಅದರ ಬದಲಿಗೆ ಭಾರ್ಗವನ ಆಸ್ತಿಯನ್ನು ನನಗೆ ಬರೆದುಕೊಡು" ಎಂದಳು ಒರಟಾಗಿ... ಮಧು ತಬ್ಬಿಬ್ಬಾದ.

"ಭಾರ್ಗವನ ಭಾಗದಲ್ಲಿ ನನಗೂ ಪಾಲಿದೆ ಅಲ್ವಾ... ಅದನ್ನೆಲ್ಲಾ ನನಗೆ ಕೊಡು. ಅದರ ಬದಲಿಗೆ ನನ್ನ ಮನೆಯನ್ನು ನೀನೇ ಇಟ್ಕೋ..."

"ಇದ್ದಕ್ಕಿದ್ದ ಹಾಗೆ, ಹೀಗೇಕೆ ಮಾತನಾಡ್ತಾ ಇದೀಯ...?"

"ನಾನು ಆ ಹಳ್ಳಿಗೆ ಹೋಗಿ ಸೆಟ್ಲ್ ಆಗೋಣ ಅಂತ ಅಂದ್ಕೊಂಡಿದೀನಿ." ಮಧು ಗೊಳ್ಳನೆ ನಕ್ಕ.

"ನಗೋಕೇನಿದೆ? ನನಗೆ ಇಲ್ಲಿರಕ್ಕೆ ಇಷ್ಟವಿಲ್ಲ, ಅದಕ್ಕೆ ಅಲ್ಲಿಗೇ ಹೋಗಿ ಇರೋಣ ಅಂತ ತೀರ್ಮಾನಿಸಿದೀನಿ."

ಅದನ್ನೆಲ್ಲಾ ಮಾರಿಬಿಟ್ಟಿದೀನಿ ಎಂದು ಹೇಳಲು ಹಿಂಜರಿದ. ಇದ್ದಕ್ಕಿದ್ದಂತೆ ಆ ಹಳ್ಳಿಯ ಮನೆಯ, ಜಮೀನಿನ ಪ್ರಸ್ತಾಪವನ್ನು ಇವಳು ಮಾಡಬಹುದು ಎಂದು ಯೋಚಿಸಿರಲಿಲ್ಲ.

''ಆಗಲಿ ನೋಡೋಣ, ತಕ್ಷಣಕ್ಕೆ ಆಗಲ್ಲ. ಒಂದು ವಾರವಾದರೂ ಟೈಂ ಬೇಕು''

''ಆದಷ್ಟು ಬೇಗ ಸೆಟ್ಲ್ ಮಾಡಿದರೆ ನನಗೆ ಉಪಕಾರವಾಗುತ್ತದೆ'' ಎಂದು ಕೈಮುಗಿದು ಹೊರಬಂದಳು. ಲೇಡಿಸ್ ರೂಮಿನಲ್ಲಿ ಕುಳಿತಿದ್ದವಳಿಗೆ ಇದ್ದಕ್ಕಿದ್ದಂತೆ ತನ್ನ ಮಾಸಿಕದ ದಿನಗಳು ಮುಂದುಹೋಗಿದೆ ಎಂದು ನೆನಪಾಯಿತು. ಎದೆಯ ಬಡಿತ ತೀವ್ರಗೊಂಡಿತು... ಮತ್ತೊಮ್ಮೆ ಲೆಕ್ಕ ಹಾಕಿದರೂ ಅವಳ ಅನಿಸಿಕೆ ಸರಿಯಾಗಿತ್ತು. ಸಂತೋಷ, ಸಂಭ್ರಮ, ಉತ್ಸಾಹ, ಆತಂಕದಿಂದ ಅವಳ ಬಿ.ಪಿ. ಹೆಚ್ಚಾಯಿತು. ಒಂದು ಗಳಿಗೆ ಸುಧಾರಿಸಿಕೊಂಡು ಸೀದಾ ಡಾಕ್ಟರ ಬಳಿಗೆ ಬಂದಳು.

ಡಾಕ್ಟರು ಕೂಲಂಕುಷವಾಗಿ ಮಾತನಾಡಿ, ಚೆಕಪ್ ನಡೆಸಿ, ಅವಳು ಗರ್ಭಿಣಿ ಎಂದು ತಿಳಿಸಿದಾಗ, ತಕ್ಷಣವೇ ಆಟೋ ಹಿಡಿದು ಮನೆಗೆ ಬಂದಳು. ''ವಸುಧಾ... ವಸುಧಾ...'' ಎಂದು ಕರೆಯುತ್ತಾ ಓಡಿ ಬಂದು ಅವಳನ್ನು ತಬ್ಬಿಕೊಂಡಳು.

''ನಿನಗೆ ಒಂದು ಗುಡ್‌ನ್ಯೂಸ್... ನಾನು ಪ್ರೆಗ್ನೆಂಟ್...'' ಕಿವಿಯಲ್ಲಿ ಉಸುರಿದಳು. ವಸುಧಾ ಕುಸಿದು ಕುಳಿತು ತಲೆಯ ಮೇಲೆ ಕೈಹೊತ್ತಳು.

''ನನಗೆ ಗೊತ್ತಿತ್ತು. ಹೀಗೇನಾದರೂ ಆಗುತ್ತೆ ಅಂತ. ಈಗೇನ್ಮಾಡ್ತೀಯ?''

''ಏನು ಮಾಡೋದು? ನಾನು ತಾಯಿಯಾಗೋಕೆ ರೆಡಿಯಾಗಿದೀನಿ...''

''ಅದೆಲ್ಲಾ ನೀನು ಹೇಳುವಷ್ಟು ಸುಲಭವಲ್ಲ...''

''ಲೇಬರ್‌ಪೇನ್ ಸಹಿಸೋಕೆ ಆಗದಿದ್ರೆ, ಸಿಸೇರಿಯನ್ ಮಾಡಿಸ್ಕೊಳ್ತೀನಿ... ಅದಕ್ಕೆ ನೀನ್ಯಾಕೆ ಹೆದರುತ್ತೀಯ...'' ತಮಾಷೆಯಾಗಿ ನಕ್ಕಳು.

''ಸಿಲ್ಲಿ ಹಾಗೆ ಮಾತನಾಡಬೇಡ... ಈ ಮಗು ಯಾರದ್ದು?''

''ನಂದು... ನಂದು... ನಂದು...'' ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು.

''ಈ ಮಗುವಿನ ತಂದೆ ಧ್ರುವ ಅಲ್ಲ ಅಂತ ಎಲ್ಲರಿಗೂ ತಿಳಿಯುತ್ತೆ. ಎಲ್ಲರೂ ಆಡಿಕೊಂಡು ನಗೋಲ್ವಾ? ಯೋಚಿಸು.''

''ಯಾರೋ ನಗ್ತಾರೆ ಅಂತ ನಾನು ಅಬಾರ್ಷನ್ ಮಾಡಿಸಿಕೊಳ್ಳಲ್ಲ... ನಿನಗೇ ಆ ಅನುಭವ ಆಗಿದೆಯಲ್ಲ, ಎಲ್ಲಾ ಮರೆತುಬಿಟ್ಯಾ?''

''ನನ್ನ ವಿಷಯ ಬೇರೆ...''

''ಹೇಗೆ ಬೇರೆ? ನೀನೂ ಹೆಂಗಸು... ನಾನೂ ಹೆಂಗಸು. ಒಬ್ಬ ಹೆಂಗಸಾಗಿ ನೀನು ಹೀಗೆ ಮಾತುಗಳನ್ನಾಡ್ತಿದೀಯಲ್ಲ... ಮನಸ್ಸಾದ್ರೂ ಹೇಗೆ ಬಂತು?''

''ಒಬ್ಬ ಸ್ನೇಹಿತೆಯಾಗಿ ಒಂದು ಸಲಹೆ ಕೊಡ್ತಾ ಇದೀನಿ... ಆದಷ್ಟು ಬೇಗ ಭಾಸ್ಕರನ್ನ ಮದುವೆಯಾಗು.''

''ಭಾಸ್ಕರನ್ನ ನಾನು ಕೇಳಲ್ಲ. ನಮ್ಮ ಸಂಬಂಧಕ್ಕೆ ಮೊದಲು, ನಾವಿಬ್ಬರೂ ಆ ಕಂಡೀಷನ್ ಹಾಕಿಕೊಂಡಿರಲಿಲ್ಲ. ಈಗ ನಾನೊಂದು ಉಪಾಯ ಮಾಡಿದೀನಿ... ನಾನು ಹಳ್ಳಿಯ ಮನೆಗೆ ಹೋಗಿ ಇರ್ತೀನಿ. ಯಾರಿಗೂ ಏನೂ ಗೊತ್ತಾಗಲ್ಲ.''

''ಹಳ್ಳಿಯ ಮನೇನಾ? ಅಲ್ಲಿ ಒಬ್ಬಳೇ ಏನು ಮಾಡ್ತೀಯ..? ಅಲ್ಲಿ ಇರೋದು ಸುಲಭ ಅಂತ ಅಂದುಕೊಂಡಿದೀಯ?''

''ನೀನೂ ಬಾ... ಇಬ್ಬರೂ ಇರೋಣ... ನಾನು ಮಧು ಹತ್ತಿರ ಮಾತನಾಡಿದೀನಿ. ಅದು ಭಾರ್ಗವನಿಗೆ ಸೇರಿದ್ದು... ಅದನ್ನು ನನಗೆ ಕೊಡು ಅಂತ ಹೇಳಿದೀನಿ. ಆಮೇಲೆ ಮತ್ತೆ ಮಾತಾಡ್ತೀನಿ...''

''ಮಧೂಗೆ ಇದನ್ನೆಲ್ಲ ಹೇಳಿದ್ಯಾ?'' ಗಾಬರಿಯಿಂದ ಕಣ್ಣರಳಿಸಿದಳು.

''ಇಲ್ಲ, ಅವನಿಗೇನು ಹೇಳೋದು? ಇನ್ನೊಂದೆರಡು ತಿಂಗಳು ಕಳೆದರೆ ತಾನಾಗಿಯೇ ಗೊತ್ತಾಗುತ್ತದೆ...'' ಎನ್ನುತ್ತಾ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು.

''ಪ್ಲೀಸ್, ಈಗಲೇ ಯಾರಿಗೂ ಹೇಳಬೇಡ. ಏನಾದ್ರೂ ಒಂದು ಉಪಾಯ ಹುಡುಕೋಣ.''

''ನಾನು ಹುಡುಕಿದೀನಿ. ಭಾಸ್ಕರನ್ನ ನನ್ನ ಜೊತೆ ಇಟ್ಟುಕೊಳ್ತೀನಿ''

''ಅವನು ಒಪ್ತಾನಾ? ಮಧು ಸುಮ್ಮನಿರ್ತಾರಾ?...''

''ಭಾಸ್ಕರನ್ನ ಬಾಂಬೆಗೆ ವರ್ಗ ಮಾಡಿದಾರೆ... ಅವನಿಗೆ ಹೋಗಬೇಡ ಅಂತ ಸಾವಿರ ಸಾರಿ ಹೇಳಿದೀನಿ. ಅವನು ಅಲ್ಲಿಗೆ ಹೋಗದಿದ್ದರೆ ಅವನ ಕೆಲಸ ಹೋಗುತ್ತದೆ. ನನ್ನ ಜೊತೆ ಬರಲು ಒಪ್ಪಿಕೊಳ್ತಾನೆ. ನಾವಿಬ್ಬರೂ ಅಲ್ಲೇ ಸೆಟ್ಲ್ ಆಗ್ತೀವಿ.''

''ಅವನ ಫ್ಯಾಮಿಲಿಯೂ ಅಲ್ಲೇ ಬಂದು ಇರ್ತಾರೆ... ಅದನ್ನೆಲ್ಲ ಬಿಟ್ಟು ನಿನಗೋಸ್ಕರ ಬಂದು ಇರೋದಾದ್ರೆ ಹೇಳು. ನಾನು ಮಧು ಹತ್ತಿರ ಮಾತನಾಡ್ತೀನಿ.'' ಅಷ್ಟರಲ್ಲಿ ಮಧು ಫೋನು ಮಾಡಿದ್ದ.

''ಮಾಲಾ ಇದಾಳಾ... ಸ್ವಲ್ಪ ಕರಿ ಅವಳನ್ನ...'' ವಸುಧಾ ಮಾಲಾಳ ಕೈಗೆ ರಿಸೀವರ್‌ನ ಕೊಟ್ಟಳು.

''ಭಾಸ್ಕರ ಹತ್ತುಸಾವಿರ ರೂಪಾಯಿ ಡ್ರಾ ಮಾಡಿದಾನೆ. ನಿನಗೆ ಕೊಟ್ಟಿದೀನಿ ಅಂತ ಹೇಳ್ತಾನೆ. ನಿಜಾನ? ನಿನಗೆ ಯಾಕೆ ಬೇಕಾಗಿತ್ತು...'' ಮಾಲಾ ಚಕಿತಗೊಂಡಳು. ನಂತರ ನೆನಪಾಗಿತ್ತು.

''ನಿನ್ನ ಹೆಂಡತಿಯ ಆಪರೇಷನ್‌ಗೆ ದುಡ್ಡು ಕಟ್ಟಬೇಕಾಗಿತ್ತು. ನಾನೇ ಹೇಳಿ ಡ್ರಾ ಮಾಡಿಸಿದೆ.''

''ಅದನ್ಯಾಕೆ ನನಗೆ ಹೇಳಲಿಲ್ಲ..?''

''ಊರಿಗೆ ಬಂದೋನು ದುಡ್ಡಿಗೆ ಏನು ಮಾಡಿದ್ರಿ ಅಂತ ಕೇಳಬಹುದಾಗಿತ್ತಲ್ಲ. ನೀನು ಕೇಳಲಿಲ್ಲ; ನಾನು ಹೇಳಲಿಲ್ಲ''

''ವಸುಧಾಳ ತಂದೆ ಖರ್ಚು ಮಾಡಿರಬಹುದು ಅಂತ ಅಂದ್ಕೊಂಡೆ.''

''ಅವರ್‍ಯಾಕೆ ಮಾಡ್ತಾರೆ? ಅವಳು ನಿನ್ನ ಹೆಂಡತಿ... ಅದು ನಿನ್ನ ಡ್ಯೂಟಿ''

''ನನ್ನ ಡ್ಯೂಟಿ ಏನೂಂತ ನನಗೇ ಹೇಳಬೇಡ. ಧ್ರುವ ನಿನ್ನ ಗಂಡ... ನಿನಗೇ ಅಂತ ನೂರು ರೂಪಾಯಿ ಕೊಟ್ಟಿದಾನಾ?''

''ಅವನು ಕೊಟ್ಟರೂ ನಾನು ಇಸ್ಕೊಳಲ್ಲ..''

''ನಿನಗೆ ಅಹಂಕಾರ...''

''ನಿನಗೆ ದುರಹಂಕಾರ...'' ವಸುಧಾ ಫೋನನ್ನು ಕಿತ್ತುಕೊಂಡಳು. ''ನಿಮ್ಮಿಬ್ಬರಿಗೂ ಬೇರೆ ಕೆಲಸ ಇಲ್ವಾ? ಫೋನಿನಲ್ಲೂ ಜಗಳ ಆಡ್ತೀರಲ್ಲ.''

''ನೀನು ಸುಮ್ಮನಿರು. ಅವಳು ಭಾಸ್ಕರನ ಜೊತೆ ವಿಪರೀತ ಸಲುಗೆಯಿಂದ ಇದಾಳೆ. ಅದನ್ನು ಕಟ್ ಮಾಡಬೇಕು...''

''ಅದನ್ನೆಲ್ಲಾ ನಿಧಾನವಾಗಿ ಮಾತನಾಡೋಣ'' ಎನ್ನುತ್ತಾ ಲೈನ್ ಕಟ್ ಮಾಡಿದಳು.

''ನಿನ್ನ ಅಣ್ಣನಿಗೆ ನಿಮ್ಮಿಬ್ಬರ ಮೇಲೆ ಅನುಮಾನ ಬಂದಿದೆ ಅಂತ ಕಾಣುತ್ತೆ. ವಾಚ್‌ಮನ್ ಏನು ಹೇಳಿದಾನೋ... ಆದಷ್ಟು ಬೇಗ ಏನಾದರೂ ಡಿಸೈಡ್ ಮಾಡು.''

''ಭಾಸ್ಕರನ ಹತ್ತಿರ ಮಾತನಾಡ್ತೀನಿ. ಅವನು ನನ್ನ ಜೊತೆ ಹಳ್ಳಿಯಲ್ಲಿ ಇರಲು ಒಪ್ಪಿಕೊಳ್ಳೋದಾದ್ರೆ ಅವನು ಕೆಲಸಕ್ಕೆ ರಿಸೈನ್ ಮಾಡ್ತಾನೆ.''

''ಜೀವನಕ್ಕೆ ಏನು ಮಾಡ್ತೀರಿ?''

''ಅದನ್ನೆಲ್ಲ ಭಾಸ್ಕರ ನೋಡಿಕೊಳ್ತಾನೆ. ತೋಟ, ಗದ್ದೆ ಇದೆಯಲ್ಲ...'' ವಸುಧಾ ನಕ್ಕಳು.

''ಅದಕ್ಕೆಲ್ಲ ಆ ಫೀಲ್ಡ್‌ನಲ್ಲಿ ಅನುಭವವಿರಬೇಕು. ಭಾಸ್ಕರನಿಗೇನು ಗೊತ್ತು?''

''ಹೌದಲ್ವಾ!... ನನಗೆ ಆ ಆಲೋಚನೆ ಬರಲೇ ಇಲ್ಲ...''

''ನಿನಗೆ ವಿವೇಕ, ವಿವೇಚನೆ ಎರಡೂ ಇಲ್ಲ, ದುಡುಕಿ ನಿರ್ಧಾರ ತೆಗೆದುಕೊಳ್ತಿದೀಯ. ಈಗ ನನಗೆ ಬೇರೆ ಒಂದು ಉಪಾಯ ಹೊಳೆದಿದೆ. ಅದನ್ನು ನೀನು ಒಪ್ಪಿಕೊಳ್ಳೋದಾದ್ರೆ ಹೇಳ್ತೀನಿ...''

''ಕಂಡೀಷನ್ ಹಾಕಬೇಡ. ಹೇಳು ನೋಡೋಣ.''

''ಭಾಸ್ಕರ ಹೇಗೂ ಬಾಂಬೆಗೆ ಹೋಗ್ತಾನೆ. ನೀನು ಒಪ್ಪೋದಾದ್ರೆ ನೀನು ಬಾಂಬೆಗೆ ಹೋಗಬಹುದು.''

''ಧ್ರುವನ ಮನೇಲಿರು ಅಂತ ಮಾತ್ರ ಹೇಳಬೇಡ.''

''ಅದುಬಿಟ್ಟು ಬೇರೆ ಮಾರ್ಗವೇ ಇಲ್ಲ. ಆಗ ಎಲ್ಲಾ ಸರಿ ಹೋಗುತ್ತದೆ. ಅಲ್ಲಿ ನೀನೂ ಕೆಲಸಕ್ಕೆ ಸೇರಿಕೊಳ್ಳಬಹುದು. ಭಾಸ್ಕರನೂ ನಿನ್ನೊಂದಿಗೆ ಇರುತ್ತಾನೆ. ಈ ಹುಟ್ಟುವ ಮಗುವಿಗೆ ತಂದೆಯ ಹೆಸರೂ ಸಿಗುತ್ತದೆ. ಸುಮಿತ್ರಾದೇವಿ ಮೊಮ್ಮಗುವನ್ನು ಒಪ್ಪಿಕೊಳ್ತಾಳೆ... ಯಾರಿಗೂ ಯಾವ ಅನುಮಾನವೂ ಬರುವುದಿಲ್ಲ.''

''ಧ್ರುವ ಒಪ್ಪಿಕೊಳ್ತಾನಾ? ನಾನು ರಿಕ್ವೆಸ್ಟ್ ಮಾಡಿಕೊಳ್ಳಲ್ಲ.''

''ನೀನು ಹೋಗಿ ಅಲ್ಲಿ ಇರು. ಆಮೇಲೆ ನೀನು ಪ್ರೆಗ್ನೆಂಟ್ ಅಂತ ಹೇಳು. ಅದನ್ನು ನಿರಾಕರಿಸುವ ಧೈರ್ಯ ಅವನಿಗಿರುವುದಿಲ್ಲ.''

''ನಿಜ ಏನೂಂತ ಅವನಿಗೆ ಗೊತ್ತಿಲ್ವಾ?'' ಕುಹಕವಾಗಿ ನಕ್ಕಳು.

''ನಿಮ್ಮಿಬ್ಬರಲ್ಲಿಯಾವ ಸಂಬಂಧವಿರಲಿಲ್ಲ ಅಂತ ಡಂಗೂರ ಹೊಡೆದುಕೊಂಡು ಬರೋಕೆ ಆಗುತ್ತಾ? ಅಥವಾ ಯಾರಿಗೇ ಹೇಳಿದ್ರೂ ಅವರು ನಂಬೊಲ್ಲ...''

''ನನಗೆ ಯಾಕೋ ಈ ಪ್ಲಾನ್ ಇಷ್ಟವಾಗುತ್ತಿಲ್ಲ.''

''ಧ್ರುವ ನಿನ್ನ ಅಣ್ಣನಿಂದ ಸಿಕ್ಕಾಪಟ್ಟೆ ಖರ್ಚು ಮಾಡಿಸಿದ್ದಾನೆ. ಮದುವೆ ಸಿಂಪಲ್ ಆಗಿ ಮಾಡಿದ್ರೂ ಅವನ ತಾಯಿ ವರದಕ್ಷಿಣೆಯ ರೂಪದಲ್ಲಿ ಐದು ಲಕ್ಷ ರೂಪಾಯಿಗಳನ್ನು ಪಡೆದಿದಾಳಂತೆ. ಆಮೇಲೆ ಪಾರ್ಟಿ ಅದೂ ಇದು ಅಂತ ಎಲ್ಲ ಖರ್ಚನ್ನೂ ಮಧೂನೇ ಮಾಡಿದಾರೆ. ಆಸ್ಪತ್ರೆಯ ಖರ್ಚನ್ನೂ ಸಹ ಮಧೂನೇ ಕೊಟ್ಟಿದಾರೆ.''

''ಮಧೂಗೆ ಬುದ್ಧಿಯಿಲ್ಲ. ಎಲ್ಲಾದನ್ನೂ ವಾಪಸ್ಸು ಕೇಳು ಅಂತ ಹೇಳು. ಅವನೂ ಎಂಥಾ ಕಂಜೂಸ್... ಅವನ ಹತ್ತಿರ ಹಣ ಇಲ್ವಾ?''

''ಇದೆಯೋ ಇಲ್ಲವೋ ನಮಗೆ ಹೇಗೆ ಗೊತ್ತಾಗುತ್ತೆ? ಎಲ್ಲಾ ಆ ಪ್ರತಾಪನ ಕೈಲಿದೆ. ಈಗ ನಮ್ಮ ಹಣ, ಬಡ್ಡಿ ಸಮೇತ ಬರಬೇಕಾದರೆ, ನೀನೇ ಸಹಾಯ ಮಾಡಬೇಕು.''

''ನಾನು ಕೇಳಿದ್ರೆ ಕೊಟ್ಟುಬಿಡ್ತಾನಾ? ನಿನ್ನ ಗಂಡನೇ ವಸೂಲು ಮಾಡಲಿ.''

''ಕೊಡಬಹುದು. ಟ್ರೈಮಾಡಿ ನೋಡು... ನಾನು ಪ್ರೆಗ್ನೆಂಟ್ ಅಂತ ಹೇಳು.''

''ಥೂ ಅವನಿಗೇಕೆ ಹೇಳಲಿ ? ಇದು ಅವನ ಮಗುವಲ್ಲ.''

''ಮತ್ತೆ ಮತ್ತೆ ಅದೇ ಹೇಳ್ತೀಯಲ್ಲ. ನಿನ್ನ ಅನುಕೂಲಕ್ಕೆ ನಾನು ಹೇಳುತ್ತಿರುವುದು. ಒಂದು ವೇಳೆ ಅವನು ಆಮೇಲೆ ಬಂದು ಮಗುವನ್ನು ಕೇಳಿದರೆ ಏನು ಮಾಡ್ತೀಯ? ನೀನು ಇನ್ನೂ ಅವನ ಪತ್ನಿಯಾಗಿಯೇ ಇದೀಯ.''

''ನೀನೂ ಅಷ್ಟೇ ಅದೇ ಮಾತನ್ನು ಪದೇ ಪದೇ ಹೇಳ್ತೀಯಲ್ಲ. ಅವನದಲ್ಲದ ಮಗುವನ್ನು ಕೇಳುವ ಹಕ್ಕು ಅವನಿಗಿಲ್ಲ. ಬೇಕಾದರೆ ಬೇರೆ ಮದುವೆ ಮಾಡಿಕೊಳ್ಳಲಿ. ಒಂದಲ್ಲದಿದ್ದರೆ ನಾಲ್ಕು ಮಕ್ಕಳನ್ನು ಪಡೆಯಲಿ. ಇದು ನನ್ನ ಮಗು. ನಾನು ಯಾರಿಗೂ

ಕೊಡಲ್ಲ. ಏನು ಬೇಕಾದರೂ ಮಾಡಲಿ'' ಎನ್ನುತ್ತಾ ಹ್ಯಾಂಡ್‌ಬ್ಯಾಗನ್ನೆತ್ತಿಕೊಂಡಳು. ಒಳಗಿದ್ದ ಬಿಳಿ ಕವರು ಕಣ್ಣಿಗೆ ಬಿತ್ತು. ಭಾಸ್ಕರನಿಗೆ ವಾಚ್‌ಮನ್ ಕೊಟ್ಟದ್ದು ನೆನಪಿಗೆ ಬಂತು. ಗೆಸ್ಟ್‌ಹೌಸಿನಲ್ಲಿ ನಾನೇನು ಬಿಟ್ಟಿದ್ದೆ ಎಂದುಕೊಳ್ಳುತ್ತಾ ಕವರನ್ನು ಎತ್ತಿಕೊಂಡು ಒಳಗಿನ ಪೇಪರ್ರುಗಳನ್ನು ತೆಗೆದಳು.

''ಮೆಡಿಕಲ್ ರಿಪೋರ್ಟ್ಸ್‌ಗಳು, ರಶೀತಿಗಳು, ಪ್ರಿಸ್ಕಿಪ್ಶನ್ಸ್‌ಗಳು, ಎಲ್ಲಾ ಧ್ರುವನ ಹೆಸರಿನಲ್ಲಿವೆ. ಇದೆಲ್ಲಾ ಏನೂಂತ ನೋಡು'' ಎನ್ನುತ್ತಾ ವಸುಧಾಳಿಗೆ ಕೊಟ್ಟಳು. ಧ್ರುವ ನರ್ಸಿಂಗ್ ಹೋಂನಲ್ಲಿದ್ದಾಗ ಮಾಡಿದ್ದ ಟೆಸ್ಟ್‌ಗಳ ರಿಪೋರ್ಟ್‌ಗಳು. ನೋಡುತ್ತಾ ನೋಡುತ್ತಾ ವಸುಧಾ ಮಾಲಾಳ ಕೈ ಹಿಡಿದಳು. ''ಇದು ನೋಡು... ಬ್ಲಡ್ ರಿಪೋರ್ಟ್. ಎಚ್.ಐ.ವಿ. ಪಾಸಿಟೀವ್ ಅಂತಿದೆ... ಅಂದ್ರೇ... ಎಚ್.ಐ.ವಿ. ವೈರಸ್ ಅವನ ಬ್ಲಡ್‌ನಲ್ಲಿದೆ.... ಧ್ರುವನಿಗೆ ಏಡ್ಸ್...!'' ವಸುಧಾ ಭಯದಿಂದ ಬಿಳುಪಾಗಿದ್ದಳು.

''ನೋಡಿದ್ಯಾ ಎಂಥಾ ಮೋಸಗಾರ ಅವನು... ಹೀಗೇ ಏನೋ ರಹಸ್ಯವಿದೆ ಅಂತ ನನಗೆ ಅನುಮಾನವಿತ್ತು'' ವಸುಧಾ ಬೇರೆ ಏನನ್ನೋ ಯೋಚಿಸುತ್ತಿದ್ದಳು.

''ಸ್ವಲ್ಪ ತಡಿ ಮಾಲಾ... ಏನೇನೋ ಬಡಬಡಿಸಬೇಡ. ಇದು ಮುಖ್ಯವಾದ ರಿಪೋರ್ಟ್... ಇದನ್ನು ಗೆಸ್ಟ್‌ಹೌಸಿನಲ್ಲಿ ಮರೆತುಹೋಗಿದಾರೆ ಅಂತಂದ್ರೆ ಅನುಮಾನ ಬರುತ್ತೆ. ಯಾವ ಡಾಕ್ಟರು ನೋಡು...''

''ಡಾ|| ಶ್ರೀನಿವಾಸ್, ಶ್ರೀ ನರ್ಸಿಂಗ್ ಹೋಂ ಅಂತಿದೆ...''

''ನಾವು ಅಲ್ಲಿಗೆ ಹೋಗಿ ನಿಜ ಏನೂಂತ ತಿಳಿದುಕೊಂಡ ಬರೋಣ. ಆಮೇಲೆ ಮುಂದೆ ಏನೂಂತ ಚಿಂತಿಸೋಣ...''

''ನಾವು ಕೇಳಿದ್ರೆ ಹೇಳಿ ಬಿಡ್ತಾರಾ?''

''ನಾನು ಧ್ರುವನ ಮಿಸೆಸ್ ಅಂತ ಹೇಳ್ಕೋ ಖಂಡಿತಾ ಹೇಳ್ತಾರೆ... ಬೇಕಾದರೆ ಪ್ರೂಫ್‌ಗೆ ಮದುವೆ ಫೋಟೋ ತಗೊಂಡು ಹೋಗೋಣ. ಅಥವಾ ಮದುವೆ ರಿಜಿಸ್ಟರ್ ಆಗಿದೆಯಲ್ಲ, ಆ ಕಾಪಿ ತಗೊಂಡು ಹೋಗೋಣ...''

''ಹೋಗಲಿ ಬಿಡೇ, ಅವನಿಗೆ ಏನಾಗಿದ್ರೆ ನನಗೇನು?...''

''ಇಲ್ಲ, ಅವನ ವೀಕ್‌ನೆಸ್‌ನ್ನ ತಿಳಿದುಕೊಂಡ್ರೆ ಅವನ ಗ್ರಿಪ್ ನಮ್ಮ ಕೈಲಿ ಇರುತ್ತೆ... ನಾವು ಸಮಯ ಬಂದಾಗ ಅದನ್ನು ಉಪಯೋಗಿಸಿಕೊಳ್ಳಬಹುದು ಅಲ್ವಾ?''

''ಏನೋಮ್ಮ ನಿನ್ನ ಆಲೋಚನೆಗಳೇ ನನಗೆ ಹಿಡಿಸಲ್ಲ, ಮಧೂನ ಕರೆದುಕೊಂಡು ಹೋಗು. ನನಗೆ ಆಸಕ್ತಿಯಿಲ್ಲ.''

''ಬೇಡ, ಮಧೂಗೆ ಈಗಲೇ ಹೇಳುವುದು ಬೇಡ. ಮೊದಲು ನಾವುಗಳು ಮಾತಾಡಿಕೊಂಡು ಬರೋಣ'' ಎಂದು ಹೇಳಿ, ಡಾಕ್ಟರಿಗೆ ಫೋನು ಮಾಡಿದಳು.

ಅವರು ಕೊಟ್ಟ ಸಮಯಕ್ಕೆ ಸರಿಯಾಗಿ ಇಬ್ಬರೂ ಡಾ|| ಶ್ರೀನಿವಾಸ್‌ರವರನ್ನು

ಭೇಟಿಯಾದರು. ರಿಪೋರ್ಟ್‌ಗಳನ್ನು ತೋರಿಸುತ್ತಾ ವಸುಧಾ ಮಾಲಾಳ ಕಡೆ ಕೈಮಾಡಿದಳು. ''ಇವಳು ಮಿಸೆಸ್ ಧ್ರುವ... ಆದರೆ ನಮಗೆ ಗೊತ್ತಾದದ್ದು ಈಗಲೇ...'' ಎಂದಳು.

''ಯಾಕೆ ? ನಾನು ಇವರಿಗೂ ಬ್ಲಡ್ ಟೆಸ್ಟ್ ಮಾಡಿಸುವಂತೆ ಹೇಳಿದ್ದೆನಲ್ಲ...''

''ಇಲ್ಲ, ನಮಗೆ ಯಾವ ವಿಷಯವನ್ನೂ ತಿಳಿಸಿರಲಿಲ್ಲ. ಇಲ್ಲಿ ಎಚ್.ಐ.ವಿ. ಪಾಸಿಟೀವ್ ಅಂತ ಬರೆದಿದೆ. ಇದು ನಿಜಾನಾ?'' ವಸುಧಾ ಮುಜುಗರದಿಂದ ಕೇಳಿದಳು.

''ಹೂಂ, ನೂರಕ್ಕೆ ನೂರು ನಿಜ... ಏಡ್ಸ್ ರೋಗದ ಮುನ್ಸೂಚನೆ... ನೀವೂ ಇದರ ಬಗ್ಗೆ ಆರ್ಟಿಕಲ್ಸ್ ಓದಿರಬೇಕು ಅಲ್ಲವೆ?''

''ಹೂಂ, ಸ್ವಲ್ಪ ಸ್ವಲ್ಪ ಗೊತ್ತು. ಆದರೂ...''

''ಹಾಗಾದ್ರೆ ಆದಷ್ಟು ಬೇಗ ಬ್ಲಡ್ ಟೆಸ್ಟ್ ಮಾಡಿಸಿಕೊಳ್ಳುವಂತೆ ಸಲಹೆ ಕೊಡ್ತೀನಿ.''

''ಆದರೆ ಒಂದು ವಿಷಯ... ಮದುವೆಯಾಗಿ ಆರು ತಿಂಗಳಾಗಿದೆ ಅಷ್ಟೇ. ಇವರಿಬ್ಬರ ಮಧ್ಯೆ ಯಾವ ದೈಹಿಕ ಸಂಬಂಧವೂ ನಡೆದಿಲ್ಲ...''

''ಅಂದ್ರೆ ಯೂ ಮೀನ್ ಸೆಕ್ಸ್ ರಿಲೇಷನ್‌ಷಿಪ್... ಯಾಕೆ?''

''ಇವಳಿಗೆ ಇದು ಇಷ್ಟವಿಲ್ಲದ ಮದುವೆ. ಅವನನ್ನು ಅವಾಯ್ಡ್ ಮಾಡಿದಾಳೆ...''

''ಓ... ಐ.ಸೀ.. ಇದಕ್ಕೆ ಮಿ॥ ಧ್ರುವ ಒಪ್ಪಿಕೊಂಡಿದ್ದರೇ...?''

''ಇಲ್ಲ, ಆದರೂ ಅದೇ ಕಾರಣದಿಂದ ಇಬ್ಬರೂ ದೂರ ದೂರ ಇದಾರೆ...''

''ಒಳ್ಳೆಯದೇ ಬಿಡಿ. ಡೈವೋರ್ಸು ತಗೊಳ್ಳಿ... ಅವರ ಹತ್ತಿರ ಮಾತನಾಡಿ. ಅದೇ ಸರಿ ಅಂತ ನನಗನ್ನಿಸುತ್ತೆ.'' ಉತ್ತಮ ಸಲಹೆ ನೀಡಿದರು.

''ಥ್ಯಾಂಕ್ ಯೂ ಡಾಕ್ಟರ್'' ಎಂದು ಕೈಮುಗಿದು, ರಿಪೋರ್ಟ್ಸ್‌ಗಳನ್ನೆಲ್ಲಾ ಜಾಗರೂಕತೆಯಿಂದ ತೆಗೆದುಕೊಂಡು ಮನೆಗೆ ಬಂದರು.

''ಇದನ್ನೆಲ್ಲ ಕೇಳಿದ್ದರಿಂದ ಏನು ಉಪಯೋಗವಾಯ್ತು? ಅವನು ಏಡ್ಸ್ ಪೇಶೆಂಟ್ ಅಂತ ಕನ್‌ಫರ್ಮ್ ಆಯ್ತು ಅಷ್ಟೇ...'' ಮಾಲಾ ಮೂತಿ ಸೊಟ್ಟ ಮಾಡಿ ನುಡಿದಳು.

''ನಿನಗೆ ಜ್ಞಾಪಕವಿದೆಯಾ ಮಾಲಾ... ಹೋಟೆಲ್ ಮಧುಚಂದ್ರದಲ್ಲಿ ಗ್ರೀಟಿಂಗ್ ಮೇಲೆ ಏನು ಬರೆದಿತ್ತು ಅಂತ... ಶುಭರಾತ್ರಿ, ಏಡ್ಸ್ ಬಗ್ಗೆ ಎಚ್ಚರದಿಂದಿರಿ ಅಂತ.''

''ನಾನಂತೂ ಎಚ್ಚರವಹಿಸಿದೆ. ನಿನ್ನ ಪಾಡೇನು?''

''ನಾವೂ ಎಚ್ಚರ ವಹಿಸಬೇಕಾಗಿತ್ತು. ನಿಮ್ಮ ಅಣ್ಣನಿಗೆ ಏನೋ ಆತುರ.. ಇರಲಿ, ನನ್ನ ಬ್ಲಡ್ ರಿಪೋರ್ಟ್ ಸರಿಯಾಗಿದೆ. ಡಾಕ್ಟರು ಏನೂ ಹೇಳಲಿಲ್ಲ. ಆದರೆ ಯಾಕೋ ಏನೋ ನಿಮ್ಮ ಅಣ್ಣ, ಮಗು ಈಗಲೇ ಬೇಡ ಅಂದಿದ್ರು. ನಾನು ಅದನ್ನು ಕಳೆದುಕೊಂಡೆ. ಯಾಕೋ ಎಲ್ಲಾ ವಿಚಿತ್ರ ಅನ್ನಿಸ್ತಿದೆ ಅಲ್ವಾ?''

''ವಿಚಿತ್ರ ಜನರ ಜೊತೆ ನಡೆಯುವುದೆಲ್ಲಾ ವಿಚಿತ್ರವೇ...''

''ಇನ್ನೂ ಏನೇನು ವಿಚಿತ್ರಗಳು ನಡೆಯುತ್ತವೋ... ನಡೀ ಈಗಲೇ ಅಸ್ಟ್ರಾಲಜರ್ ಹತ್ತಿರ ಹೋಗೋಣ...'' ಎಂದು ಮಾಲಾಳಿಗೆ ಇಷ್ಟವಿಲ್ಲದಿದ್ದರೂ ಎಳೆದುಕೊಂಡು ಹೋದಳು.

ಹುಟ್ಟಿದ ಸ್ಥಳ, ದಿನಾಂಕ ಹಾಗೂ ಸಮಯವನ್ನು ಗುರುತು ಹಾಕಿಕೊಂಡು ಚಕಚಕನೆ ಕಂಪ್ಯೂಟರ್‌ನಲ್ಲಿ ವಿವರಗಳನ್ನು ಪಡೆದು ಹೇಳುವ ಪಂಡಿತರು ಅವರು. ಭೂತಕಾಲದ ಘಟನೆಗಳನ್ನು ತಿಳಿಸಿ, ವರ್ತಮಾನದ ವಿಷಯಗಳನ್ನು ಹೇಳಿ, ಭವಿಷ್ಯದಲ್ಲಿ ನಡೆಯುವ ವಿದ್ಯಮಾನಗಳ ಬಗ್ಗೆ ಹೇಳುವವರು. ಮಾಲಾಳ ಭೂತ, ವರ್ತಮಾನದ ವಿವರಗಳನ್ನು ಹೇಳಿ, ಭವಿಷ್ಯವನ್ನು ಹೇಳಲು ಪ್ರಾರಂಭಿಸಿದರು.

''ಸದ್ಯದಲ್ಲೇ ನೀವು ಪತಿಪತ್ನಿಯರು ಒಂದಾಗುತ್ತೀರಿ. ಆದರೆ ನಿಮಗೆ ಹುಟ್ಟಲಿರುವ ಮಗುವಿಗೆ ಅದರ ತಂದೆಯಿಂದಲೇ ತೊಂದರೆಯಿದೆ. ನೀವು ಯಾರನ್ನು ನಂಬಿದೀರೋ ಅವರು ನಿಮ್ಮಿಂದ ದೂರವಾಗುವ ಸಾಧ್ಯತೆಗಳಿವೆ. ನಿಮ್ಮ ಜೀವಕ್ಕೂ ಅಪಾಯವಿದೆ ಆದರೆ ಪ್ರಾಣಾಪಾಯವಿಲ್ಲ'' ಮಾಲಾ ವಸುಧಾಳ ಮೊಣಕೈ ತಿವಿದಳು. ''ನಡೀ ಹೋಗೋಣ'' ಎಂದಳು ಪಿಸುದನಿಯಲ್ಲಿ.

''ತಡಿ, ನನ್ನ ಭವಿಷ್ಯ ಕೇಳ್ತೀನಿ'' ಎಂದು ತನ್ನ ಬಗ್ಗೆ ಹೇಳಿದಳು. ಈಗಾಗಲೇ ಗರ್ಭದಲ್ಲೇ ಮಗುವನ್ನು ಕಳೆದುಕೊಂಡಿರುವ ನಿಮಗೆ ಮುಂದೆ ಮಕ್ಕಳಾಗುವ ಸಂಭವವಿಲ್ಲ. ಹತ್ತಿರದವರ ಒಂದು ಮಗುವನ್ನು ದತ್ತು ತೆಗೆದುಕೊಂಡು ಸಾಕುತ್ತೀರಿ. ವಸುಧಾಳಿಗೂ ಉತ್ಸಾಹ ಉಳಿಯಲಿಲ್ಲ. ಇಬ್ಬರೂ ಕೈ ಮುಗಿದು ಎದ್ದರು.

''ಏನೇ ಏನೊಂದನ್ನೂ ಸರಿಯಾಗಿ ಹೇಳಲಿಲ್ಲವಲ್ಲ. ನನ್ನ ಪತಿ, ನನ್ನ ಮಗುವಿನ ತಂದೆ ಇಬ್ಬರೂ ಒಬ್ಬರೇ ಅಲ್ಲ ಅಂತ ಅವರಿಗೆ ಗೊತ್ತಾಗಲಿಲ್ಲವಾ?''

''ಆ ಅನುಮಾನ ಬರುವುದಕ್ಕೆ ಸಾಧ್ಯವಿಲ್ಲ. ಆದರೆ ಮಗುವಿನ ತಂದೆಯಿಂದಲೇ ತೊಂದರೆ ಎಂದರೆ ಭಾಸ್ಕರನಿಂದಲೋ, ಧ್ರುವನಿಂದಲೋ ಗೊತ್ತಾಗಲಿಲ್ಲವಲ್ಲ.''

''ಧ್ರುವ ತಂದೆ ಅಲ್ಲ; ಆದರೆ ಭಾಸ್ಕರ ತನ್ನ ಮಗುವಿಗೇ ತೊಂದರೆ ಮಾಡ್ತಾನೆ ಅಂತಂದ್ರೆ ನಂಬೋಕೆ ಆಗಲ್ಲ.''

''ನೀನು ಪ್ರೆಗ್ನೆಂಟ್ ಅಂತ ಅವನಿಗೆ ಗೊತ್ತಾ?''

''ಇಲ್ಲ ನಾನು ಇನ್ನೂ ಹೇಳಿಲ್ಲ. ಹೇಳಕ್ಕೆ ಸಮಯವೇ ಒದಗಿಲ್ಲ.''

''ಹೇಳಿದರೆ ಅವನು ಖಂಡಿತಾ ಬಲವಂತವಾಗಿ ಅಬಾರ್ಷನ್ ಮಾಡಿಸ್ತಾನೆ. ಯಾವ ವ್ಯಕ್ತಿಗೆ ತಾನೇ ತನ್ನ ಪತ್ನಿಯಲ್ಲದವಳಿಗೆ ಹುಟ್ಟುವ ಮಗುವಿಗೆ ತಂದೆಯ ಹೆಸರನ್ನು ಕೊಡಲು ರೆಡಿಯಾಗಿರುತ್ತಾನೆ? ಜವಾಬ್ದಾರಿಯೇ ಬೇಡ ಗಂಡಸಿಗೆ.''

''ಭಾಸ್ಕರ ಅಂತಹವರಲ್ಲ. ಒಳ್ಳೆಯವರು ಎಲ್ಲರೂ ಮಧು ತರಹ ಇರೋಲ್ಲ.''

''ಅವರು ಒಳ್ಳೆಯವರು ಅಂತ ಹೇಗೆ ಹೇಳ್ತೀಯ? ಸ್ವಂತ ಹೆಂಡತಿಗೆ ದ್ರೋಹ ಮಾಡಿ, ಪರಸ್ತ್ರೀ ಸಂಗ ಮಾಡೋರನ್ನ ಒಳ್ಳೆಯವರು ಅನ್ನೋಕಾಗುತ್ತಾ?''

''ಹಾಗೆ ನೋಡಿದರೆ ನಾನೂ ಒಳ್ಳೆಯವಳಲ್ಲ. ನನ್ನಂಥೋಳಿಗೆ ಅವರು ಸರಿಯಾದ ಜೋಡಿ ಅಲ್ವಾ?'' ವಸುಧಾಳಿಗೆ ಬೆನ್ನು ಮಾಡಿ ನಿಂತಳು.

''ಭಾರ್ಗವ ಸಕಾಲದಲ್ಲಿ ಕೈಕೊಟ್ಟು ಹೋದ. ಅವನು ಒಳ್ಳೆಯವನಾ? ನಾನೂ ಅವನಿಗೆ ಮೋಸ ಮಾಡಿದೆ. ಅದಕ್ಕೆ ತಕ್ಕ ಶಾಸ್ತಿಯಾಯಿತು...''

''ಹಾಗೇ ಎಲ್ಲರೂ. ಅವರವರ ಅನುಕೂಲಕ್ಕೆ ತಕ್ಕಂತೆ ಬದಲಾಗ್ತಾರೆ. ಈಗ ನೀನೇ ಡಿಸೈಡ್ ಮಾಡು. ನಿನಗೆ ಭಾಸ್ಕರ ಬೇಕೋ, ನಿನ್ನ ಮಗು ಬೇಕೋ...?''

''ನನಗೆ ಇಬ್ಬರೂ ಬೇಕೂ...'' ಮಾಲಾ ಕೈಕಟ್ಟಿ ನುಡಿದಳು.

''ಹಾಗೆ ಆಗುತ್ತಾ ನೀನೇ ಯೋಚಿಸು. ಅವನು ತನ್ನ ಮನೆಯವರನ್ನು ಬಿಟ್ಟು ಪೂರ್ಣವಾಗಿ ನಿನ್ನವನಾಗ್ತಾನಾ? ಅದೇ, ಮಗುವಾದರೆ, ನಿನ್ನ ಬಸಿರಲ್ಲಿ ಬೆಳೆದು, ನಿನ್ನ ಎದೆ ಹಾಲು ಕುಡಿದು, ಮುಂದೆ ಬಾಯ್ತುಂಬಾ ಅಮ್ಮಾ ಅನ್ನುತ್ತೆ. ನಾನು, ನನ್ನ ಮಗುವನ್ನು ಕಳೆದುಕೊಂಡು ಆ ನೋವನ್ನು ಅನುಭವಿಸಿದ್ದೇನೆ. ನೀನೂ ಹಾಗೆ ನೋವನ್ನನುಭವಿಸ ಬೇಡ... ನಿನ್ನ ಮಗುವಿನ ರಕ್ಷಣೆ ನಿನ್ನ ಕೈಲಿದೆ. ಒಂದು ವೇಳೆ, ನಿನಗೆ ಭಾಸ್ಕರನೇ ಹೆಚ್ಚು ಅಂತ ಅನ್ನಿಸಿದರೆ, ಹೆರಿಗೆ ಆಗುವವರೆಗೂ ಅವನಿಂದ ದೂರ ಇರು. ಆಮೇಲೆ ನಾನು ನಿನ್ನ ಮಗುವನ್ನು ದತ್ತು ತೆಗೆದುಕೊಳ್ಳುತ್ತೇನೆ...''

''ಪಂಡಿತರ ಭವಿಷ್ಯವನ್ನು ನಿಜ ಮಾಡೋ ಆಸೇನಾ? ಭಾಸ್ಕರನ್ನ ನೀನು ನಂಬದಿರಬಹುದು. ನಾನು ನಂಬ್ತೀನಿ. ನಾನು ಅವನ ಹತ್ತಿರ ಮಾತನಾಡ್ತೀನಿ.''

''ಬೇಡ ಮಾಲಾ, ಸದ್ಯಕ್ಕೆ ಯಾರೊಡನೆಯೂ ಏನನ್ನೂ ಆಡುವುದು ಬೇಡ. ಸ್ವಲ್ಪ ಕಾಲ ಕಾಯೋಣ. ಯಾರಾರ ಮನಸ್ಸಲ್ಲಿ ಏನಿದೆಯೋ ಅದು ಹೊರಬರಬಹುದು.'' ಮಾಲಾ ಸುಮ್ಮನಾದಳು. ಬಸಿರಲ್ಲಿ ಬೆಳೆಯುತ್ತಿರುವ ಮಗುವಿನ ಸುಖದ ಬಗ್ಗೆ ಚಿಂತಿಸಿದಳು.

* * * *

ಭಾಸ್ಕರ ಬಾಂಬೆಗೆ ಹೊರಡುವ ಮೊದಲು ಇಲ್ಲಿಯ ಅನೇಕ ಕೆಲಸಗಳನ್ನು ಮುಗಿಸಬೇಕಾಗಿತ್ತು. ಅವನು ಬಿಜ಼ಿಯಾಗಿದ್ದ. ಮಧ್ಯೆ ಒಂದೆರಡು ಬಾರಿ ನಂಜನ ಗೂಡಿಗೂ ಹೋಗಿಬಂದಿದ್ದ. ಮಾಲಾ, ಭಾಸ್ಕರ ಆಗೊಮ್ಮೆ ಈಗೊಮ್ಮೆ ಅವನ ಮನೆಯಲ್ಲಿ ಭೇಟಿಯಾದರೂ, ಭಾಸ್ಕರ ಏನನ್ನೋ ಚಿಂತಿಸುತ್ತಿರುವನು ಅಂತೆನಿಸುತ್ತಿತ್ತು.

''ಭಾಸ್ಕರ್... ಈ ನಡುವೆ ತುಂಬಾ ಬದಲಾಗ್ತಾ ಇದೀರಿ ಅಂತನಿಸ್ತಾ ಇದೆ'' ಎಂದಿದ್ದಳು ಅವನ ಮೇಲೆ ಅನುಮಾನದ ದೃಷ್ಟಿಯನ್ನು ಬೀರಿ.

"ಏನಿಲ್ಲ, ನಾನು ಅದೇ ಹಳೆಯ ಭಾಸ್ಕರ್... ಆದರೆ ನನ್ನ ಜೀವನದ ಗತಿಗಳು ಬದಲಾಗ್ತಾ ಇದೆ. ಎಲ್ಲಿಂದ ಎಲ್ಲಿಗೋ ಹೋಗ್ತಾ ಇದೆ."

"ನಾನಿಲ್ವಾ ನಿಮ್ಮ ಜೊತೆಗೆ... ನಾನೆಲ್ಲಿ ಬದಲಾಗಿದೀನಿ?"

"ನಾನು ನೀವು ಇಬ್ಬರೇ ಇದ್ದಿದ್ದರೆ ಆ ಮಾತು ಬೇರೆಯಾಗಿತ್ತು... ಈಗ ನನಗೆ ನಾನಾ ಚಿಂತೆಗಳು... ಅಮ್ಮನಿಗೆ, ಮೊಮ್ಮಗು ಹುಟ್ಟಲ್ಲ ಅನ್ನೋ ಚಿಂತೆ. ಅಕ್ಕನಿಗೆ ನಾನು ಹೆಂಡತಿಯನ್ನು ಸುಖವಾಗಿಟ್ಟುಕೊಂಡಿಲ್ಲ ಅನ್ನೋ ಕೊರಗು. ನನಗೆ ಸ್ವಲ್ಪ ಹಣಕಾಸು ಮಾಡಿ ಆಸ್ತಿ ಮಾಡ್ಕೋಬೇಕು ಅನ್ನೋ ಆಸೆ..." ಅವನು ಮಾತನಾಡುತ್ತಲೇ ಇದ್ದ. ಮಾಲಾ ಆಕಳಿಸಿದಳು. ಭಾಸ್ಕರನ ಮಾತಿನ ಮೇಲೆ ಅವಳ ಗಮನವಿರಲಿಲ್ಲ.

*  *  *  *

"ಚಂದ್ರಪ್ಪ ಬಂದಿದ್ದ ಹಳ್ಳಿಯಿಂದ... ಅವನು ಹಳ್ಳಿಯ ಮನೆಯನ್ನು, ಜಮೀನನ್ನು ಬಿಟ್ಟುಕೊಡಲು ತಯಾರಿಲ್ಲ... ಸಾಲ ಸೋಲ ಮಾಡಿ ಗದ್ದೆ, ತೋಟವನ್ನು ಉಳಿಸಿ ಕೊಂಡಿದೀನಿ. ನನ್ನ ಜೀವ ತೇದಿದೀನಿ. ಈಗ ಎಲ್ಲಿಗೆ ಹೋಗಲಿ? ಐದು-ಆರು ಲಕ್ಷ ರೂಪಾಯಿ ಕೊಡೋದಾದ್ರೆ ಬಿಡ್ತೀನಿ ಅಂತಂದ" ಎಂದು ವಸುಧಾ ನುಡಿದಾಗ, ಮಾಲಾ 'ಉಸ್' ಎಂದಳು.

"ಅವನೂ ಮಕ್ಕಳೊಂದಿಗೆ. ನಾಲ್ಕು ಹೆಣ್ಣಂತೆ, ಮೂರು ಗಂಡಂತೆ, ನನ್ನ ಹೊಟ್ಟೆಯ ಮೇಲೆ ಹೊಡೀಬೇಡಿ ಅಂತಂದ." ಮಾಲಾ ಸುಮ್ಮನೆ ನಕ್ಕಳು.

"ಇಷ್ಟರ ಮೇಲೆ ಬಲವಂತ ಮಾಡಿದರೆ, ಕಾನೂನಿದೆ. ಅದು ನನ್ನ ಕಡೆಗೇ ಇದೆ ಅಂತ ನಯವಾಗಿ ಹೆದರಿಸಿದಾನೆ. ಅದೆಲ್ಲಾ ಇನ್ನು ನಮ್ಮ ಕೈಬಿಟ್ಟಂತೆಯೇ. ಯಾಕೆ ಮಾಲಾ, ಏನೂ ಮಾತಾಡ್ತಾನೇ ಇಲ್ಲ, ಏನಾಯ್ತು... ಏನಾಗ್ತಿದೆ ನಿನಗೆ?"

"ಯಾಕೋ ತುಂಬಾ ಸಂಕಟವಾಗ್ತಾ ಇದೆ. ಹೊಟ್ಟೆಯೊಳಗೆ ತಳಮಳ..."

"ನೀರು ಕುಡಿತೀಯಾ..." ಎನ್ನುತ್ತಾ ನೀರು ಕುಡಿಸಲು ಹೋದಳು. ಮಾಲಾ ಎದ್ದು ಬಚ್ಚಲಮನೆಗೆ ಹೋದಳು. ಹಾಗೇ ತಲೆಸುತ್ತಿ ಬಿದ್ದುಬಿಟ್ಟಳು. ವಸುಧಾ ಅವಳ ಸಹಾಯಕ್ಕೆ ಹೋದಳು. ಸಮೀಪದಲ್ಲಿದ್ದ ಡಾಕ್ಟರನ್ನು ಕರೆಸಿದಳು.

ತಲೆಗೆ ಗೋಡೆಯ ಅಂಚು ತಗುಲಿ ರಕ್ತ ಸುರಿಯುತ್ತಿತ್ತು. "ಹೆಡ್ ಇಂಜುರಿ ಆಗಿದೆ. ತಕ್ಷಣ ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗಿ" ಎಂದರು. ವಸುಧಾ ಮಧುಗೆ ಫೋನ್ ಮಾಡಿದಳು.

ತಲೆಗೆ ಸ್ವಲ್ಪ ಜೋರಾಗಿಯೇ ಪೆಟ್ಟಾಗಿದ್ದುದರಿಂದ ಮಾಲಾ ಮತ್ತೆರಡು ಬಾರಿ ವಾಂತಿ ಮಾಡಿಕೊಂಡಿದ್ದಳು. ಅವಳನ್ನು ನರ್ಸಿಂಗ್ ಹೋಂಗೆ ಸೇರಿಸಲಾಯಿತು. ಅವಳು ಪ್ರೆಗ್ನೆಂಟ್ ಎಂದು ತಿಳಿಸಿದಾಗ, ಮಧು ವಸುಧಾಳ ಕಡೆ ದೃಷ್ಟಿ ಬೀರಿದ. ಅವಳು ತಲೆ ತಗ್ಗಿಸಿದಳು.

"ಸ್ವಲ್ಪ ವೀಕ್ ಆಗಿದಾರೆ. ತಲೆಗೆ ಗಾಯವಾಗಿರುವ ಕಡೆ ಎರಡು ಹೊಲಿಗೆಯನ್ನು ಹಾಕಬೇಕಾಗಿ ಬಂತು." ಮಾಲಾ ನಿದ್ರಿಸುತ್ತಿದ್ದಳು. ಇಬ್ಬರೂ ಮನೆಗೆ ಬಂದರು.

"ಮಾಲಾ ಪ್ರೆಗ್ನೆಂಟ್ ಅಂತ ನಿನಗೆ ಗೊತ್ತಿತ್ತಾ..." ಗುಡುಗಿದ.

"ಇಲ್ಲ..." ನಡುಗುತ್ತಾ ಹೇಳಿದಳು.

"ಇಲ್ಲ ನಿನಗೆ ಎಲ್ಲಾ ಗೊತ್ತಿದೆ. ಎಲ್ಲಾ ಮುಚ್ಚಿಟ್ಟಾ ಇದೀಯ... ಏನೇನು ನಡೆದಿದೆ ಅಂತ ಹೇಳು. ಇಲ್ಲದಿದ್ರೆ ನಾನು ಮನುಷ್ಯನೇ ಅಲ್ಲ..." ಏಕೋ ಏನೋ ಹೆದರಿದ ವಸುಧಾ ಎಲ್ಲವನ್ನೂ ಒದರಿಬಿಟ್ಟಳು. ನಂತರ ಕೈಮುಗಿದಳು.

"ದಯವಿಟ್ಟು ಆ ಮಗುವಿಗೆ ಏನೂ ಆಗದಂತೆ ನೋಡಿಕೊಳ್ಳಿ. ಆ ಮಗು ನನ್ನದು. ನನಗೆ ಬೇಕು..."

"ಅವರಿಬ್ಬರ ಅನೈತಿಕ ಸಂಬಂಧಕ್ಕೆ ಹುಟ್ಟುವ ಮಗು ನಿನ್ನದು ಹೇಗಾಗುತ್ತೆ? ನಾನು ಆ ಮಗುವಿಗೆ ತಂದೆಯಾಗಲಾರೆ"

"ಆ ಮಗು ಅವರಿಬ್ಬರ ಕಾಮಕ್ಕೆ ಹುಟ್ಟುತ್ತಿರಬಹುದು. ಆದರೆ, ಇದರಲ್ಲಿ ಆ ಎಳೆಯ ಜೀವದ ಅಪರಾಧ ಏನಿದೆ?"

"ಅದೆಲ್ಲಾ ನನಗೆ ಗೊತ್ತಿಲ್ಲ. ಅವಳಿಗೆ ತಿಳುವಳಿಕೆ ಹೇಳು.... ಇಲ್ಲದಿದ್ದರೆ ಈ ಮನೆಯಲ್ಲಿ ಅವಳಿಗೆ ಜಾಗವಿಲ್ಲ... ಮನೆಯ ಮರ್ಯಾದೆ ಪ್ರಶ್ನೆ ಇದು."

"ಅವಳು ಈ ಮನೆಯವಳಾಗಿ ಎಂದು ಇದಾಳೆ? ನೀವು ಎಂದೋ ಅವಳನ್ನು ಪರಕೀಯಳನ್ನಾಗಿ ಮಾಡಿದೀರಿ. ಅವಳಿಗೆ ಎಷ್ಟೆಷ್ಟು ತರಹ ದ್ರೋಹ ಮಾಡಿದಿರಿ... ಈಗ ಮತ್ತೆ ದ್ರೋಹ ಮಾಡಬೇಡಿ. ಅವಳ ಪಾಡಿಗೆ ಅವಳನ್ನು ಬಿಟ್ಟುಬಿಡಿ."

"ಅವಳಿಗೆ ಸ್ವತಂತ್ರ ಕೊಟ್ಟಿದ್ದಕ್ಕೇ... ಹೀಗಾದದ್ದು."

"ಒಂದು ವೇಳೆ ನಾನೇ ಹೀಗೆ ಮಾಡಿದ್ದರೆ ಏನು ಮಾಡ್ತಿದ್ರಿ?..."

"ಕತ್ತು ಹಿಸುಕಿ ಸಾಯಿಸಿಬಿಡುತ್ತಿದ್ದೆ..." ಕೋಪದಿಂದ ನುಡಿದ.

"ಈಗಲೂ ಹಾಗೇ ಮಾಡಿಬಿಡಿ. ಆಗ ಅವಳು ಸಾಯುತ್ತಾಳೆ. ನೀವು ಜೈಲಿಗೆ ಹೋಗ್ತೀರಿ. ನಾನು ನನ್ನ ತವರಿಗೆ ಹೋಗ್ತೀನಿ. ಅಲ್ಲಿಗೆ ಎಲ್ಲಾ ಚೆಲ್ಲಾಪಿಲ್ಲಿ. ನಿಮ್ಮ ತಂದೆಯ ವಂಶ ನಿರ್ವಂಶವಾಗುತ್ತದೆ. ಒಂದು ಕುಟುಂಬವೇ ಇಲ್ಲವಾಗುತ್ತದೆ."

"ಜಾಣೆ ಅಂತ ಏನೇನೋ ಮಾತನಾಡಬೇಡ. ಧ್ರುವನಿಗೆ ತಿಳಿದರೆ ಅವನು ಇವಳನ್ನು ಹತ್ತಿರಕ್ಕೆ ಸೇರಿಸ್ತಾನಾ? ಮೊದಲೇ ಸಂಬಂಧ ಚೆನ್ನಾಗಿರಲಿಲ್ಲ ಇಬ್ಬರದೂ."

"ಅವನು ಇವಳನ್ನು ಹತ್ತಿರಕ್ಕೆ ಸೇರಿಸುವುದೇ ಬೇಡ. ಮಾಲಾ ಅವನಿಂದ ದೂರ ಇದ್ದುದೇ ಒಳ್ಳೇದಾಯ್ತು. ಅವನು ಎಚ್.ಐ.ವಿ. ಪಾಸಿಟೀವ್ ಪೇಷೆಂಟು..." ಮಧು ಅವಳ ಕೆನ್ನೆಗೆ ಹೊಡೆದ. "ನೀವು ನನ್ನನ್ನು ಹೊಡೆದ ಮಾತ್ರಕ್ಕೆ ಈ ಸತ್ಯ ಸುಳ್ಳಾಗಲ್ಲ"

ಎನ್ನುತ್ತಾ ತನ್ನ ಬಳಿ ಇದ್ದ ಮೆಡಿಕಲ್ ರಿಪೋರ್ಟ್ಸ್‌ಗಳನ್ನು ಗಂಡನಿಗೆ ತೋರಿದಳು. ಅವನು ಕುಸಿದು ಕುಳಿತ.

''ಅಂತೂ ನನಗೆ ಎಲ್ಲರೂ ಮೋಸ ಮಾಡಿದರು. ಧ್ರುವ ಹೀಗೆ ಮಾಡ್ತಾನೆ ಅಂತ ನಾನು ಅಂದುಕೊಂಡಿರಲಿಲ್ಲ. ನಾನೀಗಲೇ ಕೇಳ್ತೀನಿ.''

''ನೀವು ನಿಮ್ಮ ತಂಗಿಗೆ ಮೋಸ ಮಾಡ್ತೀರಿ ಅಂತ ನಾನೂ ಅಂದುಕೊಂಡಿರಲಿಲ್ಲ... ಆ ವಿಷಯ ಧ್ರುವನಿಗೂ ಗೊತ್ತಿತ್ತು ತಾನೇ? ''

''ಸಾಕು ಸುಮ್ನೇ ಹಂಗಿಸಿ ಅನ್ನಬೇಡ. ಮುಂದೇನು ಮಾಡಬೇಕೂಂತ ಹೇಳು'' ಅಬ್ಬರಿಸಿದ.

''ನನ್ನ ಮೇಲೆ ಕೂಗಾಡಿದರೆ ಯಾವ ಪ್ರಾಬ್ಲಂ ಸಾಲ್ವ್ ಆಗಲ್ಲ. ಮೊದಲು ಎಲ್ಲರ ಹತ್ತಿರವೂ ಮಾತನಾಡಬೇಕು. ಒಂದು ತೀರ್ಮಾನಕ್ಕೆ ಬರಬೇಕು.''

''ಏನು ಮಾತಾಡೋದು? ನನ್ನ ತಂಗಿ ಹೀಗೆ ಮಾಡಬಾರದ ಕೆಲಸ ಮಾಡಿದಾಳೆ ಅಂತ ಚರ್ಚಾಕೂಟ ನಡೆಸಬೇಕಾ...? ಚೆನ್ನಾಗಿದೆ ನಿನ್ನ ತರ್ಕ''

''ಸಮಾಧಾನದಿಂದ ಯೋಚಿಸಿ ತಪ್ಪು ನಡೆದುಹೋಗಿದೆ ನಿಜ... ಮಾಲಾಳಿಗೂ ಸ್ವಂತ ಆಸೆಯಿತ್ತು. ಇದರಲ್ಲಿ ಭಾಸ್ಕರನ ತಪ್ಪೇನಿಲ್ಲ...''

''ಸ್ಕ್ಯಾಂಡ್ರಲ್... ನನ್ನ ಕೈ ಕೆಳಗೆ ಕೆಲಸದಲ್ಲಿರುವವನು... ನನ್ನ ತಂಗಿಯ ಜೊತೆ ಸಂಬಂಧ... ಇದೆಲ್ಲಾ ಅವಳ ಆಸ್ತಿಗಾಗಿ... ಎಲ್ಲಾ ಖದೀಮರು. ಬ್ಲಾಕ್‌ಮೇಲ್ ಮಾಡಿ ಹಣ ಕೀಳ್ತಾರೆ. ನನ್ನ ಹತ್ತಿರ ಎಲ್ಲಿದೆ ಹಣ?''

''ನೀವು ನಿಮ್ಮ ತಂಗಿಯ ಮನಸ್ನಲ್ಲಿ ಏನಿದೆ ಅಂತ ಕೇಳಿ ತಿಳಿದುಕೊಂಡಿದ್ದರೆ ಈ ಅನಾಹುತಗಳಾಗುತ್ತಿರಲಿಲ್ಲ. ಭಾರ್ಗವ ಮನೆಯವನೇ ಆಗಿದ್ದ. ನಿಮ್ಮ ದುರಾಸೆಯಿಂದಲೇ ಹೀಗಾದದ್ದು. ಆದರೆ ಏನೀಗ? ನಿಮ್ಮ ಆಸ್ತಿಪಾಸ್ತಿಯೆಲ್ಲಾ ಯಾರಿಗೆ? ನನ್ನ ಹೊಟ್ಟೆಯಲ್ಲಿದ್ದ ಮಗು, ನಿಮ್ಮ ಅಪಶಕುನದ ಮಾತುಗಳಿಗೆ ಹೆದರಿ, ಅಲ್ಲೇ ಕರಗಿ ಹರಿದುಹೋಯ್ತು... ಈಗ ಮಾಲಾಳ ಸರದಿ... ಕೊಲೆಗಾರರು ನೀವು''

'ಫಟ್' ಎಂದು ಅವಳ ಕೆನ್ನೆ ಊದಿಕೊಳ್ಳುವಷ್ಟು ಜೋರಾಗಿ ಹೊಡೆದ. ಅವಳು ತತ್ತರಿಸಿದಳು. ಅವನು ಅಲ್ಲಿ ನಿಲ್ಲದೇ ಹೊರಟುಹೋದ.

ಅವನು ಎಷ್ಟು ಹೊತ್ತಾದರೂ ವಾಪಸ್ಸಾಗದಿದ್ದಾಗ ಅವಳಿಗೆ ಗಾಬರಿಯಾಗಿತ್ತು. ಅವನಿಗೆ ಏನಾದರೂ ಅಪಾಯವಾಗಿರಬಹುದೇ ಎಂದು ಕ್ಷಣ ಕ್ಷಣಕ್ಕೂ ಅನ್ನಿಸತೊಡಗಿತು. ಎಷ್ಟೋ ಹೊತ್ತಿನ ನಂತರ ಮನೆಗೆ ಫೋನು ಮಾಡಿದ್ದ. ಅವಳು ಹಾಯಾಗಿ ಉಸಿರುಬಿಡಿದಳು.

''ಸಾರಿ ವಸುಧಾ... ನಾನು ನಿನ್ನ ಮೇಲೆ ಕೈ ಮಾಡಬಾರದಾಗಿತ್ತು'' ಕ್ಷಮೆ ಕೇಳಿದ.

''ಎಲ್ಲಿದೀರಿ ಈಗ? ಬೇಗ ಮನೆಗೆ ಬನ್ನಿ...''

''ನಿನಗೆ ಮುಖ ತೋರಿಸೋಕೂ ಹೀನಾಯವಾಗುತ್ತೆ. ನನ್ನಿಂದ ಯಾರಿಗೂ ಹಿತವಿಲ್ಲ, ಎಲ್ಲರಿಗೂ ನಾನು ಶತ್ರುವಾಗಿಬಿಟ್ಟೆ'' ಅವನು ಬಿಕ್ಕಿದಂತೆ ಕೇಳಿಸಿತ್ತು.

''ಎಲ್ಲಿದೀರಿ ಹೇಳಿ. ನಾನೇ ಅಲ್ಲಿಗೆ ಬರ್ತೀನಿ...''

''ಏನೂ ಬೇಡ. ನಾನೇ ಬರ್ತೀನಿ. ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿ ಕೆರೆ ಹುಡುಕಿಕೊಂಡು ಊರಾಚೆ ಬಂದುಬಿಟ್ಟಿದೀನಿ. ಆದರೆ ನೀನೇನೂ ಹೆದರಬೇಡ. ನಾನು ನನ್ನ ನಿರ್ಧಾರವನ್ನು ಬದಲಿಸಿದೀನಿ. ಮನೆಗೆ ಬಂದು ಮಾತಾಡ್ತೀನಿ'' ಎಂದು ಮಾತು ಮುಗಿಸಿದ.

ಅವನು ವಾಪಸ್ಸು ಮನೆಗೆ ಬರುವ ಹೊತ್ತಿಗೆ ಬೆಳಗಿನ ಸೂರ್ಯ ಉದಯಿಸುತ್ತಿದ್ದ. ರಾತ್ರಿಯೆಲ್ಲಾ ಅವನಿಗಾಗಿ ಕಾದು ಕಾದು ಸುಸ್ತಾಗಿ ವಸುಧಾ ಹಾಗೇ ನಿದ್ದೆ ಹೋಗಿದ್ದಳು. ಮುಂಬಾಗಿಲ ಕರೆಗಂಟೆ ಸದ್ದಾದಾಗ ಗಡಬಡಿಸಿ ಎದ್ದಳು. ಬಾಗಿಲ ಬಳಿ ನಿಂತಿದ್ದ ಮಧು ಅವಳನ್ನು ತಬ್ಬಿಕೊಂಡು ಅತ್ತ.

''ನನ್ನನ್ನು ಕ್ಷಮಿಸಿಬಿಡು ವಸುಧಾ... ನಾನು ಪಾಪಿ...''

''ಸದ್ಯ ಮನೆಗೆ ಬಂದ್ರಲ್ಲಾ... ಸುಸ್ತಾಗಿದೀರಿ. ಬಿಸಿಬಿಸಿ ಕಾಫಿ ಕೊಡ್ತೀನಿ''

''ಮೊದಲು ಮಾಲಾ ಹೇಗಿದಾಳೆ ಅಂತ ವಿಚಾರಿಸಿ ಮಾತನಾಡಿಸಬೇಕು. ನರ್ಸಿಂಗ್ ಹೋಂಗೆ ಹೋಗೋಣ...''

''ಅವಳಿಗೂ ಬಿಸಿಬಿಸಿ ಕಾಫಿ ಅಂದರೆ ಇಷ್ಟ... ಫ್ಲಾಸ್ಕಿನಲ್ಲಿ ತುಂಬಿದ್ತೀನಿ'' ಇಬ್ಬರೂ ಕಾಫಿ ಕುಡಿದು ನರ್ಸಿಂಗ್ ಹೋಂಗೆ ಬಂದರು.

''ಗುಡ್‌ಮಾರ್ನಿಂಗ್ ಮಾಲಾ... ಹೇಗಿದೀಯ'' ಅಂತ ಅವನು ಮುಗುಳ್ನಗುತ್ತಾ ಬಳಿ ಬಂದು ವಿಚಾರಿಸಿದಾಗ ಅವಳು ತಬ್ಬಿಬ್ಬು. ಪೆದ್ದಳಂತೆ ವಸುಧಾಳ ಕಡೆ ನೋಡಿದಳು. ವಸುಧಾ ವಿಶ್ವಾಸದಿಂದ ಕೈ ಅದುಮಿದಳು. ಮುಖದಲ್ಲಿ ನೆಮ್ಮದಿಯ ಛಾಯೆ.

''ನಾನು ಡಾಕ್ಟರ ಹತ್ತಿರ ಮಾತನಾಡ್ತೀನಿ. ಡಿಸ್ಚಾರ್ಜ್ ಯಾವಾಗ ಮಾಡ್ತಾರೆ ಅಂತ ಕೇಳ್ತೀನಿ'' ಏನೋ ಹೇಳಲು ಹೊರಟವಳನ್ನು ವಸುಧಾ ಸುಮ್ಮನಿರು ಎನ್ನುವಂತೆ ಸಂಜ್ಞೆ ಮಾಡಿದಳು. ಅವನು ಆ ಕಡೆ ಹೋದಕೂಡಲೇ ಕೇಳಿದಳು.

''ಏನಿದೆಲ್ಲಾ... ಅವನು ಸರಿಯಾಗಿದಾನೆ ತಾನೇ? ಅಥವಾ ನಟಿಸುತಿದ್ದಾನೋ?''

''ನೀವು, ಅಣ್ಣತಂಗಿಯರು, ನೀವು ಏನು ಮಾಡ್ತೀರಿ, ಏನು ಹೇಳ್ತೀರಿ ಅನ್ನೋದು ನನಗಿನ್ನೂ ಅರ್ಥವಾಗಿಲ್ಲ, ಬಿಡು, ಈಗ ಹೇಗಿದಿಯಾ ನೀನು?''

''ತಲೆನೋವು ಸ್ವಲ್ಪ ಇದೆ. ರಾತ್ರಿಯೆಲ್ಲಾ ಏನೋ ಕೆಟ್ಟ ಕನಸು... ಈಗ ಬೆಳಿಗ್ಗೆ ನಿನ್ನ ಮುಖ ನೋಡಿದ ಮೇಲೆ ಮನಸ್ಸು ಶಾಂತವಾಯ್ತು.''

''ಹಾಗಾದ್ರೆ ನೀನು ಶಾಂತವಾಗಿರಬೇಕಾದ್ರೆ, ನಾನು ಸದಾ ನಿನ್ನ ಕಣ್ಣೆದುರಿಗೆ ಇರಬೇಕು ಅಂತ ಅರ್ಥವಾಯ್ತು'' ಇಬ್ಬರೂ ಆತ್ಮೀಯವಾಗಿ ನಕ್ಕರು.

"ಡಾಕ್ಟರು ಇವತ್ತೊಂದು ರಾತ್ರಿ ಇಲ್ಲಿರಲಿ ಎಂದು ಹೇಳಿದಾರೆ. ನಾಳೆ ಡಿಸ್ಚಾರ್ಜ್ ಮಾಡ್ತಾರಂತೆ" ಎಂದನು. ವಸುಧಾಳನ್ನು ಮನೆಗೆ ವಾಪಸ್ಸು ಕರೆತಂದು ಬಿಟ್ಟು ಭಾಸ್ಕರನಿಗೆ ಮನೆಗೆ ಬರುವಂತೆ ಫೋನು ಮಾಡಿದ. ಹತ್ತು ನಿಮಿಷದೊಳಗೆ ಭಾಸ್ಕರ ಮನೆಗೆ ಬಂದ. "ವಸು, ನೀನು ಅವನ ಹತ್ತಿರ ಮಾತನಾಡು... ನನಗೆ ಸಹನೆ ಕಡಿಮೆ" ಎಂದು ಮುಂಚೆಯೇ ಹೇಳಿದ್ದ. ವಸುಧಾ ಮಾತಿಗೆ ಪ್ರಾರಂಭಿಸಿದಳು.

"ಮಾಲಾ... ನರ್ಸಿಂಗ್ ಹೋಂನಲ್ಲಿದಾಳೆ. ಅವಳೀಗ ಪ್ರೆಗ್ನೆಂಟ್" ಭಾಸ್ಕರ ಮಧು ಕಡೆ ನೋಡಿದ. ಕಣ್ಣುಗಳಲ್ಲಿ ಆತಂಕ, ಭಯ ಇದ್ದುದನ್ನು ಇಬ್ಬರೂ ಗಮನಿಸಿದರು. ಇವನು ಹೆದರಿದಾನೆಂದು ಗೊತ್ತಾಗಿತ್ತು. ನಿಜ ಹೇಳದೇ ವಿಧಿಯಿರಲಿಲ್ಲ.

"ಅವಳಿಗೆ ಹುಟ್ಟಲಿರುವ ಮಗು ನಿಮ್ಮದೇ ತಾನೇ... ನಿಜ ಒಪ್ಕೋತೀರಾ...?"

"ನಿಜ... ಆದರೆ ಇದರಲ್ಲಿ ನನ್ನ ತಪ್ಪೇನಿಲ್ಲ."

"ಅದ್ಹೇಗೆ ಹೇಳ್ತೀರಿ? ತಪ್ಪೆಲ್ಲಾ ನನ್ನ ತಂಗಿಯದಾ?" ಮಧು ಕೆಕ್ಕರಿಸಿ ನೋಡಿದಾಗ ಭಾಸ್ಕರ ತಲೆ ತಗ್ಗಿಸಿದ.

"ಆಯ್ತು ಈಗ ಮುಂದೆ ಏನು ಅಂತ ಯೋಚಿಸಿದೀರಾ?"

"ಏನು ಮಾಡಬೇಕು ಅಂತ ಗೊತ್ತಾಗ್ತಿಲ್ಲ"

"ನಿಮ್ಮಂಥೋರ ಹಣೇಬರಹವೆಲ್ಲಾ ಇಷ್ಟೇ.. ಅವಳನ್ನು ಮದುವೆಯಾಗೋಕೆ ಸಿದ್ಧರಾಗಿದೀರಾ... ನಿಮ್ಮ ಹೆಂಡತೀನ ಬಿಡೋಕೆ ರೆಡಿಯಾಗಿದೀರಾ?"

"ಮಾಲಾಗೆ ಇಷ್ಟವಾಗೋದಾದ್ರೆ ಮದುವೆಯಾಗ್ತೀನಿ. ಆದರೆ, ನನ್ನ ಹೆಂಡತೀನ ಬಿಡೋಕೆ ಮಾತ್ರ ಆಗಲ್ಲ. ಅವಳಿಗೆ ನನ್ನನ್ನ ಬಿಟ್ಟರೆ ಬೇರೆ ಯಾರೂ ಇಲ್ಲ. ಇದೆಲ್ಲಾ ಮಾಲಾ ಅವರಿಗೂ ಗೊತ್ತು."

"ಇಬ್ಬಿಬ್ಬರು ಹೆಂಡತಿಯರನ್ನು ಸಾಕೋಕೆ ತಾಕತ್ತಿದೆಯಾ?" ಭಾಸ್ಕರನ ಮುಖ ಕೆಂಪಾಗಿತ್ತು.

"ನಾನು ಬಡವ. ಈ ಲಕ್ಷುರಿ ಕೊಡೋಕೆ ಆಗಲ್ಲ. ಅದಕ್ಕೆ ಮಾಲಾ ಒಪ್ಪೋದಾದ್ರೆ ನನಗೆ ಅಭ್ಯಂತರವಿಲ್ಲ."

"ನನಗೆ ಅಭ್ಯಂತರವಿದೆ. ಮೊದಲು ನಿಮ್ಮ ತಾಯಿ, ಅಕ್ಕ ಅವರ ಹತ್ತಿರ ನಾನು ಮಾತ್ನಾಡಬೇಕು. ನಿಮ್ಮಿಬ್ಬರ ಮದುವೆಗೆ ಅವರುಗಳು ಒಪ್ಪಿಗೆ ನೀಡಬೇಕು. ಯಾವಾಗ ಮಾತನಾಡೋಣ. ಆದಷ್ಟು ಬೇಗ ಡಿಸೈಡ್ ಆಗಬೇಕು."

"ಅದು ಬೇಡ ಸಾರ್" ಭಾಸ್ಕರ ಕೈಮುಗಿದ. "ಅವರುಗಳು ಖಂಡಿತಾ ಒಪ್ಪುವುದಿಲ್ಲ. ನಾನು ಅವರ ಮನಸ್ಸನ್ನು ನೋಯಿಸುವುದಿಲ್ಲ."

"ಹೋಗ್ರೀ ಹೋಗ್ರೀ ಎದ್ದು ಹೋಗ್ರೀ... ಗೊತ್ತಾಯ್ತಲ್ಲ ನಿಮ್ಮ ಯೋಗ್ಯತೆ ಏನೂಂತ. ಇಬ್ಬಿಬ್ಬರು ಹೆಂಗಸರಿಗೆ ಮೋಸ ಮಾಡ್ತಾ ಇದೀರಲ್ಲ, ನಾಚಿಕೆ ಆಗೋಲ್ವಾ?"

''ನನ್ನನ್ನ ಬೈಯೋಕೆ ನಿಮಗೆ ಏನೂ ಹಕ್ಕಿಲ್ಲ. ನೀವು ನಿಮ್ಮ ತಂಗಿಗೆ ದ್ರೋಹ ಮಾಡಿದ್ದರಿಂದಲೇ ಅವರು ನನ್ನ ಬಳಿಗೆ ಬಂದದ್ದು.'' ಅವನೂ ತಿರುಗಿಬಿದ್ದ.

ಮಧುಕರನ ಮುಖ ಚಿಕ್ಕದಾಯಿತು. ಆದರೂ ಎಗರಾಡಿದ. ''ಯೂ ಷಟಪ್... ನಾನು ಏನೇ ಮಾಡಿದ್ದರೂ ಅದು ಅವಳ ಒಳ್ಳೇದಕ್ಕೆ... ಆದರೆ ಅದು ಅವಳಿಗೆ ಅರ್ಥವಾಗಿಲ್ಲ. ಇದನ್ನೆಲ್ಲಾ ನಿಮಗೇಕೆ ಹೇಳಬೇಕು ನಾನು...? ನಾನು ನಿಮಗೆ ಎರಡು ದಿನ ಟೈಂ ಕೊಡ್ತೀನಿ. ಅಷ್ಟರಲ್ಲಿ ನೀವು ಒಂದು ನಿರ್ಧಾರಕ್ಕೆ ಬರಬೇಕು. ಮಾಲಾಳನ್ನು ನಿಮ್ಮ ಮನೆಯವರ ಸಮ್ಮುಖದಲ್ಲಿ ಮದುವೆಯಾಗಬೇಕು... ಅಥವಾ ಮತ್ತೆ ಅವಳ ಕಣ್ಣಿಗೆ ಕಾಣಿಸಿಕೊಳ್ಳದಂತೆ ಅವಳ ಬಾಳಿನಿಂದ ಹೊರಟುಹೋಗಬೇಕು. ಹ್ಞಾಂ... ಹಾಗೇ ಇನ್ನೊಂದು ವಿಚಾರ, ಮಾಲಾ..'' ಅಷ್ಟರಲ್ಲಿ ಫೋನು ರಿಂಗಾಗಿತ್ತು. ಮಧು ಮಾತನ್ನು ನಿಲ್ಲಿಸಿ, ರಿಸೀವರ್‌ನೆತ್ತಿಕೊಂಡ. ಅತ್ತಲಿಂದ ಧ್ರುವ ಮಾತನಾಡಿದ್ದ.

''ನೀವಿನ್ನು ಹೋಗಬಹುದು. ನೆನಪಿರಲಿ... ಈ ಗಳಿಗೆಯಿಂದ ನೀವು ಮಾಲಾಳನ್ನು ಭೇಟಿಯಾಗಲು ಪ್ರಯತ್ನಿಸಬಾರದು'' ಭಾಸ್ಕರನಿಗೆ ಹುಕುಂ ಇತ್ತ.

ಧ್ರುವನಿಗೆ ಅವನ ಮಾತುಗಳು ಕೇಳಿಸಿತ್ತು. ಮೊದಲಿಗೆ ತನಗೇ ಹೇಳುತ್ತಿರಬಹುದೇ ಎಂದು ಭಾಸವಾಗಿತ್ತು. ''ಯಾರ ಹತ್ತಿರ ಮಾತ್ನಾಡ್ತಿದೀಯ'' ಕೇಳಿದ್ದ. ಭಾಸ್ಕರ ಅಲ್ಲಿಂದ ಕದಲಿದ್ದ.

''ನಿನ್ನ ಹತ್ತಿರಾನೇ... ಅಲ್ಲೇ ಇರು... ನಾನೇ ಅಲ್ಲಿಗೆ ಬರ್ತೀನಿ'' ಎಂದು ನುಡಿದು ವಸುಧಾಳ ಕಡೆ ತಿರುಗಿದ.

''ಧ್ರುವ ಬಂದಿದಾನೆ. ಗೆಸ್ಟ್‌ಹೌಸಿನಲ್ಲಿದಾನೆ. ಅವನು ಈ ಮನೆಗೆ ಬರೋದು ಬೇಡ. ನಾನೇ ಅಲ್ಲಿಗೆ ಹೋಗಿ ಮಾತನಾಡ್ತೀನಿ. ಅವನ ಹೆಲ್ತ್ ಸರಿಯಾಗಿಲ್ಲವಲ್ಲ...''

''ನಾನೂ ಬರ್ತೀನಿ... ನಾನೂ ಮಾತನಾಡಬೇಕು.''

''ಏನೂ ಬೇಡ... ನೀನೇಕೆ ಅವನನ್ನು ನೋಡಬೇಕು?''

''ನೋಡಿದ್ರೆ ನನಗೇನೂ ಆ ರೋಗ ಅಂಟಿಬಿಡುವುದಿಲ್ಲ. ನೀವು ಬೇಗ ಸಹನೆಯನ್ನು ಕಳೆದುಕೊಳ್ತೀರಿ. ಭಾಸ್ಕರನ ಹತ್ತಿರ ಹಾಗಾ ಮಾತನಾಡೋದು...?''

''ಧ್ರುವ ನನ್ನ ಬಿಸಿನೆಸ್ ಪಾರ್ಟನರ್, ಅವನ ಹತ್ತಿರ ಹೇಗೆ ಮಾತನಾಡಬೇಕು ಅಂತ ನನಗೆ ಚೆನ್ನಾಗಿ ಗೊತ್ತು. ಭಾಸ್ಕರ್ ಈಸ್ ನೋಬಡಿ...''

''ಅಲ್ಲಿ ಬೇರೆಯವರಿಗೆ ನಿಮ್ಮ ಮಾತುಗಳು ಕೇಳಿಸಬಹುದು. ಅವನು ಮನೆಗೆ ಬಂದರೆ ಮನೆ ಏನೂ ಅಪವಿತ್ರವಾಗುವುದಿಲ್ಲ.. ಅವನನ್ನು ಅಪರಾಧಿ ತರಹ ಟ್ರೀಟ್ ಮಾಡಬೇಡಿ...''

''ನಿನಗೆ ಯಾರ ತಪ್ಪೂ ತಪ್ಪು ಅಂತ ಅನ್ನಿಸಲ್ಲ ಅಲ್ವಾ? ಭಾಸ್ಕರ ಒಳ್ಳೆಯವನು, ಧ್ರುವ ಒಳ್ಳೆಯವನು, ನಾನು ಮಾತ್ರ ಕೆಟ್ಟವನು... ಹೌದಾ?''

''ಯಾರದ್ದೇ ತಪ್ಪಿರಲಿ, ಬಿಡಲಿ, ಸಮಸ್ಯೆ ನಮ್ಮದೇ ಅಲ್ವಾ? ಮೊದಲು ಮಾಲಾಳ ಪ್ರಾಬ್ಲಂ ಸಾಲ್ವ್ ಆಗೋದನ್ನ ನೋಡಿ...''

''ನೀನು ಹೇಳಿದ ಹಾಗೇ ಕೇಳೋ ಸ್ಥಿತೀನ ತಂದು ಇಟ್ಟಿದಾಳೆ ನಿನ್ನ ಸ್ನೇಹಿತೆ. ಇಷ್ಟವಿಲ್ಲದಿದ್ದರೂ ಈ ನಿನ್ನ ಮಾತಿಗೆ ಒಪ್ಪಬೇಕಾಗಿದೆ'' ಎನ್ನುತ್ತಾ ಧ್ರುವನಿಗೆ ಮತ್ತೆ ಫೋನು ಮಾಡಿದ. ಅರ್ಧ ಗಂಟೆಯೊಳಗೆ ಧ್ರುವ ಪ್ರತಾಪನೊಡನೆ ಬಂದ.

ಪ್ರತಾಪನನ್ನು ಕಂಡು ಮುಖ ಸಿಂಡರಿಸಿದ. ''ಇವನೊಬ್ಬ ಈಡಿಯಟ್. ಪರ್ಸನಲ್ ವಿಷಯ ಮಾತನಾಡಬೇಕು ಅಂತ ಹೇಳಿದ್ದರೂ, ಪ್ರತಾಪನನ್ನು ಜತೆಯಲ್ಲಿ ಕರೆತಂದಿದಾನೆ'' ವಸುಧಾಳಿಗೆ ಹೇಳಿದ.

''ಈಗ ಹೇಗಿದೀರಿ ವಸುಧಾ?'' ಧ್ರುವ ಮುಗುಳ್ನಕ್ಕು ಪ್ರಶ್ನಿಸಿದ.

''ಪರವಾಗಿಲ್ಲ... ಕೂತ್ಕೊಳ್ಳಿ'' ಎಂದು ಆದರದಿಂದ ಆಹ್ವಾನಿಸಿದಳು. ಇಬ್ಬರೂ ಕುಳಿತರು.

''ಈಗ ನಿನ್ನ ಹೆಲ್ತ್ ಹೇಗಿದೆ?'' ಮಧು ಧ್ರುವನನ್ನು ಪ್ರಶ್ನಿಸಿದ.

''ಪರವಾಗಿಲ್ಲ, ಆಗಾಗ ಬೆನ್ನುನೋವು ಸ್ವಲ್ಪ ಹಿಂಸೆ ಕೊಡುತ್ತೆ.''

''ನಂಜುಂಡೇಶ್ವರನಿಗೆ ಮುಡಿ ಕೊಟ್ಟಿದ್ದು ಉಪಯೋಗವಾಗಲಿಲ್ವಾ?'' ಧ್ರುವ ನಕ್ಕ, ಪ್ರತಾಪನ ಕಡೆ ನೋಡಿದ.

''ಪ್ರತಾಪ ಹೇಳಿದ ಅಂತ ನಾನು ಮುಡಿ ಕೊಟ್ಟೆ ಅಷ್ಟೇ. ನನಗೆ ಅದರಲ್ಲೆಲ್ಲಾ ನಂಬಿಕೆ ಕಡಿಮೆ.''

''ಆದರೂ ಪ್ರತಾಪ ಹೇಳಿದ್ದನ್ನೆಲ್ಲಾ ಕೇಳ್ತೀಯಪ್ಪಾ...''

''ಅವನೇ ನನಗೆ ಗೈಡ್, ಗಾಡ್, ಗುರು ಆಲ್ಸೋ... ಅದ್ಸರಿ, ಅದೇನು ಇದ್ದಕ್ಕಿದ್ದ ಹಾಗೇ ಬಾ ಅಂತ ಫೋನ್ ಮಾಡಿದ್ಯಲ್ಲಾ, ಎನಿಥಿಂಗ್ ರಾಂಗ್?''

''ನೋ... ಎವ್ವೆರಿಥಿಂಗ್ ಈಸ್ ಓ.ಕೇ. ನಿನಗೆ ಒಂದು ಗುಡ್‌ನ್ಯೂಸ್. ಮಾಲಾ ಈಸ್ ಪ್ರೆಗ್ನೆಂಟ್...'' ಮಧು ಅವನನ್ನೇ ತೀಕ್ಷ್ಣವಾಗಿ ನೋಡಿದ.

''ವ್ಹಾಟ್... ನಾಟ್ ಪಾಸಿಬಲ್'' ಎನ್ನುತ್ತಾ ಧ್ರುವ ಎದ್ದು ನಿಂತ. ಪ್ರತಾಪ ಅವನನ್ನು ಎಳೆದು ಕೂರಿಸಿದ.

''ಯಾಕೆ ನಾಟ್ ಪಾಸಿಬಲ್...? ಡಾಕ್ಟರ್ ಕನ್‌ಫರ್ಮ್ ಮಾಡಿದಾರೆ...''

''ನಿನ್ನ ತಂಗಿ ಹೀಗೆ ಚೀಟ್ ಮಾಡ್ತಾಳೆ ಅಂತ ನಾನು ಅಂದುಕೊಂಡಿರಲಿಲ್ಲ, ಯಾವನು ಆ ಲೋಫರ್...''

''ನೀನೇ ಇರಬೇಕು. ನಿನ್ನನ್ನಲ್ವಾ ಅವಳು ಮದುವೆಯಾದದ್ದು...'' ಮಧು ನಕ್ಕಾಗ ಧ್ರುವ ಹೊಡೆಯುವವನಂತೆ ಮುಂದೆ ಬಾಗಿದ.

"ನಿನ್ನ ತಂಗಿ, ನನ್ನನ್ನ ಅವಳ ಹತ್ತಿರಕ್ಕೆ ಸೇರಿಸಿಲ್ಲ. ಈಗ ಗೊತ್ತಾಯ್ತು. ಇದೇ ಕಾರಣ ಅಂತ... ನಿನಗೂ ತಿಳಿಯದ ಹಾಗೆ, ಭಾರ್ಗವನ ಹತ್ತಿರ ಸಂಬಂಧವಿಟ್ಟುಕೊಂಡಿದಾಳೆ... ನಮಗೆ ಇಬ್ಬರೂ ಸೇರಿ ಮೋಸ ಮಾಡಿದಾರೆ."

"ಹಾಗೆಲ್ಲಾ ಏನೇನೋ ಮಾತ್ನಾಡಬೇಡ... ಭಾರ್ಗವ ದೇವರಂತಹವನು. ಆಮೇಲೆ ಅವನು ಈ ಕಡೆ ತಿರುಗಿ ನೋಡಿಲ್ಲ. ಅವನು ಎಲ್ಲಿದ್ದಾನೋ ಅದೂ ಸಹ ತಿಳಿಯದು."

"ನಿನ್ನ ತಂಗಿ ಕದ್ದು ಮುಚ್ಚಿ ಮಾಡಿರೋ ಅವ್ಯವಹಾರಕ್ಕೆ ನೀನು ಪರದೆ ಎಳೀಬೇಡ. ಇದೇ ಭಾರ್ಗವನ್ನ ನೀನು ಮೋಸಗಾರ ಅಂತ ನನ್ನೆದುರಿಗೆ ಹೇಳಿದ್ದೆ. ಅದನ್ನೂ ಮರೆತು ಬಿಟ್ಯಾ?"

"ಆಗಲೂ ಭಾರ್ಗವ, ನಾನು ಕೇಳದೇನೇ ತನ್ನ ಆಸ್ತಿಗಳನ್ನೂ ನನಗೆ ವಾಪಸ್ಸು ಕೊಟ್ಟ. ಮನಸ್ಸು ಮಾಡಿದ್ದರೆ ಅವನು ಕೇಸ್ ಹಾಕಿ ಗೆಲ್ಲಬಹುದಾಗಿತ್ತು."

"ಹಾಗೆ ಮಾಡಿದ್ದೆಲ್ಲಾ ಇದಕ್ಕೇ... ಮಾಲಾಳನ್ನು ವಶಪಡಿಸಿಕೊಳ್ಳೋಕೆ. ಒಂದೇ ಮನೇಲಿದ್ದು ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದವರು, ಒಟ್ಟಿಗೇ ಮಲಗದೇ ಬಿಡ್ತಾರಾ. ಆಗ ಬಸಿರಿಯಾಗದಂತೆ ಎಚ್ಚರಿಕೆ ವಹಿಸಿದ್ದಳು. ಈಗ ಹೇಗೂ ನಾನು ಬಕರಾ ಮದುವೆಯಾಗಿದೀನಲ್ಲ. ಓಪನ್ ಆಗಿ ಬಸಿರಿಯಾಗಿದ್ದಾಳೆ. ಇದೆಲ್ಲಾ ನನ್ನ ಆಸ್ತಿಯನ್ನು ಲಪಟಾಯಿಸುವ ಪ್ಲಾನ್ ಅವರದು..."

"ಏನಿದೆ ನಿನ್ನ ಹತ್ತಿರ ಆಸ್ತಿ ಲಪಟಾಯಿಸೋಕ್ಕೆ? ನೀನು ಪ್ರತಾಪನ ಗುಲಾಮ... ಈಗ ನಿನ್ನ ಹತ್ತಿರ ಇರೋದು ಬರೀ ಎಚ್.ಐ.ವಿ. ವೈರಸ್... ಅಷ್ಟೇ"

ಧ್ರುವನ ಮುಖ ವಿವರ್ಣವಾಯಿತು. ಆದರೂ ಸಾವರಿಸಿಕೊಂಡು ಪ್ರತಾಪನ ಕಡೆ ನೋಡಿದ. ಅವನ ಮುಖ ಕಪ್ಪಿಟ್ಟುಹೋಗಿತ್ತು. "ಏನಾಡ್ತಿದೀಯ ಷಟಪ್"

"ನೋಡು ಮಧು... ಹೀಗೆಲ್ಲಾ ಕೆಟ್ಟ ಮಾತುಗಳನ್ಯಾಕೆ ಆಡ್ತೀಯ? ಧ್ರುವ ನಿನ್ನ ಸ್ನೇಹಿತ. ನಿನ್ನ ತಂಗಿ ಅವನಿಗೆ ಮೋಸ ಮಾಡಿದಾಳೆ. ಅದಕ್ಕೇ ಹೀಗೆಲ್ಲಾ ಅಪವಾದ ಹೊರಿಸಬಹುದಾ? ನೀನ್ಯಾಕೆ ನಿನ್ನ ತಂಗಿಯನ್ನು ಕವರ್ ಅಪ್ ಮಾಡ್ತೀಯ?"

"ನೀನು ಸುಮ್ಮನಿರು ಪ್ರತಾಪ. ನಾನು ನಿಮ್ಮನ್ನು ನಂಬಿದ್ದು ಜಾಸ್ತಿಯಾಯ್ತು. ಧ್ರುವ ಏಡ್ಸ್‌ರೋಗಿ ಅನ್ನೋದು ನಿನಗೆ ಗೊತ್ತಿಲ್ಲದೇ ಇರಬಹುದು... ಆದರೆ ಈ ರಿಪೋರ್ಟ್‌ಗಳು ಸುಳ್ಳು ಹೇಳಲ್ಲವಲ್ಲ" ಎನ್ನುತ್ತಾ ಮೆಡಿಕಲ್ ರಿಪೋರ್ಟ್‌ಗಳನ್ನು ಮುಂದೆ ಹಿಡಿದ. ಪ್ರತಾಪ ಅವುಗಳನ್ನು ಧ್ರುವನ ಕೈಯಿಂದ ಕಿತ್ತುಕೊಂಡ.

"ಸುಳ್ಳು, ಸುಳ್ಳು, ಇದೆಲ್ಲಾ ಸುಳ್ಳು... ಇದನ್ನೆಲ್ಲಾ ನಿನ್ನ ತಂಗಿ ಸೃಷ್ಟಿಸಿದಾಳೆ. ನಾನು ಅವಳನ್ನು ಸುಮ್ಮನೇ ಬಿಡಲ್ಲ."

"ನೀನು ಇವುಗಳನ್ನು ಹರಿದುಹಾಕಿದರೆ, ನಿಜ ಸುಳ್ಳಾಗುವುದಿಲ್ಲ. ಸುಳ್ಳಾಗಿದ್ದರೆ

ನಿನಗೇಕೆ ಭಯ? ಬ್ಲಡ್ ಟೆಸ್ಟ್ ಮಾಡಿಸಿಕೊಂಡು, ನಿಜ ಏನೂಂತ ತಿಳ್ಕೋ... ಡಾ॥ ಶ್ರೀನಿವಾಸ್ ಎಲ್ಲಾ ಹೇಳಿದಾರೆ.''

''ಪ್ರತಾಪ್ ಇದೆಲ್ಲಾ ಏನು? ನನಗೊಂದೂ ಅರ್ಥವಾಗುತ್ತಿಲ್ಲ''

''ಇಬ್ಬರೂ ಸೇರಿ ನಾಟಕವಾಡಬೇಡಿ. ನಿಮ್ಮಿಬ್ಬರಲ್ಲಿ ಒಬ್ಬರಿಗಂತೂ ಖಂಡಿತಾ ನಿಜ ಗೊತ್ತಿರಬೇಕು.''

''ಇಲ್ಲ ಮಧು, ನನಗೆ ಖಂಡಿತಾ ಏನೂ ಗೊತ್ತಿಲ್ಲ. ಪ್ರತಾಪ್ ಯಾಕೆ ಸುಮ್ಮನಿದೀಯ? ನಿಜ ಏನೂಂತ ಹೇಳು.''

''ನಡೀ ಧ್ರುವ ಹೋಗೋಣ. ಇಲ್ಲಿ ಕುಳಿತಿದ್ದರೆ, ಏನೇನೋ ಖಾಯಿಲೆಗಳನ್ನು ನಮಗೆ ಅಂಟಿಸಿಯೇ ಬಿಡ್ತಾರೆ'' ಪ್ರತಾಪ ಎದ್ದ.

''ಈ ನಿನ್ನ ತ್ರೀ.ಜೀ. ನಿನ್ನಿಂದ ಇದನ್ನು ಮುಚ್ಚಿಟ್ಟಿದಾನೆ. ಅದಕ್ಕೆ ಕಾರಣವೂ ಗೊತ್ತು. ನೀನಿಲ್ಲದೇ ಅವನಿರಲಾರ... ಅಂಥಾ ಗಳಸ್ಯ ಕಂಠಸ್ಯ ನಿಮ್ಮಿಬ್ಬರದು.''

''ನೀನೂ ನಮ್ಮ ಸ್ನೇಹಿತಾನೇ... ನಿನ್ನ ತಂಗಿಯ ಕಾರಣದಿಂದಾಗಿ ಇಲ್ಲದ ಅಪವಾದ ಹೊರಿಸ್ತಿದ್ದೀಯ. ಭಾರ್ಗವ ಎಲ್ಲಿದಾನೆ ಅಂತ ಹುಡುಕಿಸು. ನಾನು ಅವರಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ.''

''ಭಾರ್ಗವ ಎಲ್ಲಿದ್ದರೂ, ಮಾಲಾ ಈಗ ಕಷ್ಟದಲ್ಲಿದಾಳೆ ಅಂತ ತಿಳಿದ್ರೆ ಖಂಡಿತಾ ಬರ್ತಾನೆ... ಹಾಗಾದ್ರೆ ನೀನು ಡೈವೋರ್ಸ್ ಕೊಟ್ಟುಬಿಡು. ನಾನು ಅವನನ್ನು ಎಲ್ಲಿದ್ದರೂ ಹುಡುಕಿಸಿ, ಕರೆಸಿ, ಅವನಿಗೆ ಅವಳನ್ನು ಕೊಟ್ಟು ಮದುವೆ ಮಾಡ್ತೀನಿ.''

''ಹಾಗೇ ಮಾಡು... ನಡತೆ ಸರಿಯಿಲ್ಲದ ನಿನ್ನ ತಂಗಿಯ ಸಹವಾಸ ನನಗೆ ಬೇಡ.''

''ಬೇಡ ಧ್ರುವ, ನೀನು ಡೈವೋರ್ಸ್ ಕೊಟ್ಟುಬಿಟ್ಟರೆ, ಗೆಲುವು ಅವಳದಾಗುತ್ತದೆ'' ಪ್ರತಾಪ ನುಡಿದ.

''ಪರವಾಗಿಲ್ಲ, ಬಿಡುಗಡೆ, ಗೆಲುವು ಎಲ್ಲಾ ಅವಳಿಗಿರಲಿ... ಯಾವುದೋ ನನ್ನದಲ್ಲದ ಮಗುವಿಗೆ ತಂದೆಯಾಗಿ ಸ್ಥಾನ, ಮಾನ ಕೊಡುವಷ್ಟು ಉದಾರತೆ ನನ್ನಲ್ಲಿಲ್ಲ. ಭಾರ್ಗವನೇ ಆ ಪಟ್ಟವನ್ನು ತೆಗೆದುಕೊಳ್ಳಲಿ.'' ಇಬ್ಬರೂ ಎದ್ದರು. ಧ್ರುವ ಮಧುಕರನ ಕೈ ಹಿಡಿಯಲು ಹೋದ. ಅವನು ಕೈಯನ್ನು ಮುಂದೆ ಚಾಚಲಿಲ್ಲ. ''ಓ... ನಿನಗೆ ನನ್ನ ಕೈ ಹಿಡಿಯಲು ಭಯ. ಪರವಾಗಿಲ್ಲ ಬಿಡು... ಐ ಆಮ್ ವೆರಿ ಸಾರಿ... ಒಂದಲ್ಲ ಒಂದು ದಿನ ನಿನ್ನ ತಂಗಿ ನನ್ನವಳಾಗಾಳೆ ಅನ್ನೋ ಆಸೇನ ಇಟ್ಟುಕೊಂಡಿದ್ದೆ. ಆ ಆಸೆ ಫಲಿಸಲಿಲ್ಲ. ಆದರೆ ಈ ಕಾರಣದಿಂದ ನಮ್ಮ ಸ್ನೇಹ ಮುರಿಯುವುದು ಬೇಡ. ನನಗೆ ನಿನ್ನ ಮೇಲೆ ಕೋಪವಿಲ್ಲ.''

ಮಧು ಸೊಟ್ಟಗೆ ನಕ್ಕ. ಅವರಿಬ್ಬರೂ ಹೊರಟುಹೋಗಿದ್ದರು. ಮಧು ವಸುಧಾಳ ಕಡೆ ನೋಡಿದ. ಅವಳು ಮೌನವಾಗಿದ್ದಳು. ಗೆಸ್ಟ್‌ಹೌಸ್ ತಲುಪಿದ ಕೂಡಲೇ ಧ್ರುವ ಫೋನು ಮಾಡಿದ್ದ.

''ನಾನು ಮಾಲಾಳ ಮಗುವಿಗೆ ತಂದೆಯ ಸ್ಥಾನ ಕೊಡಲು ಸಿದ್ಧನಾಗಿದೇನೆ. ಆದರೆ, ನಾನು ಮೊದಲು ಅವಳ ಹತ್ತಿರ ಮಾತನಾಡಬೇಕು'' ಎಂದ.

''ಅದೇನು ಇಷ್ಟು ಬೇಗ, ಬಣ್ಣ ಬದಲಾಯಿಸಿಬಿಟ್ಟೆ, ಮಾಲಾಳಿಗೆ ನಮ್ಮ ಆಸ್ತಿಯಲ್ಲಿ ಯಾವುದೇ ಪಾಲು ಇಲ್ಲ.''

''ಅದು ನನಗೆ ಗೊತ್ತು. ಎಲ್ಲವನ್ನೂ ನೀನೇ ನುಂಗಿ ಹಾಕಿದೀಯ. ನನಗೆ ಯಾವ ಆಸ್ತಿಯೂ ಬೇಡ. ಆ ಮಗು ನನಗೆ ಬೇಕು.''

''ಮಾಲಾ ಒಪ್ಪದೇ ಇದ್ದರೇ... ಅವಳು ಬೇಡ ನಿನಗೆ... ಮಗು ಯಾಕೆ?''

''ಅದನ್ನು ಅವಳೇ ಹೇಳಲಿ. ಅವಳಿಗೆ ಇಷ್ಟವಿಲ್ಲದಿದ್ದರೆ, ಅವಳು ಇಲ್ಲೇ ಇರಲಿ, ನನಗೆ ಮಗುವನ್ನು ಮಾತ್ರ ಕೊಡಲಿ.''

''ಈ ಐಡಿಯಾ ನಿನ್ನದಲ್ಲ ಪ್ರತಾಪನದು ತಾನೇ...'' ಧ್ರುವ ಉತ್ತರಿಸಲಿಲ್ಲ, ಫೋನನ್ನು ಇಟ್ಟುಬಿಟ್ಟಿದ್ದ.

''ಹೆಂಡತಿಯನ್ನು ಬೇಡ ಅಂದೋನು ಈಗ ಮಗು ಬೇಕು ಅಂತಿದಾನೆ. ತನಗೆ ಇನ್ನು ಮದುವೆ, ಮಕ್ಕಳು ದೂರದಬೆಟ್ಟ ಅಂತ ಗೊತ್ತಾಗಿರಬೇಕು'' ವಸುಧಾ ಹೇಳಿದಳು.

''ಮಾಲಾ ಇದಕ್ಕೆಲ್ಲ ಖಂಡಿತಾ ಒಪ್ಪಲ್ಲ''

''ನನಗೂ ಗೊತ್ತು, ಆದರೆ ಮಾಲಾ ಹೀಗೆ ಮಾಡಬಾರದಾಗಿತ್ತು, ಮನೆತನದ ಮರ್ಯಾದೆಯನ್ನು ಬೀದಿಪಾಲು ಮಾಡಿಬಿಟ್ಟಳು. ಈಗ ನಮಗೆ ಪೇಚಾಟ.''

''ಇದೆಲ್ಲಾ ನಮ್ಮ ಕೈಮೀರಿ ನಡೆದುಹೋಗಿದೆ. ಇದನ್ನು ಸರಿಪಡಿಸಬೇಕಾದುದು ನಮ್ಮ ಧರ್ಮ. ಸದ್ಯಕ್ಕೆ ಯಾವ ಮಾತೂ ಬೇಡ. ಮಾಲಾ ಯಾರನ್ನೂ ಭೇಟಿಯಾಗುವುದು ಬೇಡ. ಅವಳ ಮನಸ್ಸು ಕೆಡುತ್ತದೆ. ಅದು ಮಗುವಿನ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತದೆ.''

''ಹಾಗಂತ ಅವಳನ್ನು ಎಲ್ಲಿಗೆ ಕಳಿಸೋಣ?''

''ಸದ್ಯಕ್ಕೆ ಅವಳು ನಮ್ಮ ಮನೆಯಲ್ಲಿರಲಿ. ಮೊದಲೇ, ಜ್ಯೋತಿಷಿಗಳು ಮಗುವಿಗೆ ಮಗುವಿನ ತಂದೆಯಿಂದ ಅಪಾಯವಿದೆ ಅಂತ ಹೇಳಿದಾರೆ. ಧ್ರುವ, ಪ್ರತಾಪ, ಅವಳನ್ನು ಕಿಡ್ನಾಪ್ ಮಾಡಿಸಿದರೆ... ಮರ್ಯಾದೆ ಏನೂ ಉಳಿಯುವುದಿಲ್ಲ.''

''ಧ್ರುವ ಆ ಮಗುವಿನ ತಂದೆ ಅಲ್ಲ, ಭಾಸ್ಕರ ಅದರ ತಂದೆ. ಅವನು ಏನಾದರೂ ಅಪಾಯ ಮಾಡಬಹುದು... ಮುಂದೆ ಆ ಮಗುವಿನಿಂದ ತನಗೆ ತೊಂದರೆ ಬರದಿರಲಿ ಅಂತ ಅಷ್ಟೇ...'' ಅವನಿಗೆ ಭಾಸ್ಕರನ ಮೇಲೂ ನಂಬಿಕೆ ಇರಲಿಲ್ಲ.

''ಇಬ್ಬಿಬ್ಬರು ತಂದೆಯಿಂದ ಮಗುವಿಗೆ ಅಪಾಯವಿದೆ. ಆದಷ್ಟು ಅವಳನ್ನು ಕ್ಷೇಮವಾಗಿ ನೋಡಿಕೊಳ್ಳಬೇಕು. ನಿಮ್ಮ ತಂದೆಯ ಮನೆಯವರು ಏನಂತಾರೋ, ಅವರಿಗೆ ಏನೂ ಗೊತ್ತಾಗಬಾರದು.''

"ನಾನು ಅದಕ್ಕೆಲ್ಲ ತಕ್ಕ ಏರ್ಪಾಟು ಮಾಡ್ತೀನಿ. ಆದಷ್ಟು ಬೇಗ ಅವಳನ್ನು ಡಿಸ್ಚಾರ್ಜ್ ಮಾಡಿಸಿ, ಅಲ್ಲಿಗೆ ಕರೆದುಕೊಂಡು ಹೋಗಿ ಬಿಟ್ಟು ಬರೋಣ" ಇಬ್ಬರೂ ನರ್ಸಿಂಗ್ ಹೋಂಗೆ ಬಂದರು.

ಮಧುಕರ ಡಾಕ್ಟರ್ ಹತ್ತಿರ ಮಾತನಾಡಿ, ಬಿಲ್ ಸೆಟ್ಲ್ ಮಾಡುವಾಗ ಮಾಲಾ ವಸುಧಾಳನ್ನು ಕೇಳಿದಳು. "ಭಾಸ್ಕರ ಬಾಂಬೆಗೆ ಹೊರಟುಹೋದ್ರಾ? ನನ್ನನ್ನ ಕೇಳಿಕೊಂಡು ಫೋನ್ ಮಾಡಿದ್ರಾ? ನಾನು ಅವರ ಹತ್ತಿರ ಮಾತನಾಡಬೇಕು."

"ಇಲ್ಲ, ಅವರು ನಂಜನಗೂಡಿಗೆ ಹೋಗಿರಬಹುದು. ಕೇಳಿದ್ರೆ ಹೇಳ್ತೀನಿ. ಆದರೆ, ಈಗ ಸೀದಾ ನಮ್ಮ ತಾಯಿಯ ಮನೆಗೆ ಹೋಗೋಣ. ಅಲ್ಲಿ ನೀನು ಕ್ಷೇಮವಾಗಿರ ಬಹುದು... ನಿನಗೆ, ನಿನ್ನ ಮಗುವಿಗೆ ಅಪಾಯವಿದೆ"

"ಯಾಕೆ? ನಮ್ಮ ಮನೇಲಿ ನನಗೆ ಏನು ಅಪಾಯ?"

"ಮಧೂಗೆ ನೀನು ಪ್ರೆಗ್ನೆಂಟ್ ಅಂತ ಗೊತ್ತಾಗಿ ಅಪ್ಸೆಟ್ ಆಗಿದಾರೆ... ನಾನು ನನ್ನ ಕಹಿ ಅನುಭವವನ್ನು ಇನ್ನೂ ಮರೆತಿಲ್ಲ. ಆ ಮನೇಲಿ, ಭಟ್ಟರು, ಭಾರ್ಗವ, ಎಲ್ಲಾನೊಂದು ಕೊಂಡಿದಾರೆ. ಅಲ್ಲದೇ ಜ್ಯೋತಿಷಿಗಳು ಮಗುವಿಗೆ ಅಪಾಯವಿದೆ ಅಂತ ಹೇಳಿದಾರಲ್ಲ, ನನಗೆ ಆತಂಕವಾಗುತ್ತದೆ. ಸುಂದರವಾದ, ಆರೋಗ್ಯವಂತ ಮಗು ನಿನಗೆ ಹುಟ್ಟಲಿ ಅಂತ ನನಗೆ ಆಸೆ. ಅಲ್ಲಿಯವರೆಗೂ ನೀನು ನನ್ನ ತಾಯಿಯ ಮನೆಯಲ್ಲಿರು."

"ನೀನು ಹೇಳ್ತಿದೀಯ ಅಂತ ನಾನು ಅಲ್ಲಿ ಇರ್ತೀನಿ. ಆದರೆ ನಿನ್ನ ಆತಂಕ ನನಗೆ ಅರ್ಥವಾಗುತ್ತಿಲ್ಲ, ಸುಮ್ಮನೇ ಆತಂಕ ಪಡ್ತೀಯ ಅಷ್ಟೇ..."

"ನಿಧಾನವಾಗಿ ಎಲ್ಲಾ ಹೇಳ್ತೀನಿ ಬಾ..." ಎಂದು ನಿಧಾನವಾಗಿ ಕಾರಿನ ಬಳಿಗೆ ಕರೆದೊಯ್ದಳು. ತಾಯಿಯ ಮನೆಯಲ್ಲಿ ಅವಳನ್ನು ಬಿಟ್ಟು ಹೊರಟಳು.

"ಥ್ಯಾಂಕ್ಸ್ ಕಣೇ ವಸುಧಾ... ನೋಡು ಎಂಥಾ ವಿಚಿತ್ರ... ನಿನ್ನ ಮನೆಯಲ್ಲಿ ನಾನಿದೀನಿ. ನನ್ನ ಮನೆಯಲ್ಲಿ ನೀನಿದೀಯ" ನಕ್ಕಳು.

"ನನಗೆ ಒಬ್ಬ ಅಣ್ಣ ಇದ್ದಿದ್ದರೆ ಬಲವಂತ ಮಾಡಿ ನಿನ್ನನ್ನು ಬಲವಂತವಾಗಿ ಅವನಿಗೆ ಕಟ್ಟಿರುತ್ತಿದ್ದೆ."

"ಸಾಕಮ್ಮಾ ಸಾಕು... ನಿನ್ನ ಅಣ್ಣನ ಜೊತೆ ನಾನು ಸಂಸಾರ ಮಾಡೋಕೆ ಖಂಡಿತಾ ಆಗುತ್ತಿರಲಿಲ್ಲ, ನಿನಗೆ ಅಣ್ಣ ಇಲ್ಲದುದು ಒಳ್ಳೇದೇ ಆಯ್ತು. ನನ್ನ ನಿನ್ನ ಸ್ನೇಹ ಉಳಿಯಿತು."

"ಓ.ಕೇ. ಇಂದಿನಿಂದ ಡೆಲಿವರಿಯಾಗುವವರೆಗೆ ನಿನಗೆ ಯಾವ ಚಿಂತೆಯೂ ಬೇಡ. ಹೊತ್ತು ಹೊತ್ತಿಗೆ ಊಟ, ತಿಂಡಿ, ನಿದ್ದೆ, ಔಷಧ, ಪಥ್ಯ ಅಷ್ಟು ಸಾಕು. ಒಳ್ಳೆಯ ಕತೆಪುಸ್ತಕಗಳನ್ನು ಓದು, ಟಿ.ವಿ. ನೋಡು, ಹಾಡುಗಳನ್ನು ಕೇಳು..."

"ಹೋಂಅರೆಸ್ಟ್ ಅನ್ನು" ಮತ್ತೆ ನಕ್ಕಳು. "ಆದರೆ ನೀನ್ಯಾಕೆ ಇಷ್ಟು ಕೇರ್ ತಗೋತಿ ದೀಯ ಅಂತ ನನಗೆ ಅರ್ಥವಾಗುತ್ತಿಲ್ಲ."

''ನಿಧಾನವಾಗಿ ಎಲ್ಲಾ ಅರ್ಥವಾಗುತ್ತೆ. ತಲೆಕೆಡಿಸಿಕೊಳ್ಳಬೇಡ'' ವಿಶ್ವಾಸದಿಂದ ಅವಳ ಕೆನ್ನೆ ಸವರಿದಳು. ಮಾಲಾಳ ಕಣ್ಣುಗಳು ತೇವಗೊಂಡವು.

* * * *

ಮಧುಕರ ಕೊಟ್ಟ ಅವಧಿಗೆ ಮುನ್ನವೇ ಭಾಸ್ಕರ ಅವನನ್ನು ಭೇಟಿಯಾದ. ಕೈಯಲ್ಲಿ ಒಂದು ಕವರ್ ಇತ್ತು. ''ಇದು ನನ್ನ ರೆಸಿಗ್ನೇಷನ್ ಲೆಟರ್'' ಎಂದು ಹೇಳಿದ ನಮ್ರತೆಯಿಂದ. ಮಧು ಅದನ್ನೇ ತಿರುಗಿಸಿ ತಿರುಗಿಸಿ ನೋಡಿದ. 'ಕೂತ್ಕೋ' ಎನ್ನುವಂತೆ ಕೈ ಸನ್ನೆ ಮಾಡಿದ. ಭಾಸ್ಕರ ಕುಳಿತ.

''ಬೇರೆ ಕಡೆ ಎಲ್ಲಾದ್ರೂ ಕೆಲಸ ಸಿಕ್ಕಿದೆಯಾ?'' ಕೇಳಿದ.

''ಇಷ್ಟು ಬೇಗ ಎಲ್ಲಿ ಸಿಗುತ್ತೆ...?''

''ನಿಮ್ಮ ಮನೇಲಿ ನೀವೊಬ್ರೇ ಸಂಪಾದನೆ ಮಾಡ್ತಾ ಇರೋದು. ಅಮ್ಮ, ಅಕ್ಕ, ಹೆಂಡತಿ ಎಲ್ಲಾ ನಿಮ್ಮ ಮೇಲೆ ಅವಲಂಬಿಗಳಾಗಿದ್ದಾರೆ... ಕಷ್ಟ ಆಗೊಲ್ವ?''

''ಕಷ್ಟ ಆಗುತ್ತೆ. ಆದರೆ ವಿಧಿ ಇಲ್ಲ. ನಾನು ಮಾಲಾರವರನ್ನು ಮದುವೆಯಾಗಲು ನಮ್ಮ ಮನೆಯವರು ಖಂಡಿತಾ ಒಪ್ಪಲ್ಲ. ಅವರುಗಳಿಗೆ ಅನ್ಯಾಯ ಮಾಡಲಾರೆ.''

''ಇದರಿಂದ ಮಾಲಾಳಿಗೆ, ಅವಳ ಮಗುವಿಗೆ ಅನ್ಯಾಯವಾಗಲ್ವಾ?''

''ಅವರೆಂದೂ, ನನ್ನನ್ನು ಮದುವೆಯಾಗುವ ಆಸೆಯನ್ನು ವ್ಯಕ್ತಪಡಿಸಿರಲಿಲ್ಲ. ಅವರು ಕೇವಲ... ನನ್ನನ್ನು ತಮ್ಮ ಸುಖಕ್ಕಾಗಿ ಬಳಸಿಕೊಂಡರು... ಅಷ್ಟೇ ಬೇಕಾಗಿದ್ದುದು.''

''ಓ..ಕೇ. ಇದನ್ನೆಲ್ಲಾ ಯೋಚಿಸಿರಲಿಲ್ವಾ! ಏನೂ ಪ್ರಾಮಿಸ್ ಮಾಡಿರಲಿಲ್ವಾ!''

''ಅವರಿಗೆ ಸದಾಕಾಲ ನನ್ನ ಕಂಪೆನಿ ಕೊಡ್ತೀನಿ ಅಂತ ಹೇಳಿದ್ದೆ. ಹಾಗಾಗಿ ಬಾಂಬೆಗೆ, ಧ್ರುವನ ಮನೆಗೆ ಬಂದು ಇರುವಂತೆ ಸಹ ಹೇಳಿದ್ದೆ.''

''ಮಾಲಾ ಇದಕ್ಕೆ ಒಪ್ಪಿದ್ದಳಾ?'' ಆಶ್ಚರ್ಯದಿಂದ ಕೇಳಿದ.

''ಇಲ್ಲ, ಅವರು ಧ್ರುವನ ಹೆಂಡತಿಯಾಗಿ ಅಲ್ಲಿ ಇರಲ್ಲ ಅಂತ ಖಂಡಿತವಾಗಿ ಹೇಳಿಬಿಟ್ಟಿದ್ದರು. ನನ್ನ ಸಲಹೆಗೆ ಒಪ್ಪಲಿಲ್ಲ.''

''ಆದರೂ ನೀವು ಬಾಂಬೆಗೆ ಹೋಗಲು ರೆಡಿಯಾಗಿದ್ದಿರಿ ಅಲ್ವಾ. ಯಾಕೆ?''

''ಹೊಟ್ಟೆಪಾಡು. ಈಗ್ತಾನೆ ನೀವೇ ಹೇಳಿದ್ರಲ್ಲ, ನನ್ನನ್ನೇ ಅವಲಂಬಿಸಿರುವ ಮೂರು ಜನ ಹೆಂಗಸರಿಗೆ ಅನ್ಯಾಯವಾಗಬಾರದು ಅಲ್ವಾ?...''

''ಆದರೆ ಈಗ ಅನ್ಯಾಯ ಮಾಡೋಕೆ ರೆಡಿಯಾಗಿದೀರಲ್ಲ...''

''ವಿಧಿ ಇಲ್ಲ. ನೀವು ನನ್ನನ್ನು ಕೆಲಸದಿಂದ ತೆಗೆದುಹಾಕುವ ಮೊದಲು, ನಾನೇ ಇಲ್ಲಿಂದ ಹೊರಟುಹೋಗೋಣ ಅಂತ ಅನ್ನಿಸ್ತು...''

"ಈಗ ನೀವು ಹೋಗಲಿಲ್ಲ ಅಂತಂದ್ರೆ, ನಾನಾ ಪ್ರಶ್ನೆಗಳು ಏಳುತ್ತಲ್ಲ ಅದಕ್ಕೆ ಏನು ಉತ್ತರ ಹೇಳ್ತೀರಿ."

"ನೀವೇನೂ ಹೆದರಬೇಡಿ ಸಾರ್. ಮಾಲಾ ಮೇಡಂಗೆ ಕೆಟ್ಟ ಹೆಸರು ತರುವಂತೆ ನಾನು ಯಾವ ಕೆಲಸವನ್ನೂ ಮಾಡುವುದಿಲ್ಲ. ಖಂಡಿತಾ"

"ಥ್ಯಾಂಕ್ ಯೂ... ಆದರೆ ನಾನು ಈ ರೆಸಿಗ್ನೇಷನ್‌ನ್ನು ಅಕ್ಸೆಪ್ಟ್ ಮಾಡಿಕೊಳಲ್ಲ. ನಿಮ್ಮ ಪಾಡಿಗೆ ನೀವು ಹೋಗಿ. ಮಾಲಾಳಿಂದ ನಿಮಗೆ ತೊಂದರೆ ಬಂತು ಅನ್ನೋ ಅಪವಾದ ಬೇಡ... ಧ್ರುವ ನನ್ನ ಬಿಸಿನೆಸ್ ಪಾರ್ಟನರ್... ಈಗ ಈ ಮಗುವಿಗೆ ತಂದೆ ಯಾಗುವುದಕ್ಕೂ ಸಿದ್ಧನಿದ್ದಾನೆ. ಎಲ್ಲಾ ಚಾಪ್ಟರ್‌ನ್ನೂ ಇಲ್ಲಿಗೇ ಕ್ಲೋಸ್ ಮಾಡೋಣ..." ಎನ್ನುತ್ತಾ ಆ ಕವರನ್ನು ಹರಿದುಹಾಕಿದ.

"ನೀವಿನ್ನು ಹೋಗಿ ಭಾಸ್ಕರ್... ನಿಮ್ಮ ತಾಯಿ, ನನ್ನ ತಾಯಿ ಇದ್ದ ಹಾಗೆ. ಅವರ ಮನಸ್ಸಿಗೆ ನೋವನ್ನುಂಟು ಮಾಡುವ ಇಚ್ಛೆ ನನಗಿಲ್ಲ. ಹಾಗೇ ಮಾಲಾಳಿಂದ ಮತ್ತೆ ನಿಮಗೆ ಸ್ನೇಹದ ಕರೆ ಬರದಂತೆ ನಾನು ನೋಡಿಕೊಳ್ಳುತ್ತೇನೆ."

"ನಾನು ಕಡೆಯಬಾರಿ ಅವರನ್ನೊಮ್ಮೆ ನೋಡಿ ಅವರೊಡನೆ ಮಾತನಾಡ ಬೇಕು."

"ಸದ್ಯಕ್ಕೆ ಬೇಡ. ಮಾಲಾ ಅಪೇಕ್ಷೆ ಪಟ್ಟರೆ, ನಾನು ತಿಳಿಸುತ್ತೇನೆ. ನೀವಿನ್ನು ಹೋಗಬಹುದು." ಭಾಸ್ಕರ ಥ್ಯಾಂಕ್ಸ್ ಸಹ ಹೇಳದೇ ನಿರ್ಗಮಿಸಿದುದನ್ನು ಮಧುಕರ ಗಮನಿಸಿದ. ಮನಸ್ಸು ಮುದುಡಿ ಹೋಗಿತ್ತು. ಮಾಲಾಳ ಮೇಲೆ ಬಂದಿದ್ದ ಕೋಪವನ್ನು ನುಂಗಿಕೊಂಡ.

* * * *

ಭಾಸ್ಕರನಿಗಾಗಲೀ, ಧ್ರುವನಿಗಾಗಲೀ ಮಾಲಾಳೊಡನೆ ಮಾತನಾಡುವ ಅವಕಾಶವನ್ನು ಮಧು ಬೇಕೆಂತಲೇ ಮಾಡಿಕೊಡಲಿಲ್ಲ. ಮನೆಗೆ ಫೋನು ಮಾಡಿದರೆ, ಅವಳು ಮನೆಯಲ್ಲಿಲ್ಲವೆಂದೇ ಉತ್ತರ ಬರುತ್ತಿತ್ತು. ಅವಳೆಲ್ಲಿಗೆ ಹೋಗಿರಬಹುದು? ಬೇಕೆಂತಲೇ ನನ್ನನ್ನು ದೂರ ಮಾಡಿದ್ದಾರೆ ಎಂದು ಭಾಸ್ಕರನಿಗೆ ಅರ್ಥವಾಗಿತ್ತು. ಒಂಥರಕ್ಕೆ ಒಳ್ಳೆಯದೇ ಆಯಿತು. ಮಾಲಾಳನ್ನು ಕಂಡೊಡನೆ, ನನ್ನ ಮನದಲ್ಲಿ ಏನೇನು ಭಾವನೆಗಳು ಉಕ್ಕಿ ಬಿಡುತ್ತವೋ... ಮತ್ತೆ ಅವಳ ಪ್ರೀತಿಗೆ ಮಣಿಯಬೇಕಾದ ಸ್ಥಿತಿ ಒದಗಿದರೆ? ಈ ನಂಟು ತಾನಾಗಿಯೇ ಕಳೆಯುವ ಅವಕಾಶ ಒದಗಿದೆ... ಎಂದು ತನಗೆ ತಾನೇ ಹೇಳಿಕೊಂಡು ಸಮಾಧಾನ ಮಾಡಿಕೊಂಡ. ಈ ಬಾರಿ ಅವನು ನಂಜನಗೂಡಿಗೆ ಹೋದಾಗ ಅವನಿಗೆ ಸಿಹಿಸುದ್ದಿ ಕಾದಿತ್ತು. ಭಾರತಿ ತಾಯಿಯಾಗಲಿದ್ದಳು!

ಈ ಸುದ್ದಿಯಿಂದ ಭಾಸ್ಕರನೇನೂ ಕುಣಿದಾಡಲಿಲ್ಲ. ಆ ರಾತ್ರಿಯ ನೆನಪಾಗಿತ್ತು. ತಾನು ಅನಿರೀಕ್ಷಿತವಾಗಿ ಹೆಂಡತಿಯ ಮೇಲೆ ಎಸಗಿದ ಅತ್ಯಾಚಾರವನ್ನು ನೆನೆಪಿಸಿಕೊಂಡ.

ತನ್ನ ಮೇಲೆ ಜಿಗುಪ್ಸೆ ಉಂಟಾಯಿತು. ಪ್ರೀತಿಯಿಂದ ಅವಳೊಡನೆ ನಡೆದುಕೊಂಡಿರಲಿಲ್ಲ. ಆದರೂ ಪರಿಣಾಮ ಮಾತ್ರ ಅದೇ... ಮಾಲಾಳ ಮೇಲೆ ಪ್ರೀತಿಯ ಪೂರವನ್ನೇ ಹರಿಸಿದ್ದ. ಅವಳೂ ಗರ್ಭಿಣಿ! ಭಾರತಿಯನ್ನು ಬಲಾತ್ಕಾರದಿಂದ ತನ್ನ ವಶ ಮಾಡಿಕೊಂಡಿದ್ದ. ಈಗ ಇವಳೂ ಗರ್ಭಿಣಿ!! ಆದರೆ ಮಾಲಾಳ ಮಗುವಿಗೆ ತಾನು ತಂದೆಯೆಂದು ಘಂಟಾ ಘೋಷವಾಗಿ ಹೇಳಿಕೊಳ್ಳುವ ಹಕ್ಕೂ ಇಲ್ಲ, ಧೈರ್ಯವೂ ಇಲ್ಲ. ಆದರೆ ತನ್ನ ಅತ್ಯಾಚಾರಕ್ಕೆ ಹುಟ್ಟುತ್ತಿರುವ ಮಗುವಿಗೆ ನಾನು ತಂದೆ!!! ಮುಂದೆ ಆ ಮಗುವಿಗೆ ತನ್ನ ತಂದೆ ಧ್ರುವನಲ್ಲ ಭಾಸ್ಕರ ಎಂದು ತಿಳಿದರೆ ಏನನ್ನಿಸಬಹುದು? ಈ ಮಗುವಿಗೆ, ತನ್ನ ತಾಯಿಯ ಮೇಲೆ ತಂದೆ ನಡೆಸಿದ ಅತ್ಯಾಚಾರಕ್ಕೆ ತಾನು ಈ ಭೂಮಿಗೆ ಬಂದೆ ಅಂತ ಅನ್ನಿಸಿದರೆ ಏನನ್ನಿಸ ಬಹುದು. ಒಟ್ಟಿಗೇ ಎರಡೆರಡು ಮಕ್ಕಳು ಹುಟ್ಟುವ ಸುದ್ದಿ ತನಗೆ ತಿಳಿದರೂ ತನಗೆ ಸಂತೋಷವಾಗುತ್ತಿಲ್ಲವಲ್ಲ, ಎರಡು ಕೃತ್ಯವೂ ಅಪರಾಧವೇ. ಒಂದು ಜನರ ಕಣ್ಣಲ್ಲಿ, ಇನ್ನೊಂದು ನನ್ನ ಕಣ್ಣಲ್ಲಿ. ತಾಯಿ ಹಾಗೂ ಅಕ್ಕ ಮಾತನಾಡಿಕೊಳ್ಳುತ್ತಿದ್ದುದು ಅವನ ಕಿವಿಗೆ ಬಿತ್ತು.

''ನಿನ್ನ ಮಗಳಿಗೆ ಬಯಕೆಯ ಸಂಕಟ. ಅದೇನೇನು ಇಷ್ಟ ಪಡುತ್ತೋ ಅದನ್ನೆಲ್ಲ ಮಾಡಿಕೊಡು... ತಿನ್ನಲಿ. ಹಾಗೇ ಏನು ಕೇಳುತ್ತೋ ಅದನ್ನು ತಂದುಕೊಡು ಎಂದು ಭಾಸ್ಕರನಿಗೆ ಹೇಳಬೇಕು. ಯಾವುದಕ್ಕೂ ಕೊರತೆ ಆಗಬಾರದು. ಆಗ ಆರೋಗ್ಯವಾದ ಮಗು ಹುಟ್ಟುತ್ತೆ. ದೇವರು ಕಣ್ಣುಬಿಟ್ಟಾಗ ಒಳ್ಳೆಯ ಫಲವನ್ನೇ ಪಡೆಯಬೇಕು.''

ತಕ್ಷಣವೇ ಅವನಿಗೆ ಮಾಲಾಳ ನೆನಪಾಗಿತ್ತು. ಹೊರಗೆ ಟೆಲಿಫೋನಿನ ಬೂತ್‌ಗೆ ಬಂದು, ಬೆಂಗಳೂರಿಗೆ ಫೋನು ಮಾಡಿದ. ವಸುಧಾ ತೆಗೆದುಕೊಂಡಳು.

''ನಾನು ಭಾಸ್ಕರ್, ಮಾಲಾ ಇದಾರಾ? ನಾನು ಮಾತ್ನಾಡಬೇಕು'' ಎಂದ.

''ಇಲ್ಲ, ಅವಳು ಇಲ್ಲಿಲ್ಲ, ಏನಾದ್ರೂ ಹೇಳಬೇಕಾ?''

''ಹೇಳಬೇಕಾಗಿತ್ತು. ಆದರೆ ವೆರಿ ಪರ್ಸನಲ್... ನಾನು ಖುದ್ದಾಗಿ ಹೇಳಬೇಕು.''

''ಈಗ ಅವಳು ಬೇರೆ ಕಡೆ ಇದಾಳೆ. ನನಗೆ ಹೇಳೋದಾದ್ರೆ ಹೇಳಿ ನಾನು ಮೆಸೇಜ್ ಕೊಡ್ತೀನಿ.'' ಭಾಸ್ಕರ್ ತಡವರಿಸಿದ. ಆದರೆ ತನ್ನ ಮನದಲ್ಲಿದ್ದುದನ್ನು ಹೇಳಲೇ ಬೇಕಾಗಿತ್ತು.

''ಮಾಲಾ ಅವರಿಗೆ ಏನು ಇಷ್ಟವೋ ಆ ಇಷ್ಟವನ್ನೆಲ್ಲಾ ಪೂರೈಸಿ ಆಗ ಆರೋಗ್ಯವಂತ ಮಗು ಹುಟ್ಟುತ್ತಂತೆ.'' ವಸುಧಾ ನಕ್ಕಳು.

''ಹಾಗಂತ ನಿಮಗೆ ಯಾರು ಹೇಳಿದರು?''

''ನಮ್ಮ ತಾಯಿ, ಅಕ್ಕನಿಗೆ ಹೇಳುತ್ತಿದ್ದರು..''

''ಮಾಲಾ ಪ್ರೆಗ್ನೆಂಟ್ ಅಂತ [illegible]ಯಿಗೆ ನೀವು ಹೇಳಿಬಿಟ್ರಾ?''

''ಇಲ್ಲ... ನನ್ನ ಮಿಸೆಸ್ [illegible] ಆಲ್ಸೋ ಕ್ಯಾರಿಯಿಂಗ್...''

''ಓ...'' ವಸುಧಾ ಒಂದು ಗಳಿಗೆ ನಿಧಾನವಾಗಿ ಕಂಗ್ರಾಟ್ಸ್ ಎಂದಳು. ''ಆದ[illegible]

ಈ ವಿಷಯವನ್ನು ಮಾಲಾ ಮೇಡಂಗೆ ಹೇಳಬೇಡಿ. ಅವರ ಮನಸ್ಸಿಗೆ ನೋವಾಗ ಬಹುದು. ಇದು ಒಂದು ಆಕ್ಸಿಡೆಂಟ್... ಒಂದು ಅಚಾತುರ್ಯ...''

''ನಿಮ್ಮ ಹೆಂಡತಿಗೆ ಬೇಸರವೇನೂ ಇಲ್ಲ ತಾನೇ ಇದರಿಂದ?''

''ಇಲ್ಲ, ಅವಳು ಸ್ವಲ್ಪ ಇನ್ನೋಸೆಂಟ್... ಹುಟ್ಟುವ ಮೊದಲೇ ತಂದೆಯನ್ನು ಕಳೆದು ಕೊಂಡಳು. ನಾನು ಅಂದ್ರೆ ಸ್ವಲ್ಪ ಭಯ...''

''ಅಂಥೋಳಿಗೆ ದ್ರೋಹ ಮಾಡಿದೆ ಅಂತ ಅನ್ನಿಸಲಿಲ್ವಾ ನಿಮಗೆ?''

''ನಾನು ಇಬ್ಬರಿಗೂ ದ್ರೋಹ ಮಾಡಿಬಿಟ್ಟೆ. ನಾನು ಅವಿವೇಕಿಯಾಗಿಬಿಟ್ಟೆ. ಆದರೆ ಇನ್ನು ಮುಂದೆ ಆದಷ್ಟೂ ಪ್ರಾಮಾಣಿಕನಾಗಿ ಇರಲು ಪ್ರಯತ್ನಿಸುತ್ತೇನೆ. ಆದರೆ ಇನ್ನು ಮುಂದೆ ನನ್ನ ಹೆಂಡತಿಯ ಸಂಗವನ್ನು ಬಯಸುವುದಿಲ್ಲ. ನಾನು ಮಾಲಾ ಮೇಡಂಗೂ ನೋವನ್ನುಂಟುಮಾಡಲಿಚ್ಛಿಸುವುದಿಲ್ಲ.''

ವಸುಧಾ ಏನು ಹೇಳಿಯಾಳು. ಸುಮ್ಮನಾಗಿ ಬಿಟ್ಟಳು.

* * * *

ಪ್ರತಾಪ ಒಬ್ಬ ಡಿಟೆಕ್ಟಿವ್ ಏಜೆಂಟ್‌ನ ಮುಖಾಂತರ ಮಾಲಾ ಎಲ್ಲಿದ್ದಾಳೆ ಎನ್ನುವು ದನ್ನು ಪತ್ತೆ ಹಚ್ಚಿ ಧ್ರುವನೊಂದಿಗೆ ಅವಳಿದ್ದ ಮನೆಗೆ ಬಂದ. ಅದೇ ಸಮಯದಲ್ಲಿ ವಸುಧಾ ಸಹ ಇದ್ದಳು.

''ನೀವ್ಯಾಕೆ ಇಲ್ಲಿಗೆ ಬಂದ್ರಿ?'' ಅಸಹನೆಯಿಂದ ಕೇಳಿದಳು.

''ನಾನು ಮಾಲಾಳ ಹತ್ತಿರ ಮಾತನಾಡಬೇಕು...'' ಪ್ರತಾಪ ಹೇಳಿದಾಗ ವಸುಧಾ ನಿರಾಕರಿಸಿದಳು.

''ಧ್ರುವನಿಗೆ ಮಾತ್ರ ಪರ್ಮಿಷನ್ ಕೊಡ್ತೀನಿ. ನಿಮಗೂ ಅವಳಿಗೂ ಏನು ಸಂಬಂಧ ವಿಲ್ಲವಲ್ಲ.''

''ನಾವು ಪೋಲಿಸ್ ಕಂಪ್ಲೇಂಟ್ ಕೊಡಬೇಕಾಗುತ್ತದೆ ಅಷ್ಟೇ...''

''ಕೊಡಿ... ನೀವು ಕಿಡ್ನಾಪ್ ಮಾಡೋಕೆ ಬಂದಿದೀರಿ ಅಂತ ನಾವೂ ನಿಮ್ಮನ್ನು ಅರೆಸ್ಟ್ ಮಾಡಿಸ್ತೀವಿ''

''ಗುಡ್ ಐಡಿಯಾ... ಕಿಡ್ನಾಪ್ ಮಾಡಬಹುದು ಎಂದು ನಮಗೆ ಹೊಳೆದಿರಲೇ ಇಲ್ಲ. ಥ್ಯಾಂಕ್ಯೂ ಥ್ಯಾಂಕ್ ಯೂ ಸೋ ಮಚ್'' ಧ್ರುವನ ಕಡೆ ತಿರುಗಿ ನೋಡಿದ.

''ಧ್ರುವ ಅದೇನು ಮಾತನಾಡಬೇಕೋ ಮಾತು ಮುಗಿಸಿ ಆದಷ್ಟು ಬೇಗ ಹೊರಡಿ... ಮಧುಗೆ ಗೊತ್ತಾದ್ರೆ, ನಿಮ್ಮ ಸ್ನೇಹಿತ ಏನ್ಮಾಡ್ತಾರೋ ನನಗೆ ಗೊತ್ತಿಲ್ಲ...''

ಧ್ರುವ ಪ್ರತಾಪನನ್ನು ಹೊರಗೆ ನಿಲ್ಲಿಸಿ ತಾನು ಮಾಲಾಳಿದ್ದ ರೂಮಿಗೆ ಬಂದ. ಆತನನ್ನು ಕಂಡ ಕೂಡಲೇ ಮಾಲಾ ಹಾವನ್ನು ಮೆಟ್ಟಿದವಳಂತೆ ಬೆಚ್ಚಿಬಿದ್ದಳು.

"ಹಲೋ ಮಾಲಾ... ಕಂಗ್ರಾಟ್ಸ್" ಎಂದು ಹಲ್ಲು ಕಿರಿದ.

"ನೀವ್ಯಾಕೆ ಬಂದಿದೀರಿ ? ಹೋಗಿ" ಎಂದು ಜೋರಾಗಿ ನುಡಿದು ಹಿಂದು ಹಿಂದಕೆ ಸರಿದಳು. ಧ್ರುವ ನಕ್ಕು ಅವಳ ಹತ್ತಿರ ಹತ್ತಿರಕ್ಕೆ ಬಂದ.

"ನಿನಗೂ ನನ್ನನ್ನು ಕಂಡರೆ ಭಯ ಅಂತ ನನಗೆ ಗೊತ್ತಿರಲಿಲ್ಲ."

"ಮುಟ್ಟಬೇಡಿ ನನ್ನನ್ನ... ನೀವು ಮುಟ್ಟಿದರೆ ನಾನು ಸುಮ್ಮನಿರಲ್ಲ..."

"ನಾನು ಮುಟ್ಟದೇ ನೀನು ಹೇಗೆ ಪ್ರೆಗ್ನೆಂಟ್ ಆದೆ...?" ಚುಚ್ಚಿ ಕೇಳಿದ.

"ಇದು ನಿಮ್ಮ ಮಗುವಲ್ಲ..." ಅವಳೂ ಅಂಜದೇ ನುಡಿದಳು.

"ಹಾಗಾದ್ರೆ ಯಾರ ಮಗು? ನೀನೇ ಹೇಳಿಬಿಡು."

"ನಾನು ಹೇಳಲ್ಲ.. ಅದರ ಅಗತ್ಯವಿಲ್ಲ..."

"ನಾನು ಹೇಳ್ತೀನಿ. ನನಗೆ ಗೊತ್ತು, ಭಾರ್ಗವನ ಮಗು. ನಿಜ ತಾನೇ..." ಮಾಲಾ ಸುಮ್ಮನಾಗಿಬಿಟ್ಟಳು.

"ನೋಡಿದ್ಯಾ ನಿನ್ನ ಪ್ರಿಯಕರನ ಹೆಸರನ್ನು ಕೇಳಿದ ಕೂಡಲೇ ಹೇಗೆ ಸುಮ್ಮನಾಗಿಬಿಟ್ಟೆ...? ಎನಿವೇ... ಅಂತೂ ನನಗೆ ಕೈಕೊಟ್ಟೆ.. ಭಾರ್ಗವನಿಗೆ ಈ ಸುಂದರ ವಾದ ಮೈಯನ್ನು ಕೊಟ್ಟೆ... ಎಷ್ಟು ವರ್ಷಗಳಿಂದ ನಡೆಯುತ್ತಿತ್ತು ಈ ವ್ಯವಹಾರ?"

"ನೀವು ಹೀಗೆಲ್ಲಾ ಮಾತ್ನಾಡಿದರೆ ನಾನು ಸುಮ್ಮನಿರೋಲ್ಲ.. ಪೋಲಿಸರನ್ನ ಕರೆಸ್ತೀನಿ. ಸುಮ್ಮನೇ ಹೋಗಿ"

"ಕರೆಸು, ಕರೆಸು, ನಾನೀಗ ಯಾವುದಕ್ಕೂ ಹೆದರೋಲ್ಲ. ಈಗ ನನ್ನನ್ನ ಕಂಡರೆ ಹೆದರಿ ಓಡ್ತಾರೆ... ಎಲ್ಲರೂ..." ಮತ್ತೆ ಮತ್ತೆ ನಕ್ಕ.

"ಪ್ಲೀಸ್, ನೀವು ಹೋಗಿ, ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ."

"ಓ.ಕೇ. ಒಂದು ಕಂಡೀಷನ್ನು. ಈ ಮಗುವನ್ನು ನನಗೆ ಕೊಡಬೇಕು."

"ನಾನ್ಯಾಕೆ ಕೊಡಬೇಕು! ನಿಮ್ಮದಲ್ಲವಲ್ಲ... ನಿಮಗೆ ಯಾಕೆ ಬೇಕು?"

"ನೀನೂ ನನ್ನವಳಾಗಲಿಲ್ಲ. ನಿನ್ನ ಮಗುವನ್ನಾದರೂ ನನಗೆ ಕೊಡು. ನಿನಗೆ ಇನ್ನೂ ಯೌವನವಿದೆ. ಇನ್ನೂ ನಾಲ್ಕು ಮಕ್ಕಳಾಗುತ್ತವೆ. ನಾನೇ ಅನ್‌ಫಾರ್ಚುನೇಟ್..."

"ಹೀಗೆಲ್ಲಾ ಕೊಳಕುಮಾತುಗಳನ್ನಾಡಬೇಡಿ. ದಯವಿಟ್ಟು ಹೊರಟುಹೋಗಿ."

"ನೀನು ಮಾಡಿರುವುದು ಕೊಳಕು ಕೆಲಸ ಅಲ್ವಾ ಮಾಲಾ..."

"ಇಲ್ಲ, ನಾನು ನನ್ನ ಸ್ವಂತ ಇಷ್ಟದಿಂದ ಮಾಡಿರುವುದು. ಇದಕ್ಕೆ ನಿಮ್ಮ ಪರ್ಮಿಷನ್ ಏನೂ ಬೇಕಿರಲಿಲ್ಲ. ಇದು ನನ್ನ ಪರ್ಸನಲ್ ವಿಷಯ. ಇದರಲ್ಲಿ ತಲೆ ಹಾಕಬೇಡಿ."

"ಭಾರ್ಗವನಿಗೆ ಜಾಮೀನು ಬೇಕಾದಾಗ ನನ್ನ ಅಗತ್ಯವಿತ್ತು. ಆಮೇಲೆ ನಾನು ಬೇಡವಾದೆ ಅಲ್ವಾ? ನಾನು ನಿನ್ನ ಕೋಮಲವಾದ ದೇಹಕ್ಕೆ ಹಿಂಸೆ ಕೊಡಲು ಇಷ್ಟವಿಲ್ಲದೇ

ಸುಮ್ಮನಿದ್ದೆ. ನಿನ್ನನ್ನ ರೇಪ್ ಮಾಡಬೇಕಾಗಿತ್ತು. ಆಗ ನಿನಗೆ ಬುದ್ಧಿ ಬರುತ್ತಿತ್ತು... ಜೊತೆಗೆ ಇನ್ನೂ ಒಂದು ಉಡುಗೊರೆ ಕೊಡ್ತಿದ್ದೆ... ನನ್ನ ತರಹ ನೀನೂ ಇಡೀ ಜೀವನ ಏಡ್ಸ್‌ನಿಂದ ನರಳುತ್ತಿದ್ದೆ. ನಾನು ನಿನಗೆ ತೊಂದರೆ ಕೊಟ್ಟಿಲ್ಲ... ನನ್ನ ಒಳ್ಳೆಯತನಕ್ಕೆ ನೀನು ಥ್ಯಾಂಕ್ಸ್ ಹೇಳಬೇಕು. ಬೇಡ ಬಿಡು, ಆ ಥ್ಯಾಂಕ್ಸ್‌ನಿಂದ ಈಗ ನನಗೇನೂ ಲಾಭವಿಲ್ಲ... ಬದಲಿಗೆ ಈ ಮಗುವನ್ನು ಕೊಟ್ಟುಬಿಡು'' ಮಾಲಾ ಅವನೊಡನೆ ಮಾತನಾಡಿ ಆಯಾಸ ಗೊಂಡಿದ್ದಳು.

''ಓ..ಕೇ. ಈಗ ನೀವು ಹೋಗಿ. ನನ್ನ ಮೂಡ್ ಕೆಡಿಸಬೇಡಿ. ಇನ್ನೂ ಏಳೋ ಎಂಟೋ ತಿಂಗಳೋ ಸಮಯವಿದೆ. ನೀವು ಪದೇ ಪದೇ ಪೀಡಿಸಿದರೆ, ನನ್ನ, ನನ್ನ ಮಗುವಿನ ಹೆಲ್ತ್ ಕೆಡುತ್ತೆ. ಅದಕ್ಕೆ ಜವಾಬ್ದಾರಿ ನೀವೇ ಆಗ್ತೀರಿ...''

''ಭಾರ್ಗವ ಬಂದರೆ ಹತ್ತಿರ ಸೇರಿಸಬೇಡ... ನನ್ನ ಮಗುವಿಗೆ ಅಪಾಯ ವಾಗುತ್ತದೆ...'' ಧ್ರುವನ ತಲೆ ಕೆಟ್ಟಿದೆಯೆಂದೇ ಭಾವಿಸಿದಳು. ಹೇಗಾದರೂ ಸರಿ ಅವನನ್ನು ಹೊರಕ್ಕೆ ಕಳಿಸಬೇಕಾಗಿತ್ತು.

ತಲೆ ಸುತ್ತಿ ಬವಳಿ ಬಂದವಳಂತೆ ಮಂಚದ ಮೇಲೆ ಬಿದ್ದುಬಿಟ್ಟಳು. ಅವನು ಹೆದರಿ, ವಸುಧಾಳನ್ನು ಕರೆದ. ವಸುಧಾ ಒಳಗೆ ಬಂದಳು. ಅವನು ಹೊರಗೆ ಹೋದ. ಮಾಲಾ ವಸುಧಾಳ ಕಡೆ ನೋಡಿ ಕಣ್ಣು ಹೊಡೆದಳು.

''ಪ್ಲೀಸ್... ಈಗ ನೀವುಗಳು ಹೋಗಿ ಅವಳಿಗೆ ಆಯಾಸವಾಗಿದೆ. ಡಾಕ್ಟರಿಗೆ ಫೋನು ಮಾಡಬೇಕು.'' ಡಾಕ್ಟರು ಎಂಬ ಹೆಸರು ಕೇಳಿದೊಡನೆ ಧ್ರುವ ಬೆವತು ಹೋದ. ''ನಡೀ ಪ್ರತಾಪ ಇಲ್ಲಿಂದ'' ಅವನ ಕೈ ಎಳೆದ. ಧ್ರುವನ ಅಸಹಾಯಕತೆಗೆ ಪ್ರತಾಪ ಪೆಚ್ಚಾದ. ತಾನು ಮಾತನಾಡಲಿಲ್ಲವೆಂಬ ಅಸಮಾಧಾನವೂ ಕಣ್ಣಲ್ಲಿತ್ತು. ಬರ್ತೀವಿ ಎಂದೂ ಸಹ ಹೇಳದೇ ಅಲ್ಲಿಂದ ಇಬ್ಬರೂ ಹೊರಬಿದ್ದರು.

ಪ್ರತಾಪನಿಂದ ಮಾಲಾಳಿಗೆ ಏನಾದರೂ ಅಪಾಯ ಒದಗಬಹುದು ಎಂಬ ಅನುಮಾನ ವಸುಧಾಳ ತಲೆಯಲ್ಲಿ ಹೊಕ್ಕಿತು. ಅದೇ ದಿನ, ಮಂಗಳೂರಿನಲ್ಲಿರುವ ತನ್ನ ಚಿಕ್ಕಮ್ಮನೊಡನೆ ಮಾತನಾಡಿ, ಮಾಲಾಳನ್ನು ಅಲ್ಲಿಗೆ ಕಳಿಸುವ ಏರ್ಪಾಟು ಮಾಡಿದಳು.

* * * *

ನವಮಾಸಗಳು ತುಂಬುವವರೆಗೂ ಮಾಲಾ ಅಲ್ಲಿ ಆರಾಮವಾಗಿದ್ದಳು. ಆಗಾಗ್ಗೆ ಭಾಸ್ಕರ ನೆನಪಿಗೆ ಬರುತ್ತಿದ್ದ. ಹೊಟ್ಟೆಯಲ್ಲಿ ಮಗು ಮಿಸುಕಾಡುವಾಗ ಮಗು ಯಾರ ಹಾಗೆ ಇರಬಹುದು ಎಂಬ ಕುತೂಹಲ ಮೂಡುತ್ತಿತ್ತು. ನಿಲುವುಗನ್ನಡಿಯ ಮುಂದೆ ನಿಂತು ತನ್ನ ಉಬ್ಬಿದ ಹೊಟ್ಟೆಯನ್ನು ನೋಡಿಕೊಳ್ಳುವಾಗ, ಅವಳಿ ಮಕ್ಕಳು ಹುಟ್ಟಿದರೆ ಎಷ್ಟು ಚೆನ್ನ ಎಂದುಕೊಳ್ಳುತ್ತಿದ್ದಳು. ಒಂದು ತನ್ನಂತೆ... ಇನ್ನೊಂದು ಭಾಸ್ಕರನಂತೆ. ಹೆಣ್ಣು... ಗಂಡು... ಭಾಸ್ಕರನೇಕೆ ನನ್ನನ್ನು ಭೇಟಿಯಾಗಲಿಲ್ಲ? ಧ್ರುವನ ಹೆದರಿಕೆಯಿರಬಹುದೇ?

ಅವಸು ಬಾಂಬೆಗೆ ಹೊರಟುಹೋದ ಅಂತ ವಸುಧಾ ತಿಳಿಸಿದಳು. ಬಾಂಬೆಗೆ ಫೋನು ಮಾಡುವಂತಿಲ್ಲ. ನಾನು ಇಲ್ಲಿ ಇರುವ ವಿಷಯ ಧ್ರುವನಿಗೆ ತಿಳಿಯಬಾರದು. ಈ ಆಲೋಚನೆಗಳಲ್ಲೇ ದಿನಗಳು ಕಳೆದು, ತಿಂಗಳುಗಳು ಸರಿದವು. ದಿನದಿನಕ್ಕೆ ಬಸಿರು ಬೆಳೆಯಿತು. ಅವಳ ಹೆರಿಗೆಯ ದಿನ ಸಮೀಪಿಸಿತು ಅನ್ನೋವಾಗ ವಸುಧಾ ತನ್ನ ಚಿಕ್ಕಮ್ಮನ ಮನೆಗೆ ಬಂದಳು. ಎಂಟು ದಿನಗಳ ನಂತರ ಮಾಲಾ ಮುದ್ದಾದ ಗಂಡು ಮಗುವಿಗೆ ಜನ್ಮವಿತ್ತಳು. ಮಗುವಿನ ಮುಖವನ್ನು ಕಂಡು ಅವಳ ಆತಂಕಗಳು ಹಾರಿಹೋಗಿದ್ದವು. ತನ್ನ ಛಲಕ್ಕೆ ಪ್ರತಿಫಲ ಸಿಕ್ಕಿತು. ಭಾಸ್ಕರನಿಗೆ ಮನದಲ್ಲೇ ಥ್ಯಾಂಕ್ಸ್ ಹೇಳಿದಳು. ''ನೀನು ಹೇಳು ವಸುಧಾ... ಇವನು ಯಾರ ಹಾಗೆ? ನನ್ನ ಹಾಗೋ ಭಾಸ್ಕರನ ಹಾಗೋ... ಭಾಸ್ಕರನ ಬಲಗೆನ್ನೆಯ ಮೇಲೆ ಆಳವಾದ ಗುಳಿ ಬೀಳುತ್ತಿತ್ತು. ಅದೇ ತರಹ ಇವನಿಗೂ ಬಲಗೆನ್ನೆ ಮೇಲೆ ಗುಳಿ ಇದೆ ನೋಡಿದ್ಯಾ! ಭಾಸ್ಕರನಿಗೆ ತಿಳಿದರೆ ಖಂಡಿತಾ ಖುಷಿ ಪಡ್ತಾರೆ. ಅವರಿಗೆ ನಾನು ಪ್ರೆಗ್ನೆಂಟ್ ಅಂತ ಕೂಡಾ ತಿಳಿಯಲಿಲ್ಲ. ನನ್ನನ್ನು ಅಷ್ಟು ಪ್ರೀತಿಸುತ್ತಿದ್ದರು. ಆದರೆ ಬಾಂಬೆಗೆ ಹೋಗಿ ಮರತೇಬಿಟ್ಟರು. ಹಾಗೆ ಯಾಕೆ ಅಂತ? ಅವರು ಮರೆತರೂ ನಾನು ಮರೆಯೋಕೆ ಆಗುತ್ತಾ... ಮರೆಯಲಾಗದ ಕಾಣಿಕೆ ಭಾಸ್ಕರನಿಂದ ನನಗೆ'' ಎಂದು ರಾಗವಾಗಿ ಹೇಳಿಕೊಂಡು ಮಗುವನ್ನು ಮುದ್ದಿಸಿದಳು. ವಸುಧಾ ತಾಯಿ-ಮಗುವನ್ನೇ ತದೇಕವಾಗಿ ನೋಡಿದಳು. ಮಾಲಾ ಅವಳನ್ನೇ ಗಮನಿಸಿದಳು. ಅವಳ ಕಣ್ಣುಗಳಲ್ಲಿ ತಾಯ್ತನದ ಹೊಳಪನ್ನು ಗುರುತಿಸಿದಳು. ಅವಳ ಬಗ್ಗೆ ಮರುಕವಾಯ್ತು. ಅವಳ ಕೈ ಹಿಡಿದಳು. ''ಸ್ಸಾರಿ... ನಿನಗೆ ನಿನ್ನ ಪ್ರೆಗ್ನೆನ್ಸಿಯ ದಿನಗಳು ನೆನಪಿಗೆ ಬರ್ತಾ ಇದೆ ಅಲ್ವಾ?''

''ಹಾಗೇನಿಲ್ಲ... ಇನ್ನೇನೋ ಯೋಚಿಸ್ತಿದ್ದೆ.''

''ಮಧು ಬರ್ತಾನೆ ಅಲ್ವಾ ಈ ತುಂಟನ್ನ ನೋಡೋಕೆ... ನೋಡ್ತಿರು ಇವನನ್ನ ಕಂಡ ಕೂಡಲೇ ಅವನಿಗೆ ನನ್ನ ಮೇಲಿನ ಕೋಪವೆಲ್ಲಾ ಹಾರಿಹೋಗುತ್ತೆ.''

''ಹೂಂ... ಹೂಂ...'' ಎಂದು ವಸುಧಾ ತಲೆಯಾಡಿಸಿದಳು. ಅವಳ ಧ್ಯಾನ ಎಲ್ಲೋ ಇತ್ತು. ಹತ್ತು ದಿನಗಳ ಮೊದಲೇ ಭಾರತಿಗೆ ಗಂಡುಮಗುವಾದ ಸುದ್ದಿಯನ್ನು ತಿಳಿಸಿ ಮಾಲಾಳ ಬಗ್ಗೆ ವಿಚಾರಿಸಿದ್ದ ಭಾಸ್ಕರ. ಅಚಾತುರ್ಯವೋ, ಅನಿರೀಕ್ಷಿತವೋ ಎರಡು ಮಕ್ಕಳಿಗೆ ತಂದೆ! ಧ್ರುವ ಸಹ, ಮಾಲಾ ಎಲ್ಲೇ ಇದ್ದರೂ ಪತ್ತೆಹಚ್ಚಿ, ಮಗುವನ್ನು ಅಪಹರಿಸುವುದಾಗಿ ಬೆದರಿಕೆ ಹಾಕಿದ್ದ. ಭಾಸ್ಕರ ಜನ್ಮಕೊಟ್ಟ ತಂದೆ, ಅವನಿಗೆ ಈ ಹೊಸ ಸುದ್ದಿಯನ್ನು ತಿಳಿಸಲೇಬೇಕೆಂದುಕೊಂಡು ಹೊರಬಂದು ಅವನು ಕೊಟ್ಟ ನಂಬರಿಗೆ ಫೋನು ಮಾಡಿ ವಿಷಯವನ್ನು ತಿಳಿಸಿದಳು. ಅವನು ಉತ್ಸಾಹಗೊಂಡಿದ್ದ.

''ಮಗು ಹೇಗಿದೆ? ಆರೋಗ್ಯವಾಗಿದೆ ತಾನೇ? ಯಾರನ್ನು ಹೋಲುತ್ತದೆ?'' ಎಂದೆಲ್ಲಾ ವಿಚಾರಿಸಿದ. ''ಮಾಲಾಳಂತೆ ಸುಂದರವಾಗಿದೆ ಅಂತ ಅಂದುಕೊಂಡಿದೀನಿ.''

''ಎಲ್ಲಾ ನಿಮ್ಮ ಹಾಗೇ ಅಂತ ಮಾಲಾ ಹೇಳ್ತಾಳೆ. ಒಂದು ವಿಶೇಷ, ಮಗೂ ನಕ್ಕಾಗ ಅದರ ಬಲಗೆನ್ನೆಯ ಮೇಲೆ ಗುಳಿ ಬೀಳುತ್ತದೆ. ಅತಿ ಮುದ್ದಾಗಿದೆ...''

"ಹೌದಾ? ಭಾರತಿಗೆ ಹುಟ್ಟಿರುವ ಮಗೂ ಸಹ ನನ್ನ ಹಾಗೇ ಇದೆ. ಆ ಮಗುವಿಗೂ ಸಹ ನಕ್ಕರೆ ಕೆನ್ನೆಯ ಮೇಲೆ ಗುಳಿ ಬೀಳುತ್ತದೆ" ಎಂದು ಖುಷಿಯಿಂದ ಹೇಳಿಕೊಂಡಿದ್ದ. ಆ ವಿಸ್ಮಯಕ್ಕೆ ವಸುಧಾ ಬೆರಗಾಗಿದ್ದಳು. ಒಂದೇ ರೀತಿಯ ಎರಡು ಮಕ್ಕಳಿಗೆ ಜನ್ಮದಾತ! "ನನ್ನ ಎರಡೂ ಮಕ್ಕಳ ನಡುವೆ ಕೇವಲ ಹತ್ತು ದಿನಗಳ ಅಂತರ... ಅವಳಿ ಮಕ್ಕಳಂತೆ... ನನಗೆ ಒಮ್ಮೆ ಮಗುವನ್ನು ನೋಡಬೇಕೆನಿಸಿದೆ." ಆಸೆಯನ್ನು ವ್ಯಕ್ತಪಡಿಸಿದ.

"ಅದು ಸದ್ಯಕ್ಕೆ ಸಾಧ್ಯವಿಲ್ಲ. ಧ್ರುವ ಬೆದರಿಕೆ ಹಾಕಿದ್ದರಿಂದ ಮಾಲಾಳನ್ನು ಯಾರಿಗೂ ಗೊತ್ತಾಗದಂತೆ ಅಜ್ಞಾತದಲ್ಲಿ ಇಟ್ಟಿದ್ದೇವೆ. ಮುಂದೆ ಎಂದಾದರೂ ನೋಡೋಣ" ಎಂದು ಹೇಳಿ, "ನಿಮ್ಮನ್ನು ಮಾಲಾ ಆಗಾಗ್ಗೆ ನೆನಪಿಸಿಕೊಳ್ತಾಳೆ. ನಿಮ್ಮ ಮೇಲೆ ಬೇಸರವೂ ಇದೆ. ಆದರೆ ನಿಮಗೆ ತುಂಬಾ ಕೃತಜ್ಞಳೂ ಆಗಿದ್ದಾಳೆ" ಎಂದು ಹೇಳಿದಳು.

ಊರಿಗೆ ಬಂದ ಮಧು, ವಸುಧಾಳ ಬಲವಂತಕ್ಕೆ ಮಗುವಿನ ಮುಖವನ್ನು ನೋಡಿದ. ಮಗು ಮುಗುಳ್ನಕ್ಕಂತೆ ಅನ್ನಿಸಿತು. ಬಲಗೆನ್ನೆಯ ಮೇಲೆ ಮೂಡಿದ ಗುಳಿ ಅವನನ್ನು ಆಕರ್ಷಿಸಿತು. ಮುದ್ದಾದ ಮುಖವನ್ನೇ ಮತ್ತೆ ಮತ್ತೆ ನೋಡಿದ. ಮಾಲಾ ಅವನನ್ನೇ ಗಮನಿಸಿದಳು. ಅವನ ಮುಖದಲ್ಲಿ ನೋವಿನ ಗೆರೆಗಳು ಮೂಡಿದ್ದವು.

"ಈಗಲೂ ನನ್ನ ಮೇಲೆ ಕೋಪಾನಾ?" ತಮಾಷೆಯಾಗಿ ಕೇಳಿದಳು.

"ನನ್ನ ಮೇಲೆ ನನಗೆ ಕೋಪ... ಇಷ್ಟಕ್ಕೆಲ್ಲಾ ನಾನೇ ಕಾರಣ ಅಲ್ವಾ?"

"ಸದ್ಯ ಈಗಲಾದ್ರೂ ಅರ್ಥವಾಯ್ತಲ್ಲಾ... ಕೆಟ್ಟಮೇಲೆ ಬುದ್ಧಿ ಬಂತು.." ಮಧು ಉತ್ತರಿಸದೇ ಹೊರಹೋಗಿ ಬಾಗಿಲಾಚೆ ನಿಂತ. ವಸುಧಾಳ ಮೇಲೆ ಮರುಕ ಉಕ್ಕಿತು.

"ಅವನಿಗೆ ಈಗ ರಿಗ್ರೆಟ್ ಆಗ್ತಿರಬಹುದು ಅಲ್ವಾ? ತನಗೂ ಇಂಥದ್ದೇ ಒಂದು ಮಗು ಇದ್ದಿದ್ರೆ ಅಂತ ಖಂಡಿತಾ ಅನ್ನಿಸಿರುತ್ತೆ ಅಲ್ವಾ?" ವಸುಧಾ ಮಂಕಾಗಿದ್ದಳು.

"ಏನೋ ನಂಗೊತ್ತಿಲ್ಲ, ಆ ದುರ್ಘಟನೆಯ ನಂತರ ಒಂದು ದಿನವೂ ಆ ಬಗ್ಗೆ ಮಾತನಾಡಿಲ್ಲ." ವಸುಧಾಳ ಕಣ್ಣುಗಳು ತೇವಗೊಂಡವು. ಧ್ವನಿ ಗದ್ಗದವಾಗಿತ್ತು. ಹೊರಬಾಗಿಲಲ್ಲಿದ್ದ ಮಧು ಕಣ್ಣುಗಳನ್ನು ಒರೆಸಿಕೊಂಡು ಒಳಬಂದ. ಇಬ್ಬರೂ ಅವನನ್ನೇ ನೋಡಿದರು.

ಎರಡು ದಿನಗಳ ನಂತರ ಮಧು ವಾಪಸ್ಸು ಹೊರಟ. ಹೊರಡುವ ಮೊದಲು ಮಗುವನ್ನು ಮುದ್ದಿಸಿದ. ತಂಗಿಯ ಕೈ ಹಿಡಿದು ಕ್ಷಮೆ ಕೇಳಿದ. "ತಿಳಿದೂ ತಿಳಿದೂ ನಿನ್ನ ಮನಸ್ಸನ್ನು ಅನೇಕ ಸಾರಿ ನೋಯಿಸಿದ್ದೀನಿ... ನನ್ನನ್ನು ಕ್ಷಮಿಸು. ನನ್ನಿಂದ ವಸುಧಾಳಿಗೂ ಅನ್ಯಾಯವಾಗಿದೆ. ಆದರೆ ನಿನ್ನ ಧೈರ್ಯ ಅವಳಿಗಿಲ್ಲ. ತಾಯಿಯಾಗಲಿಲ್ಲವಲ್ಲ ಅಂತ ಒಂದು ದಿನವೂ ನನ್ನೊಡನೆ ಮುನಿಸು ತೋರಿದ್ದನ್ನು ನಾನು ಕಾಣಲಿಲ್ಲ. ನಿನ್ನ ಆಸೆಯನ್ನು ನೀನೇ

ಪೂರೈಸಿಕೊಂಡೆ. ಅವಳು... ಪಾಪ... ಪೂರ್‌ಲೇಡಿ...'' ಎಂದು ಮುಂದೆ ಹೇಳಲಾಗದೇ ಸುಮ್ಮನಾದ.

''ಬರೀ ಅವಳ ಬಗ್ಗೆ ಹೇಳ್ತೀಯಲ್ಲ, ನಿನಗೂ ಆ ವ್ಯಥೆಯಿದೆ ಅಲ್ವಾ?... ಅವಳ ದುಃಖ ನಿನ್ನ ವ್ಯಥೆ ಎರಡೂ ನನಗೆ ಅರ್ಥವಾಗಿದೆ. ಅನುಭವಗಳಿಂದ ಈಗ ನಾನೂ ಬೆಳೆದುಬಿಟ್ಟಿದೀನಿ. ಯೋಚಿಸಿ ಯೋಚಿಸಿ ನಾನು ಒಂದು ತೀರ್ಮಾನಕ್ಕೆ ಬಂದಿದೀನಿ. ಆದರೆ ನೀನು ತರಲೆ ಮಾಡಬಾರದು.'' ಮಧುಗೆ ಎಚ್ಚರಿಕೆ ನೀಡಿದಳು. ಇಬ್ಬರೂ ವಿಚಿತ್ರವಾಗಿ ನೋಡಿದರು.

''ಈ ಮಗುವನ್ನು ನಾನು ನನ್ನ ಸ್ವಂತ ಇಚ್ಛೆಯಿಂದ ವಸುಧಾಳಿಗೆ ಕೊಟ್ಟಿದ್ದೇನೆ ನೀನು ಬೇಡ ಅನ್ನಬಾರದು'' ಎನ್ನುತ್ತಾ ವಸುಧಾಳ ಮಡಿಲಿಗೆ ಮಗುವನ್ನು ಹಾಕಿದಳು. ವಸುಧಾ ಭಾವುಕಳಾದಳು.

''ಬೇಡ ಮಾಲಾ... ಅನೇಕ ಸಂಘರ್ಷಣೆಗಳ ನಡುವೆಯೂ ನೋವು ನಲಿವನ್ನು ಅನುಭವಿಸಿ, ಹೊತ್ತು, ಹೆತ್ತವಳು ನೀನು. ಸಂಪೂರ್ಣ ಹಕ್ಕು ನಿನ್ನದು...''

''ನಿನ್ನ ಸಪೋರ್ಟ್ ಇಲ್ಲದಿದ್ದರೆ ಇವನು ಭೂಮಿಗೇ ಬರುತ್ತಿರಲಿಲ್ಲ... ಭೂಮಿಗೆ ಬಂದ ಈ ಕಂದನ ತಾಯಿ ನಾನೇ ಆದರೂ ಇನ್ನು ಮುಂದೆ ನೀನೇ ತಾಯಿ. ನಾನು ದೇವಕಿ, ನೀನು ಯಶೋದೆ, ದೇವಕಿಯ ಕಂದ ಇನ್ನು ಮುಂದೆ ಯಶೋದೆಯ ಮುದ್ದಿನ ಗೋಪಾಲ... ಈ ಅಜ್ಞಾತವಾಸದಿಂದ ಇವನನ್ನು ಬಿಡುಗಡೆ ಮಾಡಿ...''

''ಇವನಿಲ್ಲದೇ ಹೇಗೆ ಇರ್ತೀಯ?'' ವಸುಧಾ ಪ್ರಶ್ನಿಸಿದಳು.

''ನನಗೆ ಒಂದು ಮಗು ಹುಟ್ಟಲಿ ಅನ್ನೋ ಅಪೇಕ್ಷೆಯೇನೂ ಇರಲಿಲ್ಲ. ಆದರೆ ಕನ್ಸೀವ್ ಆದ ಮೇಲೆ ಅಕ್ಸೆಪ್ಟ್ ಮಾಡಿಕೊಂಡೆ. ಮಧು ಬದಲಾಗದೇ ಇದ್ದಿದ್ರೆ, ಅದೇ ಬೇರೆ ಮಾತು. ಎಲ್ಲರ ಮೇಲಿದ್ದ ಪ್ರತೀಕಾರದ ಹಂಬಲ, ತಾಯಿಯಾದ ಮೇಲೆ ಮರೆತುಹೋಗಿದೆ. ಧ್ರುವನ ಕೈಗೆ ಈ ಮಗು ಸಿಗದಿರಬೇಕಾದರೆ, ಈಗ ಒಂದೇ ದಾರಿ... ವಸುಧಾಳೇ ಜನ್ಮ ನೀಡಿದಳು ಎಂದು ಹೇಳಿದರಾಯ್ತು. ನನಗೆ ಈ ಅಜ್ಞಾತವಾಸವೇ ಅಭ್ಯಾಸವಾಗಿದೆ. ನಾನು ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರಿಕೊಳ್ತೀನಿ.''

''ಮತ್ತೆ ಮದುವೆಯಾಗೋದಾದ್ರೆ ಖಂಡಿತಾ ಹೇಳು... ಒಂಟಿಯಾಗಿರಬೇಡ''

''ಮದುವೆಯ ಆಸೆಯೇ ಹೊರಟುಹೋಗಿದೆ. ನಾನು ಪ್ರೀತಿಸಿದ ಭಾರ್ಗವ ನನ್ನ ಪತಿಯಾಗಲಿಲ್ಲ. ಪತಿಯಾದವನನ್ನು ನಾನು ಪ್ರೀತಿಸಲಿಲ್ಲ. ನನಗೆ ತಾಯಿಯ ಪದವಿಯನ್ನು ಕೊಟ್ಟವನಿಗೆ ನಾನು ಪತ್ನಿಯಾಗಲಿಲ್ಲ. ಇದೇ ನನ್ನ ಬಾಳಿನ ದುರಂತ...'' ಅವಳ ಕಣ್ಣಿನಿಂದ ಒಂದೇ ಒಂದು ಹನಿ ನೀರು ಉದುರಲಿಲ್ಲ. ಮರುಳು ನಗೆಯನ್ನು ನಕ್ಕ ಮಗುವಿನ ಕೆನ್ನೆಯ ಮೇಲೆ ಸುಂದರ ಗುಳಿ ಮೂಡಿತು. ಮುದ್ದಿಸುವ ಚಪಲವನ್ನು ತಡೆದುಕೊಂಡಳು.

*********

'ನಿನ್ನವರು ಯಾರು ಈ ಮೂವರೊಳಗೆ...?' ಒಂದು ಸಾಮಾಜಿಕ ಕಾದಂಬರಿ. ಒಂದು ಕುಟುಂಬದ ದಿಟ್ಟ ಹೆಣ್ಣಿನ ಸುತ್ತ ಹೆಣೆದಿರುವ ಕತೆ. ಹೆಣ್ಣು ಎಂದೊಡನೆ, ತನ್ನ ಆಸೆಗಳನ್ನೆಲ್ಲಾ ಅದುಮಿಟ್ಟುಕೊಂಡು, ನರಳುವವಳಲ್ಲ ಅಥವಾ ಬಣ್ಣದ ಚಿಟ್ಟೆಯಂತೆ ಹೂವಿನಿಂದ ಹೂವಿಗೆ ಹಾರುವವಳೂ ಅಲ್ಲ. ತನಗೆ ಸರಿ ಎನಿಸಿದ್ದನ್ನು ಮಾಡುವವಳು, ನೋವಿನಲ್ಲೂ ನಲಿವನ್ನು ಹುಡುಕುವವಳು. ಅಂತಹ ಒಬ್ಬ ಯುವತಿಯ ನೋವು-ನಲಿವೇ ಈ ಕಾದಂಬರಿಯ ಕಥಾವಸ್ತು.

ಈ ಕಥಾನಾಯಕಿಯ ನೋವು-ನಲಿವು ಒಂದು ಸಾಮುಜಿಕ ಸಮಸ್ಯೆ ಅಲ್ಲ. ಆದರೆ ಇಂತಹ ಹೆಣ್ಣುಮಕ್ಕಳು ಇಲ್ಲ ಎನ್ನುವುದನ್ನು ಅಲ್ಲಗಳೆಯುವಂತೆಯೂ ಇಲ್ಲ. ಈ ಯುಗದಲ್ಲಿ ಅನೇಕ ಹೆಣ್ಣು ಮಕ್ಕಳು ಅನೇಕ ತರಹದ ಪೇಚಾಟ, ತೊಂದರೆಗಳಿಗೆ ಸಿಕ್ಕಿಬೀಳುತ್ತಾರೆ. ಅನೇಕ ದುರಂತಗಳು ನಡೆಯುತ್ತವೆ.

ಕಥಾನಾಯಕಿಯು ಹೇಗೆ ಎಲ್ಲ ತೊಂದರೆ ಮತ್ತು ದುರಂತಗಳಿಂದ ಹೊರಬರುತ್ತಾಳೆ ಎನ್ನುವುದನ್ನು ಲೇಖಕರು ಈ ಕಾದಂಬರಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

